# ಕಮಲಾಕಾಂತಸಾಧು.

(ಸಾಮಾಜಿಕ ಕಥೆ)

ಲೇಖಕ:

**ಭಿ. ಪ. ಕಾಳೆ,**

ಆನಂದವನ.

ಪ್ರಕಾಶಕ:

**ಯಲ್ಲೋ ಗುಡ್ಡೋ ಕುಲಕರ್ಣಿ,**

ಸಂಪಾದಕ, ಸದ್ಬೋಧ ಚಂದ್ರಿಕೆ,

ಆನಂದವನ ಅಗಡಿ

ಇದನ್ನು ಭಿ. ಪ. ಕಾಳೆ ಇವರು ಆನಂದವನ ಅಗಡಿಯೊಳಗಿನ
ತಮ್ಮ ಶ್ರೀ ಶೇಷಾಚಲ ಪ್ರೆಸ್ಸಿನಲ್ಲಿ ಮುದ್ರಿಸಿದರು.

# ಮುನ್ನುಡಿ

ಸಾಧು-ಸತ್ಪುರುಷರು ಪರಮೇಶ್ವರನ ಅಂಶಾವತಾರಿಕರು. ಅವರಿಂದ ಜಗತ್ತಿನ ಕಲ್ಯಾಣವೇ ಆಗುವದಲ್ಲದೆ, ಕೇಡು ಮಾತ್ರ ಸರ್ವಥಾ ಆಗಲಾರದು. ಸಾಧು ಸತ್ಪುರುಷರಿರುವರೆಂದೇ ಜಗತ್ತಿನ ಆಟವು ಸುಸೂತ್ರವಾಗಿ ನಡೆದಿರುತ್ತದೆ. ಸಾಧು ಸತ್ಪುರುಷರು ತಪ್ಪಿ ನಡೆಯುವ ಸಾಂಸಾರಿಕರಿಗೆ ಮಾರ್ಗದರ್ಶಕರಾದ ಹಿತಕರ್ತರ ಅಂತೆಯೇ ಪ್ರಾಚೀನಕಾಲದಿಂದಲೂ ಸಾಧು-ಸತ್ಪುರುಷರನ್ನು ಪ್ರತಿ ದೇವರಂ ಭಯಭಕ್ತಿಗಳಿಂದ ಕಾಣುವದು ಎಲ್ಲ ದೇಶ-ಧರ್ಮಗಳಲ್ಲಿಯೂ ಕಂಡು ಬರುತ್ತ ಆದರಲ್ಲಿಯೂ ನಮ್ಮ ಹಿಂದುಗಳು ಸಾಧು-ಸತ್ಪುರುಷರನ್ನು ಆದರಿಸುತ್ತಿರುವ ಮತ್ತೂ ವಿಶೇಷವಾಗಿದೆ. ನಿಜವಾದ ಸತ್ಪುರುಷರನ್ನೂ ಸಾಧು-ಸಜ್ಜನರನು ಯಾರೂ ತಳ್ಳಿಗಳೆಯಲಾರರು. ಒಂದುವೇಳೆ ಅಂಥ ಬುದ್ಧಿಯು ಯಾವನೊಬ್ಬನಿ ಆಕಸ್ಮಿಕವಾಗಿ ಉಂಟಾದರೆ, ಅದರ ಅತಿರೇಕದಿಂದ ಆತನಿಗೆ ಕೇಡಾದರೂ ಉಂಟಾ ಬೇಕು; ಇಲ್ಲವೆ ಆತನಲ್ಲಿ ಕ್ಷಿಪ್ರವೇ ಉಪರತಿಯುಂಟಾಗಿ, ಆತನು ಆ ಸತ್ಸಹವಾಸ ಯೋಗದಿಂದ ಬೇಗನೆ ಸುಜನನಾದರೂ ಆಗಬೇಕು. ಇಂಥ ಉದಾಹರಣೆಗಳ ನಮ್ಮ ಪುರಾಣ-ಪುಣ್ಯಕಥೆಗಳಲ್ಲಿ ಬೇಕಾದಷ್ಟಿರುತ್ತವೆ.

ನಿಜವಾದ ಸತ್ಪುರುಷರು ಅಥವಾ ಸಾಧು-ಸಜ್ಜನರು ಜನರಿಗೆ ಉ ಕಾರಿಗಳೇ ವಿನಃ ಅಪಕಾರಿಗಳಲ್ಲವೆಂಬುದು ಸತ್ಯಸಿದ್ಧಾಂತವಿರುವಂತೆ, ವೇಷಧಾ ಗಳಾದ ನಕಲೀ ಅಥವಾ ಕಸಬುದಾರ ಸಾಧು-ಸತ್ಪುರುಷರು ಮಾತ್ರ ಜನ ಚಿತ್ತ, ವಿತ್ತ, ವಿವೇಕ, ಪ್ರಜ್ಞೆಗಳನ್ನಪಹರಿಸಿ, ಅವರನ್ನು ಅಧೋಗತಿಗಿಳಿಸುವ ಪರಮ ನೀಚರೆಂಬದು ಸುಳ್ಳಲ್ಲ. ಇಂಥ ವೇಷಧಾರಿಗಳಿಂದ ಜನಾಂಗಕ್ಕೆ ಎಷ್ಟು ಬಗೆಯ ಕೇಡಾಗುತ್ತದೆಂಬದನ್ನು ವರ್ಣಿಸಿ ಹೇಳುವದು ಅಶಕ್ಯವಾಗಿದೆ. ಒಬ್ಬ ವೇಷಧಾ ಸತ್ಪುರುಷನು ಜನರನ್ನು ಕರ್ತವ್ಯಮೂಢರನ್ನಾಗಿ ಮಾಡಿ ಕೇವಲ ಭಂಗೀ ಸೇ ಹಚ್ಚಿ-ತಾಳಕಟಿಯ ಹಚ್ಚಿ-ದರೆ, ಇನ್ನೊಬ್ಬ ಕಸಬುದಾರ ಸಾಧುವು ಜನರನ್ನು ಪ್ರಜ್ಞಾ ಹತರನ್ನಾಗಿ ಮಾಡಿ ಅವರ ಧನ-ಕನಕಗಳನ್ನೂ ಸ್ತ್ರೀಯರನ್ನೂ ಹರಣ ಮಾ ತ್ತಿರುವನು. ಬೇರೊಬ್ಬನು ತನ್ನ ಶಿಷ್ಯವರ್ಗವನ್ನು ತನ್ನಂತೆಯೇ ಕಸಬುದಾ ಸಾಧುವೃತ್ತಿಗೆ ಪ್ರವೃತ್ತಗೊಳಿಸಿದರೆ, ಮಗದೊಬ್ಬನು ಮತ್ತೇನನ್ನಾದರೂ ಬೋ ಸುತ್ತ ತನ್ನ ಭಕ್ತವೃಂದವನ್ನು ವಿವೇಕಭ್ರಷ್ಟರನ್ನಾಗಿ ಮಾಡುವನು.

ಜನರು ದೇವರನ್ನು ಅಥವಾ ಸಾಧು-ಸಜ್ಜನ-ಸತ್ಪುರುಷರನ್ನು ತಮ್ಮ ನಾ ವಿಧದ ಕಾಮನೆಗಳ ಪೂರ್ತಿಯ ಆಶೆಯಿಂದ ಭಜಿಸತೊಡಗುತ್ತಾರೆ. ಆರ್ತರು ಜಿಜ್ಞಾಸುಗಳೂ, ಅರ್ಥಾರ್ಥಿಗಳೂ ತಮ್ಮ ಇಚ್ಛಾಪೂರ್ತಿಯ ಮಟ್ಟಿಗೆ ಭಜಿಸುತ್ತಿ ವಂತೆ ಜ್ಞಾನಿಗಳು ಭಜಿಸುವದಿಲ್ಲ. ಅವರು ಕೇವಲ ತಮ್ಮ ಜ್ಞಾನಲಾಲಸಾ ತೃ ಗಾಗಿಯೇ ಸತ್ಪುರುಷರನ್ನು ಮೊರೆಹೊಗುವರು. ಮಿಕ್ಕ ತ್ರಿವರ್ಗದವರು ತಮ ಕಾಮನೆಗಳ ತೃಪ್ತಿಗಾಗಿ ದೇವರನ್ನಾಗಲಿ ಸಾಧು-ಸಜ್ಜನ-ಸತ್ಪುರುಷರನ್ನಾಗ

ಭಜಿಸುವಾಗ ತಾವು ತಮ್ಮ ಭಜಕರಿಗೆ ಏನೂ ಕೊಡದ ಹೊರತು ಅವರು ತಮ್ಮ ಇಷ್ಟಾರ್ಥಗಳನ್ನು ಪೂರೈಸಲಾರರೆಂಬದನ್ನು ಮರೆತು ಬಿಡುತ್ತಾರೆ. ಈ ಜಗತ್ತಿನಲ್ಲಿ ಪ್ರತಿಫಲವಿಲ್ಲದೆ ಯಾವನೂ ಹೆರವರಿಗೆ ಏನೂ ಕೊಡಲಾರನು. ಪ್ರತ್ಯಕ್ಷ ದೇವರು ಕೂಡ ಜನರು ತನ್ನನ್ನು ಏಕೋಭಾವದಿಂದ ಭಜಿಸಿದರೆ ಮಾತ್ರ ಅವರ ಕಡೆಗೆ ಕಣ್ಣೆತ್ತಿ ನೋಡುವನು. ಸತ್ಪುರುಷರಾದರೂ ನಿಜಭಕ್ತರನ್ನೇ, ಅಂದರೆ ಯಾರು ಸ್ವದೇಹ-ಸ್ನೇಹಗಳ ಪರಿವೆ ಹಿಡಿಯದೆ, ಅವರಲ್ಲಿ ಸದ್ಭಾವನಾಪೂರ್ವಕ ದೃಢ ಭಕ್ತಿಯಿಂದ ಭಜಿಸುವರೋ ಅವರನ್ನೇ ಉದ್ಧರಿಸುವರು. ತಮ್ಮನ್ನು ಭಜಿಸದವರ ಕಡೆಗೆ ಅವರ ದೃಷ್ಟಿಯೇ ಇರುತ್ತಿರುವದಿಲ್ಲ.

ಇನ್ನು ದೇವರಾಗಲಿ ಸತ್ಪುರುಷರಾಗಲಿ ಎಲ್ಲ ಭಕ್ತರಿಗೂ ಸಕಲೈಶ್ವರ್ಯಗಳನ್ನೂ ಅಖಂಡಾಯುರಾರೋಗ್ಯಗಳನ್ನೂ ಕೂಡಲೆ ದಯಪಾಲಿಸುತ್ತಾರೆಂತಲ್ಲ. ಯಾವಾತನ ಪೂರ್ವಕರ್ಮವು (ಸುಕೃತವು)ಫಲಹೊಂದಲಿಕ್ಕೆ ಅರ್ಹವಾಗಿರುವದೋ ಅಂಥ ಒಬ್ಬಿಬ್ಬ ವ್ಯಕ್ತಿಗಳಿಗೆ ಮಾತ್ರ ದೇವ-ಸತ್ಪುರುಷರಿಂದ ಸತ್ಫಲಗಳು ಲಭಿಸುತ್ತವೆ. ಮಿಕ್ಕ ಎಷ್ಟೋ ಸತ್ಕರ್ಮರತರಾದ ಸುಜನ ಭಕ್ತರು ಇಹಜನ್ಮದಲ್ಲಂತೂ ನಾನಾ ವಿಧದ ಕಷ್ಟ-ನಷ್ಟಗಳಿಗೆ ಒಳಗಾಗುತ್ತ ತಮ್ಮ ಜೀವಿತಯಾತ್ರೆಯನ್ನು ಪೂರೈಸಿಕೊಳ್ಳಬೇಕಾಗುತ್ತದೆ. ಅದು ಏನೇ ಇರಲಿ, ದೇವರಾಗಲಿ ಸತ್ಪುರುಷರಾಗಲಿ ನಿಜ ಭಕ್ತನಿಗೆ ಕೂಡ ಒಮ್ಮೆಲೆ ಅನುಗ್ರಹಮಾಡುವವರಲ್ಲ. ಅಂದಮೇಲೆ ಸಾಧುವೇಷ ಧರಿಸಿದವರು ತಮ್ಮನ್ನು ಕೂಡಲೆ ಅನುಗ್ರಹಿಸಿ ತಮ್ಮ ಎಲ್ಲ ಇಷ್ಟಾರ್ಥಗಳನ್ನು ಪೂರೈಸುತ್ತಾರೆಂದು ತಿಳಿಯುವ ಮಾನವನ ಬಾಳಿಗೆ ಕರುಣೆಪಡಬೇಕಾಗುವದಲ್ಲದೆ ಮತ್ತೇನು? ಇಂಥ ಅವಿವೇಕ ಶಿಷ್ಯರು ದೊರೆತ ಬಳಿಕ ಕಸಬುದಾರ ಸಾಧು-ಸತ್ಪುರುಷರು ಅವರ ಸರ್ವಸ್ವವನ್ನೂ ಅನಾಯಾಸವಾಗಿ ಹರಣಮಾಡಬಾರದು? ಕಸಬುದಾರ ಸಾಧುಗಳ ಉದಯಕ್ಕೂ ಅವರ ಹೆಚ್ಚಳಕ್ಕೂ ಅವಿವೇಕರಾದ ಆತುರಿಕ ಜನರೇ ಕಾರಣರು. ಜನರು ವಿವೇಕಿಗಳಾಗಿದ್ದು ತಮ್ಮ ಪ್ರಜ್ಞೆಯನ್ನು ಯಾವ ವೇಷಧಾರಿ ಸಾಧು-ಸತ್ಪುರುಷರಲ್ಲಿಯೂ ಒತ್ತೆ ಇಡದಿದ್ದರೆ, ಅಂಥ ವೇಷಧಾರಿಗಳು ಬಾಳುವದೆಂತು?

ಲಾವಣ್ಯಸೌಂದರ್ಯ ತಾರುಣ್ಯನಾರೀ । ಚಾತುರ್ಯತಾ ಚಂಚಲ ಚಿತ್ತಹಾರೀ ।
ಏಕಾಂತಕಾಳೀ ಸಹಿತಾಸಮುಂಧೂ । ಅಭಿಲಾಷನಕರೀತೋಧನ್ಯಸಾಧು ॥ ೧ ॥

ಎಂದು ಸಮರ್ಥ ರಾಮದಾಸ ಸ್ವಾಮಿಗಳು ಸಾಧು-ಸತ್ಪುರುಷರನ್ನು ಒರೆಹಚ್ಚಿ ನೋಡುವ ಒಂದು ಬಹು ಸುಲಭೋಪಾಯವನ್ನು ಹೇಳಿರುತ್ತಾರೆ.

ಮನುಷ್ಯನು ಸ್ವಕರ್ಮನಿರತನಾಗಿ ವಿವೇಕ-ಪ್ರಜ್ಞೆಗಳನ್ನು ಮುಂದಿಟ್ಟುಕೊಂಡು ಬಾಳಿದರೆ, ಆತನ ಉದ್ಧಾರಕ್ಕೆ ಸಾಧು-ಸತ್ಪುರುಷರ ಅವಶ್ಯಕತೆಯೇ ಇರುವದಿಲ್ಲ. ಇನ್ನು ಒಂದು ವೇಳೆ ಅಂಥವನೊಬ್ಬನು ಬೇಕೆಂದೆನಿಸಿದರೆ, ಆ ಸತ್ಪುರುಷನನ್ನು ಮೇಲಿನ ಶ್ರೀಸಮರ್ಥೋಕ್ತಿಯಂತೆ ಚೆನ್ನಾಗಿ ಒರೆಹಚ್ಚಿ ಖಾತ್ರಿಮಾಡಿಕೊಳ್ಳುವದೇ ಮೇಲು. ಈ ಸದ್ಬುದ್ಧಿಯನ್ನು ಶ್ರೀ ಸದ್ಗುರುವು ಸರ್ವರಿಗೂ ಕೊಡಲಿ.

-ಲೇ.



# ನಿವೇದನ

ಈ ಕಥಾನಕವು ಕೇವಲ ಕಾಲ್ಪನಿಕವು. ಕೆಲ ವರ್ಷ ವರ್ಷಗಳಿಂದ ಈ ಪ್ರಾಂತ್ಯದಲ್ಲಿಯೂ ಮೈಸೂರ ದೇಶದಲ್ಲಿಯೂ ತನ್ನ ನಿಂದ್ಯ ಕೃತಿಗಳಿಂದ ಹಲವರ ಅಪವಾದಕ್ಕೆ ಪಾತ್ರನಾದ ಒಬ್ಬ ಕಸಬುದಾರ ಸಾಧುವಿನ ಹಲವು ನಿಂದ್ಯ ಕೃತಿಗಳನ್ನು ಕಣ್ಣುಟ್ಟಿ ನೋಡಿಯೂ ಕೇಳಿಯೂ ಸಹಿಸಲಾರದ ನಾನು, ನನ್ನ ಪ್ರಿಯ ಕನ್ನಡ ಬಂಧುಗಳನ್ನು ಅಂಥ ನೀಚ ಜನರಿಂದ ಎಚ್ಚರಗೊಳಿಸುವದಕ್ಕಾಗಿ ಈ ಕಟ್ಟುಕಥೆಯನ್ನು ಬರೆದು ಪ್ರಸಿದ್ಧಗೊಳಿಸಿರುತ್ತೇನೆ.

ಇದರೊಳಗಿನ ಪಾತ್ರಗಳೆಲ್ಲವೂ ಕಾಲ್ಪನಿಕಗಳಾಗಿದ್ದರೂ
ಸನ್ನಿವೇಶವು ಮಾತ್ರ ಹೃದಯದಲ್ಲಿ ನೆಟ್ಟ
ಅಘಾತಗಳ
ಪ್ರತಿರೂಪವಾಗಿದೆ.

---ಲೇಖಕ

# ಕಮಲಾಕಾಂತ-ಸಾಧು.

## ಹುಟ್ಟು ಗುಣವು ಹುಗಿದರೂ ಹೋಗದು.



ಸರಸಿಯು ಎಷ್ಟೇ ದುಷ್ಟೆಯಾಗಿದ್ದರೂ ಗಂಡನ ಜೀವಕ್ಕೆ ಅಪಾಯ ಮಾಡಬೇಕೆಂಬ ಉದ್ದೇಶದ ದುಷ್ಟ ಮನುಷ್ಯಳು ಅವಳಾಗಿರಲಿಲ್ಲ; ಆದರೆ ಹೇತುವು ದುಷ್ಟವಾಗಿರದಿದ್ದರೂ ಸಿಟ್ಟಿನ ಆವೇಶವು ಮನುಷ್ಯನ ಕೈಯಿಂದ ಬಹು ಭಯಂಕರವಾದ ಕೃತಿಯನ್ನುಂಟು ಮಾಡುತ್ತಿರುತ್ತದೆ. ಆ ಸಿಟ್ಟಿನ ಭರದಲ್ಲಿ ಒಮ್ಮೊಮ್ಮೆ ಕೊಲೆ-ಪಾತಕಗಳು ಕೂಡ ಆಗಿ ಹೋಗುತ್ತವೆ! ಸಿಟ್ಟಿನ ಆವೇಶದಲ್ಲಿ ಸರಸಿಯು ಆ ಆಭರಣದ ಡಬ್ಬಿಯನ್ನು ಬಿಸುಟುವಾಗ ಅದು ಭವಾನರಾಯನ ಮೈಮೇಲೆ ಬೀಳಬೇಕೆಂದು ಅವಳ ಉದ್ದೇಶವಾಗಿರಲಿಲ್ಲ. ಆಭರಣಗಳ ಅಭಾವದ ಸಿಟ್ಟಿನಿಂದ ಎಚ್ಚರದಪ್ಪಿದ್ದ ಅವಳು, ಆ ಡಬ್ಬಿಯನ್ನು ಸುಮ್ಮನೆ ಮೇಲಕ್ಕೆ ತೂರಿಬಿಟ್ಟಳು; ಆದರೆ ಆಕೆಯ ಉದ್ದೇಶವು ಸುಷ್ಟವೇ ಇರಲಿ-ದುಷ್ಟವೇ ಇರಲಿ, ಸಿಟ್ಟು ಅದನ್ನೆಲ್ಲ ಕಟ್ಟಿಕೊಂಡೇನು ಮಾಡುವದು? ಅದು ತನ್ನ ಕೆಲಸವನ್ನು ಯಥಾಸಾಂಗವಾಗಿ ನೆರವೇರಿಸಿತು. ಬೆಂಕಿಯನ್ನು ಅರಳೆಯ ರಾಶಿಯ ಮೇಲೆ ಉದ್ದೇಶಪೂರ್ವಕವಾಗಿಯೇ ಚೆಲ್ಲಲಿ, ಅನುದ್ದೇಶಪೂರ್ವಕವಾಗಿಯೇ ಚೆಲ್ಲಲಿ ಅದು ತನ್ನ ದಾಹಕ ಕರ್ಮವನ್ನು ಮಾಡಿಯೇ ಬಿಡುವದು. ಕೇವಲ ಇದರಂತೆಯೇ ಸರಸಿಯು ಸಿಟ್ಟಿನಿಂದ ಬಿಸುಟಿದ ಆ ಡಬ್ಬಿಯಿಂದ ಅಘಟಿತ ಘಟನೆಯು ಆಗಿ ಹೋಯಿತು ಆ ಕೂಡಲೆ ಸರಸಿಯ ಮುಖಚರ್ಯೆಯು ಕಕ್ಕಾವಿಕ್ಕಿಯಾಯಿತು. ಅವಳು ಭವಾನರಾಯನ ಕಡೆಗೆ ಧಾವಿಸುತ್ತ ಹೋದಳು; ಹಾಗು ತನ್ನ ಸೆರಗಿನಿಂದ ಆತನ ತಲೆಯ ಮೇಲಾದ ಭಯಂಕರ ಗಾಯವನ್ನು ಒತ್ತಿ ಹಿಡಿದು:—"ನನ್ನ ಕೈಗಳು ಸುಟ್ಟು ಹೋಗಲಿ! ನಾನು ಮಾಡಹೋದದ್ದೇನು, ಈಗ ಆದದ್ದೇನು? ಎಲ್ಲಿಂದ ನನಗಾ ಸಟವಿಯು ಗಂಟಬಿದ್ದಳೋ-ಏನೋ? ಆಕೆಯ ನೆವದಿಂದಲೇ ಇಂದು ನಮಗೀ ಘೋರ ಪ್ರಸಂಗವು ಪ್ರಾಪ್ತವಾಯಿತು. ಈಗ ನಾನು ಏನು ಮಾಡಲಿ? ಯಾರನ್ನು ಕರೆಯಲಿ? ದೇವರೇ, ಈ ರಕ್ತಪ್ರವಾಹವನ್ನು ಹೇಗಾದರೊಮ್ಮೆ ನಿಲ್ಲಿಸಪ್ಪಾ!" ಹೀಗೆಂದು ಆ ಅಬಲೆಯು ಬಡಬಡಿಸಹತ್ತಿದಳು; ಆದರೆ ಭವಾನರಾಯನ ಲಕ್ಷ್ಯವು ಅವಳ ಕಡೆಗಿರಲಿಲ್ಲ. ಹಣೆಯೊಳಗಿಂದ ಒಂದೇಸವನೆ ರಕ್ತಪ್ರವಾಹವು ಹೊರಚಿಮ್ಮುತ್ತಿತ್ತಾದ್ದರಿಂದ ಆತನ ತಲೆಯು ತಿರುಗಹತ್ತಿತು. ಶಕ್ತಿಯು ಕ್ಷೀಣವಾಗತೊಡಗಿತು. ಆಗ ಆತನು

ಕ್ಷೀಣಸ್ವರದಿಂದಲೇ ಸರಸಿಯನ್ನು ಕುರಿತು:—"ಸರಸೀ, ಬೇಗನೆ ಹೋಗಿ ಆ ನೆರೆ ಮನೆಯ ಕಲ್ಲಪ್ಪನನ್ನು ಕರಕೊಂಡು ಬಾ. ಡಾಕ್ಟರರನ್ನು ಕರೆಯಿಸದ ಹೊರತು ನಡೆಯಲಾರದು" ಎಂದು ಹೇಳಿದನು.

ಚುಮುಚುಮು ನಸಕಿನ ಹೊತ್ತು. ಪ್ರತಿಯೊಬ್ಬರೂ ಗಾಢವಾದ ನಿದ್ದೆಯಲ್ಲಿದ್ದರು. ಗಂಡನು ಕಲ್ಲಪ್ಪನನ್ನು ಕರೆಯ ಹೇಳಿದ ಕೂಡಲೆ, ಸರಸಿಯು ಓಡುತ್ತೋಡುತ್ತ ನೆರೆಮನೆಗೆ ಹೋದಳು. ಕಲ್ಲಪ್ಪನ ಮನೆಯವರಾರೂ ಅದುವರೆಗೆ ಎದ್ದಿರಲಿಲ್ಲ. ಬಾಗಿಲು ತೆರೆದಿರಲಿಲ್ಲ. ಅದರಿಂದ ಸರಸಿಯು ಅವರ ಬಾಗಿಲವನ್ನು ಗಟ್ಟಿಯಾಗಿ ತಟ್ಟಹತ್ತಿದಳು. ಆ ಆಘಾತದಿಂದ ಕಲ್ಲಪ್ಪನ ಹೆಂಡತಿಯು ಎಚ್ಚತ್ತಳು; ಹಾಗು ಯಾರವರು? ಎಂದು ಕೇಳಿದಳು. ಕೂಡಲೆ 'ನಾನು ಸರಸಿ; ಬೇಗನೆ ಬಾಗಿಲ ತೆರೆಯಿರಿ' ಭಯಕಂಪಿತ ದನಿಯಿಂದ ಸರಸಿಯು ಹೀಗೆಂದು ಹೇಳಲು, ಕೂಡಲೆ ಕಲ್ಲಪ್ಪನ ಹೆಂಡತಿಯು ಬಂದು ಬಾಗಿಲು ತೆರೆದು—"ಸರಸಕ್ಕನೇನು? ಒಳ್ಳೇ ಅವಸರದಲ್ಲಿರುವಂತೆ ತೋರುತ್ತದಲ್ಲ?" ಎಂದು ಕೇಳಿದಳು. ಸರಸಿಯು ಸ್ವಲ್ಪದರಲ್ಲೇ ನಡೆದ ಸಂಗತಿಯನ್ನು ತಿಳಿಸಿದಳು ಅಷ್ಟರಲ್ಲಿ ಕಲ್ಲಪ್ಪನೂ ಎಚ್ಚತ್ತು ಅಲ್ಲಿಗೆ ಬಂದನು. ಕೂಡಲೆ ಆತನನ್ನು ಕರಕೊಂಡು ಸರಸಿಯು ಭವಾನರಾಯನೆಡೆಗೆ ಬಂದಳು.

ಭವಾನರಾಯನ ರಕ್ತಮಯ ಸ್ಥಿತಿಯನ್ನು ಕಂಡು ಕಲ್ಲಪ್ಪನು ಆಶ್ಚರ್ಯಚಕಿತ ನೇತ್ರಗಳಿಂದ ಆತನ ಕಡೆಗೆ ನೋಡುತ್ತ:- 'ಭವಾನರಾಯರೇ, ಇದೇನು?'

ಕತ್ತಲಲ್ಲಿ ಬಚ್ಚಲಮನೆಗೆ ನಡೆದಿರಲು, ಕಾಲುಜಾರಿ ಕಂಬಕ್ಕೆ ಹಣೆ ಬಡೆಯಿತು!

'ಛೀ-ಛೀ! ಅಷ್ಟರಿಂದ ಇಷ್ಟು ಪೆಟ್ಟಾದೀತೇ? ರಕ್ತದ ನದವೇ ಹರಿಯುತ್ತಿದೆ! ಸರಸಕ್ಕಾ, ಒಂದು ತಂಬಿಗೆ ತಣ್ಣೀರು ಹಾಗು ಒಂದು ಸ್ವಚ್ಛವಾದ ಅರಿವೆಗಳನ್ನು ತನ್ನಿರಿ. ಇವರ ಹಣೆಯ ಮೇಲಿನ ರಕ್ತವನ್ನು ಒರಸೋಣ.'

'ಕಲ್ಲಪ್ಪಾ, ಈ ರಕ್ತವನ್ನು ಇವಳು ಒರಿಸುವಳು. ನೀವು ತುಸ ತೊಂದರೆ ವಹಿಸಿ, ಬೇಗನೆ ಆ ನಮ್ಮ ಡಾಕ್ಟರ ಜಂಗೀಯವರನ್ನು ಕರೆತನ್ನಿರಿ; ಯಾಕಂದರೆ, ಈ ಗಾಯಕ್ಕೆ ಮನೆಯ ಇಲಾಜು ನಡೆಯದೆಂದು ತೋರುತ್ತದೆ!'

'ಸರಸಕ್ಕಾ, ನಾನು ಡಾಕ್ಟರ ಜಂಗೀಯವರನ್ನು ಕರೆತರುವೆನು. ಅದುವರೆಗೆ ನೀವು ಇವರ ಹಣೆಯ ಮೇಲಿನ ರಕ್ತವನ್ನು ಒರಸಿರಿ; ಹಾಗು ನೆತ್ತರದ ಬಟ್ಟೆಗಳನ್ನೆಲ್ಲ ತೆಗೆಯಿರಿ' ಎಂದು ಅಂದವನೇ ಕಲ್ಲಪ್ಪನು ಓಡುತ್ತೋಡುತ್ತ ಜಂಗೀ ಡಾಕ್ಟರರ ಮನೆಗೆ ಹೋದನು. ಇತ್ತ ಸರಸಿಯು ಹಸಿ ಅರಿವೆಯಿಂದ ಭವಾನರಾಯನ ಹಣೆ ಮೋರೆಗಳ ಮೇಲಿನ ನೆತ್ತರವನ್ನೆಲ್ಲ ಒರಸಿದಳು. ಭವಾನರಾಯನಿಗೆ ಬೇರೊಂದು ದೋತರವನ್ನು ಉಡಲಿಕ್ಕೆ ಕೊಟ್ಟಳು; ಹಾಗು ಹಾಸಿಗೆಯ ಮೇಲಿನ ರಕ್ತದ ಬಟ್ಟೆಗಳನ್ನೆಲ್ಲ ತೆಗೆದು ದೂರ ಒಯ್ದಿಟ್ಟು, ಭವಾನರಾಯನನ್ನು ಮೆಲ್ಲನೆ ಹಾಸಿಗೆಯ ಮೇಲೆ ಮಲಗಿಸಿದಳು ಆ ಗಾಯದೊಳಗಿಂದ ನೆತ್ತರದ ಪ್ರವಾಹವು ಇನ್ನೂ ಸಣ್ಣಾಗಿ ಹರಿಯುತ್ತಲೇ ಇತ್ತು. ಆಗ ಸರಸಿಯು ಆತನ ತಲೆಗಿಂಬಿಗೆ

ಕುಳಿತು ಆ ನೇತ್ರರವನ್ನು ಮೆಲ್ಲಮೆಲ್ಲನೆ ಒರಸುತ್ತಿದ್ದಳು. ಆಗಿನ ಆಕೆಯು ಮುಖ ಚರ್ಯೆಯು ನೋಡತಕ್ಕಂತಹದಾಗಿತ್ತು! ಅವಳಿಗೆ ತನ್ನ ಗಂಡನ ಮುಖದ ಕಡೆಗೆ ನೋಡುವ ಧೈರ್ಯವಿರಲಿಲ್ಲ. ಅವಳ ಜೀವವು ಪಶ್ಚಾತ್ತಾಪದಿಂದ ತಳ ಮಳಿಸುತ್ತಿತ್ತು; ಈ ಎಲ್ಲ ಅನರ್ಥಕ್ಕೆ ತನ್ನ ಮಲಮಗಳಾದ ಕುಮುದಿನಿಯೇ ಕಾರಣಳೆಂದು ತಿಳಿದುಕೊಂಡು, ಅವಳು ಕುಮುದಿನಿಯನ್ನು ಮನಸ್ಸಿನಲ್ಲಿಯೇ ಮನ ಸೋಕ್ತವಾಗಿ ಬೈದು ಅಂದು ಶಪಿಸುತ್ತಿದ್ದಳು.

ತನ್ನ ಹೆಂಡತಿಯು ತಾಮಸೀವೃತ್ತಿಯ ಮೂಲಕ ಭವಾನರಾಯನ ಅಂತಃ ಕರಣದಲ್ಲಿ ಅಸಹ್ಯವಾದ ವೇದನೆಗಳಾಗುತ್ತಿದ್ದರೂ ಅವನು ಆ ತನ್ನ ಹೆಂಡತಿಯ ಮೇಲೆ ಕೊಂಚವೂ ಸಿಟ್ಟಾಗಿರಲಿಲ್ಲ. ಕುಮುದಿನಿಯ ಆಭರಣಗಳು ಅವಳವು ಅವ ಳಿಗೆ ಮುಟ್ಟಿದವು. ಇನ್ನು ನನ್ನ ಗತಿಯು ಏನೇ ಆಗಲಿ; ಅಥವಾ ದೇವರು ಬೇಗನೆ ದಯಮಾಡಿ ನನ್ನನ್ನು ತನ್ನ ಕಡೆಗೆ ಕರೆದೊಯ್ದರೆ ನಾನು ಈ ಖೋಡಿ ಹೆಂಡತಿಯ ಕೈಯೊಳಗಿಂದೊಮ್ಮೆ ಪಾರಾದೇನು, ಎಂದು ಆತನಿಗೆ ಅನಿಸುತ್ತಿತ್ತು. ಸರಸಿಯು ಭವಾನರಾಯನನ್ನು ಏನೋ ಕೇಳಬೇಕೆಂದು ತುಟಿಯನ್ನಲ್ಲಾಡಿಸುತ್ತಿದ್ದಳು; ಆದರೆ ಆ ಶಬ್ದಗಳನ್ನು ಬಾಯಿಂದ ಹೊರಹೊರಡಿಸುವ ಧೈರ್ಯವು ಅವಳಿಗಾಗುತ್ತಿರಲಿಲ್ಲ. ಹೆಂಡತಿಗೆ ತನ್ನ ಕೃತಿಯ ಬಗ್ಗೆ ಪಶ್ಚಾತ್ತಾಪವಾಗಿರುತ್ತದೆಂಬದನ್ನು ಅವಳ ಮುಖ ಭಾವದಿಂದ ಭವಾನರಾಯನು ತಿಳಕೊಂಡಿದ್ದನು ಆದರೂ ಆತನು ಸುಮ್ಮನಿದ್ದನು.

ಇಷ್ಟರಲ್ಲಿ ಕಲ್ಲಪ್ಪನು ಜಂಗೀ ಡಾಕ್ಟರರೊಡನೆ ಅಲ್ಲಿಗೆ ಬಂದನು. ಡಾಕ್ಟರರು ಭವಾನರಾಯನನ್ನು ಪರೀಕ್ಷಿಸಿ ನೋಡಿದರು; ಹಾಗು:—"ಭವಾನರಾಯರೇ, ಅಂಜಬೇಡಿರಿ ನಾನು ಈಗ ಒಂದು ಮಲಮು ಕಳಿಸಿ ಕೊಡುತ್ತೇನೆ. ಅದರ ಪಟ್ಟಿಯನ್ನು ಗಾಯದ ಮೇಲಿರಿಸಿರಿ; ಹಾಗು ಬೇರೆ ಔಷಧ ಕಳಿಸುವೆನು. ಅದನ್ನು ಪ್ರಹರಕ್ಕೊಂದಾವರ್ತಿಯಂತೆ ಹೊಟ್ಟೆಯಲ್ಲಿ ತಕ್ಕೊಳ್ಳಿರಿ. ಅಕ್ಕಿಯ ಅನ್ನ ಮುಂತಾದ ಆಹಾರವನ್ನು ತಕ್ಕೊಳ್ಳಬೇಡಿರಿ. ಹುರಿದ ಸಜ್ಜಿಗೆಯ ಗಂಜಿಯನ್ನು ಮಾತ್ರ ತಕ್ಕೊ ಳ್ಳುತ್ತಿರ್ರಿ. ಗಾಳಿ ಬಡಿಸಿಕೊಳ್ಳಬೇಡಿರಿ ಗಾಯವು ತುಸ ದೊಡ್ಡದೇ ಇದೆ. ಅದು ಮಾಯಲಿಕ್ಕೆ ನಾಲ್ಕೆಂಟು ದಿವಸಗಳು ಬೇಕಾದಾವು. ಆದರೂ ನೀವು ಅಂಜುವ ಕಾರಣವಿಲ್ಲ" ಎಂದು ಹೇಳಿ, ಕಲ್ಲಪ್ಪನೊಡನೆ ಹೊರಗೆ ಬಂದು ಆತನನ್ನು ಕುರಿತು:- "ಕಲ್ಲಪ್ಪಾ, ಗಾಯವು ಭಯಂಕರವಾಗಿದೆ. ರಕ್ತಸ್ರಾವವು ಹೆಚ್ಚಾಗಿ ಆದದ್ದರಿಂದ ಮಿದುಳಿಗೆ ತೊಂದರೆಯಾಗುವ ಸಂಭವವಿದೆ. ವಾತವಾಗುವ ಸಂಭವವೂ ಹೆಚ್ಚಾ ಗಿದೆ. ವಿಶೇಷ ಎಚ್ಚರಪಡಲಿಕ್ಕೆ ತಿಳಿಸಿರಿ" ಎಂದ ಡಾಕ್ಟರನ ನುಡಿಗಳನ್ನು ಕೇಳಿ ಕಲ್ಲಪ್ಪನಿಗೆ ಗಾಬರಿಯಾಯಿತು ಭವಾನರಾಯನು ಸ್ವಭಾವದಿಂದ ಒಳ್ಳೇ ಮನುಷ್ಯ ನಾದ್ದರಿಂದ ಅವನ ಬಗ್ಗೆ ಪ್ರತಿಯೊಬ್ಬನಿಗೂ ಆದರವೂ ಆತ್ಮೀಯಭಾವವೂ ಅನಿಸು ತ್ತಿತ್ತು. ಸರಸಿಯು ಹೊಟ್ಟೆ ಗುಣಗಳ ಪರಿಚಯವು ಕಲ್ಲಪ್ಪನಿಗೆ ಹೆಚ್ಚಾಗಿರದಿದ್ದರೂ ಅದರ ಅಲ್ಪಸ್ವಲ್ಪ ಝಳವು ಆತನಿಗೆ ಬಡಿದಿದ್ದಿತು. ಅನರಿಂದಲೂ ಸರಸಿಯ ಆಗಿನ

ಮುಖಚರ್ಯೆಯಿಂದಲೂ ಭವಾನರಾಯನ ಗಾಯದ ಕಾರಣವು ಬೇರೆಯೇ ಇರಬೇಕೆಂದು ಆತನಿಗೆ ಸಂಶಯವುಂಟಾಯಿತು

ಕಲ್ಲಪ್ಪನು ಡಾಕ್ಟರರೊಡನೆ ಆಸ್ಪತ್ರಿಗೆ ಹೋಗಿ ಔಷಧ ತಕ್ಕೊಂಡು ಭವಾನರಾಯನೆಡೆಗೆ ಬಂದನು. ಭವಾನರಾಯನು ಆಗ ನೆರಳುತ್ತ ಬಿದ್ದುಕೊಂಡಿದ್ದನು. ಕಲ್ಲಪ್ಪನು ಭವಾನರಾಯನ ಹಣೆಯ ಮೇಲೆ ಮಲಮು ಪಟ್ಟಿಯನ್ನು ಗೂಡ್ರಿಸಿದನು; ಹಾಗು ಔಷಧದ ಒಂದು ಭಾಗವನ್ನು ಆತನಿಗೆ ಕುಡಿಸಿದನು. ಬಳಿಕ ಆತನು ಭವಾನರಾಯನನ್ನು ಕುರಿತು:--"ಭವಾನರಾಯರೇ, ಅಷ್ಟೊಂದು ಅಂಜುವ ಕಾರಣವಿಲ್ಲ. ಹೆಚ್ಚು-ಕಡಿಮೆಯೆನಿಸಿದರೆ ನನ್ನನ್ನು ಕರೆಯ ಕಳುಹಿರಿ. ನಾನಿಂದು ಕೆಲಸಕ್ಕೆ ಹೋಗದೆ ಮನೆಯಲ್ಲೇ ಇರುತ್ತೇನೆ"

"ಕಲ್ಲಪ್ಪಾ!" ಭವಾನರಾಯನು ಕೃತಜ್ಞತೆಯ ದನಿಯಿಂದ ಸಂಬೋಧಿಸಿ, "ಇಂದು ನನ್ನ ಸಲವಾಗಿ ನಿಮಗೆ ಬಹು ಶ್ರಮವಾಯಿತು."

"ಭವಾನರಾಯರೇ, ಶ್ರಮವೇತರದು? ನಾವು ನೆರೆಹೊರೆಯವರು ಪ್ರಸಂಗ ವಿಶೇಷದಲ್ಲಿ ಒಬ್ಬರೊಬ್ಬರಿಗೆ ನೆರವಾಗದಿದ್ದರೆ ನೆರೆಮನೆಯ ಸೋಬತಿಯೆಂತಹದು? ನೀವು ಅದಾವುದನ್ನೂ ಮನಸ್ಸಿನಲ್ಲಿ ತಂದುಕೊಳ್ಳಬೇಡಿರಿ. ಸ್ವಸ್ಥವಾಗಿರ್ರಿ. ನಾಲ್ಕೆಂಟು ದಿನಗಳಲ್ಲೇ ಗುಣ ಹೊಂದುವಿರಿ." ಎಂದು ಹೇಳಿ, ಕಲ್ಲಪ್ಪನು ಹೊರಟು ಹೋ-ದನು. ಇಷ್ಟರಲ್ಲಿ ಬೆಳಗಿನ ಎಂಟು ಘಂಟೆಯಾಯಿತು. ಸರಸಿಯು ಗಂಡನ ಹಾಸಿಗೆಯ ಬಳಿಯಲ್ಲಿ ಕಳ್ಳರ ಹಾಗೆ ಸುಮ್ಮನೆ ಕುಳಿತಿದ್ದಳು. ಬಳಿಕ ಭವಾನರಾಯನ ಒತ್ತಾಯದ ಮೇರೆಗೆ ಅವಳು ಅಲ್ಲಿಂದೆದ್ದು ತನ್ನ ನಿತ್ಯದ ಮನೆಗೆಲಸಗಳಿಗೆ ತೊಡಗಿದಳು.

ಸರಸಿಯು ಮನೆಗೆಲಸಕ್ಕೆ ಹತ್ತಿದಳೇನೋ ನಿಜ; ಆದರೆ ಆಕೆಯ ಮನಸ್ಸು ಮಾತ್ರ ಸ್ವಸ್ಥವಾಗಿರಲಿಲ್ಲ. ತನ್ನ ಮಲಮಗಳಾದ ಕುಮುದಿನಿಯ ಸಲುವಾಗಿಯೇ ಇಂದಿನ ಈ ಭಯಂಕರ ಪ್ರಸಂಗವುಂಟಾಯಿತೆಂದು ಅವಳು ಕುಮುದಿನಿಗೆ ಆಗಾಗ್ಗೆ ಬೈಯುತ್ತ ಶಪಿಸತೊಡಗಿದಳು. ಸರಸಿಯು ಹೀಗೆ ಚಡಪಡಿಸುತ್ತ ಲಗುಬಗನೆ ಮನೆಗೆಲಸವನ್ನು ಮಾಡಿ, ತನಗಾಗಿ ಅನ್ನ-ಸಾರನ್ನೂ ಗಂಡನಿಗಾಗಿ ಹುರಿದ ರವೆಯ ಗಂಜಿಯನ್ನೂ ಮಾಡಿದಳು; ಹಾಗು ಭವಾನರಾಯನು ಒಲ್ಲೆ ಒಲ್ಲೆನೆಂದರೂ ಅವನಿಗೆ ಆ ಎಲ್ಲ ಗಂಜಿಯನ್ನು ಕುಡಿಯಹಚ್ಚಿದಳು. ಬಳಿಕ ತಾನೂ ತನಗೆ ಹೊಂದಷ್ಟು ನಾಲ್ಕು ತುತ್ತು ಉಂಡು ಬಂದು ಗಂಡನ ಬಳಿಯಲ್ಲಿ ಕುಳಿತಳು

ಗಾಯದ ನೋವಿನಿಂದ ಭವಾನರಾಯನ ಮೈಯಲ್ಲಿ ಜ್ವರವೇರಹತ್ತಿತ್ತು. ಸಂಜೆಯ ಒಳಗಾಗಿ ಆತನ ದೇಹವು ಜ್ವರತಾಪದಿಂದ ಸುಡಹತ್ತಿತು. ಭವಾನರಾಯನ ಪ್ರಕೃತಿ ನೋಡಲಿಕ್ಕೆ ಕಲ್ಲಪ್ಪನು ಆಗಾಗ್ಗೆ ಬಂದು ಹೋಗುತ್ತಿದ್ದನು. ಸಂಜೆಯ ಮುಂದೆ ಜ್ವರ ಹೆಚ್ಚಿದ್ದರಿಂದ ಕಲ್ಲಪ್ಪನಿಗೆ ಗಾಬರಿಯಾಯಿತು. ಅದರಿಂದ ಅವನು ಲಗುಬಗೆಯಿಂದ ಜಂಗೀಡಾಕ್ಟರರ ದವಾಖಾನೆಗೆ ಹೋಗಿ, ಅವರಿಗೆ ಭವಾನರಾಯನ ದೇಹಸ್ಥಿತಿಯನ್ನು ತಿಳಿಸಿ:—ಡಾಕ್ಟರರೇ, ತುಸ ಹೆಚ್ಚು ಶ್ರಮವಹಿಸಿ ಭವಾನ

ರಾಯನಿಗಾಗಿ ಖಾತ್ರಿದಾಯಕವಾದ ಚಲೋ ಔಷಧ ಕೊಡಿರಿ, ಎಂದು ಹೇಳಿದನು.

'ಕಲ್ಲಪ್ಪಾ, ನಾನು ದುಡ್ಡಿನ ಲೋಭದಿಂದ ರೋಗಿಗಳ ಬೇನೆಯನ್ನು ಹೆಚ್ಚು ಕಡಿಮೆ ಮಾಡಿ ಹಣ ಸೆಳೆಯುವ ವರ್ಗದ ಡಾಕ್ಟರನಲ್ಲ. ಬಡವನಿರಲಿ, ಶ್ರೀಮಂತನಿರಲಿ; ನಾನು ಎಲ್ಲ ರೋಗಿಗಳಿಗೂ ಯೋಗ್ಯವಾದ ಔಷಧೋಪಚಾರ ವನ್ನೇ ಮಾಡುವವನು. ಆದರಿಂದ ಭವಾನರಾಯರ ಬಗ್ಗೆ ನಾನು ದುರ್ಲಕ್ಷ್ಯ ಮಾಡುವದಿಲ್ಲ,' ಎಂದೆಂದು ಔಷಧವನ್ನು ಕೊಟ್ಟು ಕಳುಹಿದನು. ಕಲ್ಲಪ್ಪನು ಡಾಕ್ಟರನ ಸೂಚನೆಯನ್ನು ಸರಸಿಗೆ ತಿಳಿಸಿ ಹೊರಟು ಹೋದನು.

ಭವಾನರಾಯನು ಸ್ವತಃ ಹೀಗೆ ಹಾಸಿಗೆ ಹಿಡಿದು ಬಿದ್ದುದರಿಂದ ತನ್ನ ಮಿತ್ರನು ಬಳ್ಳಾರಿಗೆ ಹೋಗಿ ತನ್ನ ಮಗಳ ಆಭರಣಗಳನ್ನು ಅವಳ ಅತ್ತೆಯ ಮನೆಯವರ ಸ್ವಾಧೀನ ಪಡಿಸಿದನೋ ಇಲ್ಲವೊ ಎಂಬ ಸಂಗತಿಯು ಆತನಿಗೆ ತಿಳಿಯಲಿಲ್ಲ. ಆ ಮಿತ್ರನು ಅಂದೇ ತನ್ನೂರಿಂದ ಹೊರಟಿದ್ದನು; ಆದರೆ ಆತನ ಅಣ್ಣನಿಗೆ ಕಾಹಿಲೆಯಾದ ವಾರ್ತೆಯು ದಾರಿಯಲ್ಲಿ ಹತ್ತಿತು. ಆಗ ಅವನು ನೆಟ್ಟಗೆ ಬಳ್ಳಾರಿಗೆ ಹೋಗದೆ, ದಾರಿ ಯಲ್ಲಿ ಗದಗಿನಲ್ಲಿಳಿದು ತನ್ನ ಅಣ್ಣನ ಶುಶ್ರೂಷೆಗೆ ತೊಡಗಿದ್ದರಿಂದ ಬಳ್ಳಾರಿಗೆ ಹೋಗ ಲಿಕ್ಕೆ ವಿಲಂಬವಾಯಿತು. ಆದರಿಂದ ಭವಾನರಾಯನ ಆ ಮಿತ್ರನಿಗೆ ತನ್ನ ಹಿಂದೆ ಇತ್ತ ವಿಜಾಪುರದಲ್ಲಿ ಭವಾನರಾಯನು ಗಾಯಗೊಂಡು ನರಳುತ್ತ ಬಿದ್ದ ಸಂಗ ತಿಯು ತಿಳಿದಿರಲಿಲ್ಲ.

ಹಾಗಲ ಕಾಯಿಯನ್ನು ತುಪ್ಪದಲ್ಲಿ ತಾಳಿಸಿದರೂ, ಸಕ್ಕರೆಯಲ್ಲಿ ಹಾಕಿ ಅರೆ ದರೂ ಅದರ ಸ್ವಾಭಾವಿಕ ಕಹಿಯು ಹೇಗೆ ಹೋಗುವದಿಲ್ಲವೋ, ಅದರಂತೆಯೇ ಒಡಕ ಬಾಯಿಯ ಜನರ ಬಾಯೊಳಗೆ ಯಾವುದೊಂದು ಮಾತು ಉಳಿಯುವ ದೆಂದರೆ, ಒನಕೆಗೆ ಅಂಕುರಗಳುದ್ಭವಿಸಿದಂತೆಯೇ ಸರಿ! ನಿರ್ಮಲೆಯು ಎಷ್ಟು ಕಟ್ಟು ನಿಟ್ಟಾಗಿ ಹೇಳಿದ್ದರೂ, ನಮ್ಮ ಕಮಲಾಕಾಂತ ಸಾಧುವು ತನ್ನ ಅಮೋಘವಾದ ಬೋಧದಿಂದ ಬೋಧಿಸಿದ್ದರೂ ನರ್ಮದೆಯ ಹುಟ್ಟುಗುಣವು ಹುಗಿದರೂ ಹೋಗ ದೆಂಬಂತಾಯಿತು. ನಿರ್ಮಲೆಯು ತಿಳಿಸಿದ್ದ ಕುಮುದಿನಿಯ ಆಭರಣದ ಕಿವಿಮಾತ ನ್ನು ಅವಳು ತನ್ನ ಗಂಡನಿಗೆ ಹೇಳಿಯೇ ಬಿಟ್ಟಳು. ವಲ್ಲಭರಾಯನು ಹಿತ್ತಾಳಿಯ ಕಿವಿಯವನಿರಲಿಲ್ಲ; ಆದರೂ ಹೆಂಡತಿಯು ಆ ಸಂಗತಿಯನ್ನು ತಿಳಿಸಿದ್ದರಿಂದ, ಅವನ ಮನಸ್ಸಿನಲ್ಲಿ ಒಂದು ಬಗೆಯ ಕಿಂತುವು ಉತ್ಪನ್ನವಾಗದಿರಲಿಲ್ಲ. ನಾಲ್ಕು ದಿನ ಮಗಳು ತವರು ಮನೆಗೆ ಬಂದ ಮಾತ್ರಕ್ಕೆ ಅವಳ ಆಭರಣಗಳನ್ನು ಕೆಲದಿನಗಳ ಮಟ್ಟಿ ಗಾದರೂ ಬೇರೆಯವರ ಸ್ವಾಧೀನ ಪಡಿಸುವದು ಯಾವ ತಂದೆಗೂ ಉಚಿತವೆನಿಸ ಲಾರದು. ಭವಾನರಾಯನು ಕುಮುದಿನಿಯ ಆಭರಣಗಳನ್ನು ಹಾಗೆ ತನ್ನ ಮಿತ್ರ ನಿಗೆ ಕೊಟ್ಟಿರುವೆನೆಂದು ಹೇಳಿ, ಇನ್ನು ನಾಲ್ಕು ದಿನಕ್ಕೆ ನಿಮ್ಮ ಆಭರಣಗಳನ್ನೆಲ್ಲ ನಿಮ್ಮ ಮನೆಗೆ ತಂದು ತಲುಪಿಸುತ್ತೇನೆಂದು ಅಂದವನು, ತನ್ನ ನಾದಿನಿಯಾದ ಕುಮುದಿನಿಯು ತಮ್ಮ ಮನೆಗೆ ಬಂದು ಇಪ್ಪತ್ತು ದಿನಗಳಾದರೂ ಆ ಆಭರಣಗಳು

ಬಾರದ್ದರಿಂದ ತನ್ನ ಹೆಂಡತಿಯು ತಿಳಿಸಿದ ಸಂಗತಿಯಲ್ಲೇನಾದರೂ ತಥ್ಯಾಂಶವಿರ ಬೇಕೆಂದು ವಲ್ಲಭರಾಯನಿಗೆ ಸಂಶಯವುಂಟಾಯಿತು.

ಮರುದಿನ ಮುಂಜಾನೆ ವಲ್ಲಭರಾಯನು ತನ್ನ ಉದ್ಯೋಗಕ್ಕಾಗಿ ಮನೆಯಿಂದ ಹೊರಬೀಳುತ್ತಿರಲು, ಹೊರಗಿನಿಂದ ಒಬ್ಬ ಅಪರಿಚಿತ ಗೃಹಸ್ಥನು ಅವರ ಮನೆಗೆ ಬಂದನು; ಹಾಗು ವಲ್ಲಭರಾಯರು ಮನೆಯಲ್ಲಿರುವರೇ? ಎಂದು ಕೇಳಿದನು. ಕೂಡಲೆ ಎದುರಿಗೇ ಇದ್ದ ವಲ್ಲಭರಾಯನು ನಾನೇ ಅವನೆಂದು ಹೇಳಿ, 'ನೀವು ಯಾರು? ಎಲ್ಲಿಂದ ಬಂದಿರಿ?' ಎಂದು ಪ್ರಶ್ನೆ ಮಾಡಿದನು. 'ನಾನು ಭವಾನರಾಯರ ಸ್ನೇಹಿತನು, ನಿಮ್ಮ ಕಡೆಗೇ ಬಂದಿರುತ್ತೇನೆ,' ಎಂದೆನ್ನಲು, ವಲ್ಲಭರಾಯನು ಆತನನ್ನು ಬೈಠಕಖಾನೆಗೆ ಕರೆದೊಯ್ದು, ಭವಾನರಾಯರ ಕ್ಷೇಮ ಸಮಾಚಾರವನ್ನು ವಿಚಾರಿಸಿದನು. ಆಗ ಆ ಗೃಹಸ್ಥನು ತಾನು ಸಂಗಡ ತಂದಿದ್ದ ಕುಮುದಿನಿಯ ಆಭರಣಗಳನ್ನು ವಲ್ಲಭರಾಯ ನೆದುರಿಗೆ ಇಟ್ಟು, 'ಭವಾನರಾಯರು ಕುಟುಂಬಸಹಿತವಾಗಿ ಕ್ಷೇಮದಿಂದಿದ್ದರೆಂತಲೂ, ತಾನು ವಿಜಾಪುರದಿಂದ ಹೊರಟು ೧೫ ದಿವಸಗಳಾಗಿದ್ದು, ತನ್ನ ಅಣ್ಣನ ಆಕಸ್ಮಿಕ ಕಾಹಿಲೆಯ ಸಲುವಾಗಿ ತಾನು ನಡುವೆ ಗದುಗಿನಲ್ಲಿ ೧೫ ದಿನವಿರಬೇಕಾಯಿತೆಂತಲೂ ತಿಳಿಸಿದ್ದಲ್ಲದೆ, ವಸ್ತುಗಳನ್ನೆಲ್ಲ ನೋಡಿ ಖಾತ್ರಿ ಮಾಡಿಕೊಳ್ಳಬೇಕೆಂದೂ ಎಲ್ಲವೂ ಸರಿಯಾಗಿ ತಲುಪಿದ ಬಗ್ಗೆ ಭವಾನರಾಯರಿಗೆ ಪತ್ರಮೂಲಕ ತಿಳಿಸಬೇಕೆಂದೂ ಹೇಳಿ ಹೋಗಲನುವಾದನು; ಆದರೆ ವಲ್ಲಭರಾಯನು ಊಟ ಮಾಡಿ ಹೋಗಬೇಕೆಂದು ಹೇಳಿದ್ದರೂ ಆತನು 'ನಾನು ಈಗಲೆ ಗದಗಿಗೆ ಮರಳಿ ಹೋಗುವ ಲೋಕಲ್ಲ ಟ್ರೇನಿಗೆ ಹೊರಡಲೇ ಬೇಕು. ನನ್ನ ಅಣ್ಣನು ಕಾಹಿಲೆಯಿಂದ ಇನ್ನೂ ಸಂಪೂರ್ಣ ಗುಣ ಹೊಂದಿಲ್ಲ. ಆದ್ದರಿಂದ ಕ್ಷಮಿಸಬೇಕು' ಎಂದು ಹೇಳಿ ಹೊರ ಹೊರಟನು.

ಆಗ ವಲ್ಲಭರಾಯನು ಅವನನ್ನು ತುಸ ತಡೆಯ ಹೇಳಿ, ಒಳಗೆ ಹೋಗಿ ತನ್ನ ನಾದಿನಿಯಾದ ಕುಮುದಿನಿಯನ್ನೂ ತಮ್ಮನಾದ ಶಂಕರರಾಯನನ್ನೂ ಕರೆದು, ಅವರಿಗೆ ಆ ಗೃಹಸ್ಥನ ಪರಿಚಯ ಮಾಡಿ ಕೊಟ್ಟು, ಇವರು ಭವಾನರಾಯರು ಕೊಟ್ಟ ಆಭರಣಗಳನ್ನು ತಂದು ಒಪ್ಪಿಸಿರುವರೆಂದು ತಿಳಿಸಿದನು. ಆ ಸಂಗತಿಯನ್ನು ಕೇಳಿ ಕುಮುದಿನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು; ಶಂಕರರಾಯನಿಗೆ ಸಮಾಧಾನವೆನಿಸಿತು; ಆದರೆ ನರ್ಮದೆಗೆ ಮಾತ್ರ ಮುಖಭಂಗವಾದಂತಾಗಿ ಬಹು ಕೆಡಕೆನಿಸಿತು. ತಾನು ಸ್ವಪ್ನದಲ್ಲಿರುವೆನೋ ಏನೋ ಎಂದು ಆಗ ಆಕೆಗನಿಸಿತು; ಹಾಗು ನಿರ್ಮಲೆಯು ತನಗೇನಾದರೂ ಸುಳ್ಳು ಹೇಳಿರಬೇಕೆಂದೆನಿಸಿ, ತೀರ ಗಾಬರಿಗೊಂಡಳು.

ವಲ್ಲಭರಾಯನು ಆ ಆಭರಣಗಳನ್ನು ಶಂಕರರಾಯನಿಗೊಪ್ಪಿಸಿದನು; ಆದರೆ ಮೊದಲನೇ ರಾತ್ರಿಯಲ್ಲಿ ತನ್ನ ಹೆಂಡತಿಯು ಈ ಅಲಂಕಾರಗಳ ಬಗ್ಗೆ ಹೇಳಿದ್ದೇನು, ಇವು ಬೆಳಗಾಗುವಷ್ಟರಲ್ಲಿ ಹೀಗೆ ಆಕಸ್ಮಿಕವಾಗಿ ತನ್ನ ಕೈಗೆ ಬರುವದೆಂದರೇನು ಎಂಬದರ ಗೌಡಬಂಗಾಲವು ತನ್ನದು ತನಗೇ ತಿಳಿಯದಾಯಿತು. ಆಗ ಅವನು ಆ ಬಗ್ಗೆ ಏನೂ ಮಾತಾಡದೆ ಸುಮ್ಮನೆ ತನ್ನ ಉದ್ಯೋಗಕ್ಕೆ ಹೊರಟು ಹೋದನು.

ಆದರೆ ನರ್ಮದೆಯ ಮನಸ್ಸು ಮಾತ್ರ ಬಹು ಆತುರಗೊಂಡಿತು. ನಿರ್ಮಲಮ್ಮನು ತನಗೆ ಭೇಟಿಯಾಗುವಳಾವಾಗ, ತಾನು ಆ ವಸ್ತುಗಳ ಬಗ್ಗೆ ಆಕೆಯನ್ನು ಕೇಳುವುದಾವಾಗ ಎಂದೆನಿಸಿತು. ಅದರಿಂದ ಗಂಡನು ಉಂಡು ಹೊರಗೆ ಹೋದ ಕೂಡಲೆ ನರ್ಮದೆಯೂ ಎರಡು ತುತ್ತು ಹೇಗಾದರೂ ತಿಂದು, ಅಟ್ಟದ ಮೇಲಿನ ತನ್ನ ಖಾಸ ಕೋಣೆಯನ್ನು ಸೇರಿ ನಿರ್ಮಲೆಯ ಮಾರ್ಗಪ್ರತೀಕ್ಷೆ ಮಾಡತೊಡಗಿದಳು.

ಅಂದು ಕುಮುದಿನಿಯ ಚಿತ್ತದಲ್ಲಾದ ಚಾಂಚಲ್ಯಕ್ಕೆ ಮೇರೆಯೇ ಇದ್ದಿಲ್ಲ. ನೋಡುವವರಿಗೆ ಅವಳು ದಿನದಂತೆ ಕಾಣುತ್ತಿದ್ದರೂ ಅವಳ ಅಂತರಂಗದಲ್ಲಿ ನಾನಾ ವಿಧದ ಬೇಗೆಗಳೆದ್ದಿದ್ದವು. ಅವಳು ಹೇಗಾದರೂ ಅಡಿಗೆ-ಊಟಗಳನ್ನು ತೀರಿಸಿಕೊಂಡು ತನ್ನ ಕೋಣೆಯನ್ನು ಹೊಕ್ಕು ಯೋಚನೆ ಮಾಡುತ್ತ ಕುಳಿತಳು. ಎಲ್ಲ ದುಃಖಗಳಲ್ಲಿ ತನ್ನ ತಂದೆಯು ತನ್ನ ಎಲ್ಲ ಆಭರಣಗಳನ್ನು ಕಳಿಸಿಕೊಟ್ಟದ್ದೊಂದು ದೊಡ್ಡ ಭಾಗ್ಯವೆಂದೆನಿಸಿತು. ಅವಳು ತನ್ನ ಕೋಣೆಯೊಳಗಿನ ಕಿಟಕಿಯ ಬಳಿಯಲ್ಲಿ ಚಿಂತಾಕ್ರಾಂತಳಾಗಿ ಕುಳಿತಿದ್ದಳು. ಅದರಿಂದ ಎದುರಿಗಿನ ಮನೆಯ ಉಪ್ಪರಿಗೆಯ ಕೋಣೆಯ ಕಿಟಕಿಯೊಳಗಿಂದ ತನ್ನನ್ನಾರಾದರೂ ಕದ್ದು ನೋಡುತ್ತಿರುವರೇನೆಂಬ ಬಗ್ಗೆ ಅವಳ ಲಕ್ಷ್ಯವೇ ಇರಲಿಲ್ಲ.

ವಲ್ಲಭರಾಯರ ಮನೆಯ ಎದುರಿಗಿನ ಮನೆಯಲ್ಲಿ ಮೊನ್ನೆ ಮೊನ್ನೆ ಒಬ್ಬ ವಾರವನಿತೆಯು ಉಪ್ಪರಿಗೆಯ ಮೇಲಿನ ಕೋಣೆಯೊಂದನ್ನು ಬಾಡಿಗೆಯಿಂದ ಹಿಡಿದುಕೊಂಡು ಇರಹತ್ತಿದ್ದಳು. ಆ ಚಂದ್ರಿಯೂ ಆಕೆಯ ಹಸ್ತಕನಾದ ಗುಂಡನೂ ಕಮಲಾಕಾಂತ ಸಾಧುವಿನ ಅಡ್ಡೆಯೊಳಗಿನವರು. ಕಮಲಾಕಾಂತ ಸಾಧುವಿನ ಶರಣಮ್ಮಳಾದ ನಿರ್ಮಲೆಯ ಪ್ರೇರಣೆಯಿಂದಲೇ ಅವರೀರ್ವರು ಆ ಮನೆಯ ಆ ಕೋಣೆಯಲ್ಲಿ ಬಂದಿರಹತ್ತಿದ್ದರು. ಕುಮುದಿನಿಯು ಕಿಟಕಿಯ ಕಡೆಗೆ ಮುಖಮಾಡಿಕೊಂಡು ಕುಳಿತಿದ್ದರೂ ಆಕೆಯ ಲಕ್ಷ್ಯವು ಆಗ ಹೊರಗಡೆಗಿರಲಿಲ್ಲ ಅದು ಅವಳ ಅಂತರಂಗದೊಳಗಿನ ವಿಚಾರತಂದ್ರಿಯಲ್ಲಿ ಮಗ್ನವಾಗಿತ್ತು. ಅದರಿಂದ ಎದುರಿಗಿನ ಮನೆಯ ಕಿಟಕಿಯೊಳಗಿಂದ ತನ್ನನ್ನು ಮಿಕಿಮಿಕಿಯೆಂದು ನೋಡುತ್ತ, ತನ್ನ ವಿಷಯವಾಗಿ ಕುಚೇಷ್ಟೆಪರ ಭಾಷಣ ಮಾಡುತ್ತಿದ್ದ ಆ ಇಬ್ಬರು ಬದ್‌ಮಾಷರ ಮನೋಗತವು ಅವಳಿಗೆ ತಿಳಿಯದಾಯಿತು.

"ಗುಂಡಾ, ಹಕ್ಕಿಯು ಇಂದು ಬಹು ಯೋಚನೆಯಲ್ಲಿರುವಂತೆ ತೋರುತ್ತದೆ!"

'ಚಂದ್ರೀ, ಆ ಹಕ್ಕಿಗೆ ಮನೆಯವರಿಂದ ಎಷ್ಟು ತೊಂದರೆಯಾದೀತೋ, ಅಷ್ಟು ಬೇಗನೆ ಅದು ನಮ್ಮ ಬಲೆಯಲ್ಲಿ ಬೀಳುವದೆಂದು ತಿಳಿ ಅತ್ತಿಗೆ-ನೆಗೆಣ್ಣಿಯರ ಉರುವಣಿಗೆಯಿಂದ ಚೆನ್ನಾಗಿ ಬೆಯ್ಯದ ಹೊರತು, ಇಂಥ ಅಬಲೆಯರು ನಮ್ಮ ಹಾಗು ನಮ್ಮ ಕಮಲಾಕಾಂತ ಸಾಧುಗಳ ಜಾಲದಲ್ಲಿ ಸಿಲುಕುವರೇ?'

"ಪ್ರಿಯಕರಾ, ಈ ಹುಡುಗಿಯು ನಮ್ಮ ಕೈ ಸೇರಿದರೆ, ನಾವು ಆ ಕಮಲಾಕಾಂತ ಬುವಾನಿಂದ ನಾಲ್ಕು ದುಡ್ಡು ಹೆಚ್ಚು ಸೆಳೆಯಲಿಕ್ಕೆ ಬರುತ್ತದೆ."

"ಚಂದ್ರೀ, ನಿರ್ಮಲಾ ಶರಣಮ್ಮನ ಪ್ರಭಾವಳಿಯೊಳಗಿನ ಈ ಗುಂಡನನ್ನು ಸಾಮಾನ್ಯನೆಂದು ತಿಳಿದಿರುವೆಯೇನು? ನಾನು ಬಲೆಯನ್ನು ಒಡ್ಡಿ, ಈಕೆಯನ್ನು ಅದರಲ್ಲಿ ಹೇಗೆ ಕೆಡಹುತ್ತೇನೆಂಬದನ್ನಾದರೂ ನೋಡು"

ಈ ಪ್ರಕಾರ ಗುಂಡ-ಚಂದ್ರಿಯರು ಮಾತನಾಡುತ್ತಿರಲಿಕ್ಕೆ ನಿರ್ಮಲೆಯು ವಲ್ಲಭರಾಯನ ಮನೆ ಹೊಕ್ಕದ್ದನ್ನು ಅವರು ಕಂಡರು. ಇನ್ನು ತಮ್ಮ ಕೆಲಸವು ಬೇಗನೆ ಕೈಗೂಡುವದೆಂದು ಭಾವಿಸಿ, ಗುಂಡನು ಅಟ್ಟದಿಂದ ಕೆಳಗಿಳಿದು ಬಂದು ಓಣಿಯ ಪಕ್ಕದಲ್ಲಿ ನಿಂತು, ನಿರ್ಮಲೆಯ ದಾರಿ ಕಾಯ ಹತ್ತಿದನು. ಚಂದ್ರಿಯು ಅಟ್ಟದ ಮೇಲೆಯೇ ಕುಳಿತು, ಎದುರಿಗಿನ ಅಟ್ಟದ ಮೇಲಿನ ಮಾತು-ಕಥೆಗಳೇನಾದರೂ ಕೇಳಬರುವವೇನೆಂದು ಆಲಿಸಿ ಕೇಳತೊಡಗಿದಳು.

ಶರಣಮ್ಮನು ಬಂದ ಕೂಡಲೆ ಶಿಷ್ಯಣಿಯಾದ ನರ್ಮದೆಯು ಉತ್ಸುಕತೆಯಿಂದ ಆಕೆಯನ್ನು ಬರಮಾಡಿಕೊಂಡು ತನ್ನ ಕೋಣೆಯ ಬಾಗಿಲವನ್ನಿಕ್ಕಿಕೊಂಡಳು. ಬಳಿಕ ನರ್ಮದೆಯು ಕುಮುದಿನಿಯ ತಂದೆಯಿಂದ ಅಂದೇ ಕಳುಹಲ್ಪಟ್ಟ ವಸ್ತ್ರಗಳ ಸಂಗತಿಯನ್ನು ನಿರ್ಮಲೆಗೆ ತಿಳಿಸಿ, ನೀವು ಆ ಬಗ್ಗೆ ಇಲ್ಲದ್ದೊಂದು ಹೇಳಿ, ನನ್ನನ್ನು ಬಹು ಪೇಚಿಗೆ ಹಾಕಿದಿರೆಂದು ಹೇಳಿದಳು. ಆಗ ಆ ಶರಣಮ್ಮನು ತನ್ನ ಸ್ವಾಭಾವಿಕವಾದ ಹಾವಭಾವ ನಟನೆಗಳಿಂದಲೂ ಮೂಗು ಮುರಿಯುತ್ತಲೂ:—ತಂಗೀ, ನರ್ಮದಕ್ಕಾ, ನೀನು ಆ ಸಂಗತಿಯನ್ನು ನಿನ್ನ ಗಂಡನಿಗೇಕೆ ತಿಳಿಸಿದೆ? ನಾನೂ ನಮ್ಮ ಪರಮ ಗುರುಗಳಾದ ಕಮಲಾಕಾಂತ ಸಾಧುಗಳೂ ನಿನಗೆ ಆ ಗುಪಿತವನ್ನು ಈಗಲೆ ಬೇರೆಯವರಿಗೆ ಹೇಳಬೇಡವೆಂದು ತಿಳಿಸಿರಲಿಲ್ಲವೆ? ನೀನು ನಮ್ಮ ಸಾಧುಗಳ ಆ ಅಪ್ಪಣೆಯನ್ನು ಮೀರಿ ನಡೆದದ್ದರಿಂದಲೇ ನಿನಗೀ ಬಗೆಯ ಮುಖಭಂಗವಾಗುವ ಪ್ರಾಯಶ್ಚಿತ್ತವುಂಟಾಗಿ, ಆ ಮಹಾತ್ಮರ ವಚನದ ಪ್ರಚೀತಿಯುಂಟಾಯಿತು. ಇರಲಿ. ತಂಗೀ, ನಾನು ಹೇಳಿದ್ದು ಸುಳ್ಳಲ್ಲ. ಕುಮುದಿನಿಯು ವಸ್ತ್ರಗಳನ್ನು ತಂದು ಕೊಟ್ಟವನು ನಿಮ್ಮ ಪರಿಚಯದವನೇ? ಎಂದು ಅಡ್ಡ ಪ್ರಶ್ನೆ ಮಾಡಿದಳು.

"ಛೇ-ಛೇ, ನಮಗಾರಿಗೂ ಆತನ ಪರಿಚಯವಿಲ್ಲ. ಇಷ್ಟೇ ಅಲ್ಲ, ಕುಮುದಿನಿಗಾದರೂ ಆತನ ಪರಿಚಯವಿದೆಯೋ ಇಲ್ಲವೋ ಎಂಬದು ಸಂಶಯಾಸ್ಪದವೇ ಆಗಿದೆ; ಯಾಕಂದರೆ ಆಗ ಅವಳು ಆತನೊಡನೆ ಏನೊಂದೂ ಮಾತನಾಡದೆ, ಆತನ ಕಡೆಗೆ ಕಕ್ಕಾವಿಕ್ಕಿಯಾಗಿ ನೋಡಹತ್ತಿದ್ದಳು."

"ನರ್ಮದಕ್ಕಾ, ಇದಕ್ಕಾಗಿಯೇ ನಾನೂ ನಮ್ಮ ಸಾಧುಗಳೂ ನಿಮ್ಮನ್ನು ತೀರ ಭೋಳೇ ಭಾವಿಕರೆಂದೆನ್ನುವದು! ಆಕೆಯು ಅವನನ್ನು ಹಾಗೆ ಕಕ್ಕಾವಿಕ್ಕಿಯಾಗಿ ನೋಡಿದ್ದು ತನಗೆ ಆತನ ಗುರ್ತಿಲ್ಲೆಂದಲ್ಲ; ಆದರೆ ಆ ತನ್ನ ಪ್ರಿಯತಮನು ಇಲ್ಲಿ-ತನ್ನ ಗಂಡನ ಮನೆಯೊಳಗೆ-ತನಗಾಗದವರೆದುರಿಗೇಕೆ ಬಂದನೋ ಎಂದು. ಹುಚ್ಚೀ,ನಿಮ್ಮಂತಹರಿಗೆ ಇಂಥ ಸಂಗತಿಗಳ ಜ್ಞಾನವು ಒಮ್ಮೆಲೆ ಆಗಲಾರದು ಆ ಜ್ಞಾನವಾಗಲಿಕ್ಕೆ ನಮ್ಮ ಕಮಲಾಕಾಂತ ಸಾಧುಗಳ ನಿರಂತರ ಸಹವಾಸವೇ ಬೇಕು."

## ಪಿಶಾಚಿನೃತ್ಯ!

ಕುಮುದಿನಿಯು ನೋಡುವವರ ದೃಷ್ಟಿಗೆ ಶಾಂತಳಾಗಿ ತೋರುತ್ತಿದ್ದರೂ ಅವಳ ಅಂತರಾತ್ಮನು ಬೇರೊಂದು ಸ್ಥಿತಿಯಲ್ಲಿದ್ದನು. ಅವಳು ಹುಟ್ಟಾ ಜಾಣೆಯು, ವಿಚಾರಶೀಲಳು; ವಿವೇಕಿಯು. ಅದರಿಂದ ತನ್ನಿಂದ ಹೆರವರಿಗೆ ತೊಂದರೆಯಾಗ ಕೂಡ ದೆಂತಲೂ, ಯಾರಿಗೂ ವಿರಸವುಂಟಾಗಬಾರದೆಂತಲೂ ಅವಳು ಶಕ್ಯವಾದಷ್ಟು ಹೆಚ್ಚು ಪ್ರಯತ್ನಿಸಿ, ತನ್ನ ಮನೋವಿಕಾರಗಳನ್ನು ಒಳಗಿಂದೊಳಗೇ ಹತ್ತಿಕ್ಕುತ್ತಿದ್ದಳು; ಆದರೆ ತನ್ನ ನಾದಿನಿಯ ಮನೋವೃತ್ತಿಯು ಎಂದಿನಂತಿಲ್ಲೆಂಬವನ್ನು ವಲ್ಲಭರಾಯನು ಕಂಡು ಹಿಡಿಯದಿರಲಿಲ್ಲ. ತಂದೆಯ ಮರಣದ ಪರಿಣಾಮವು ಕುಮುದಿನಿಯ ಮನ ಸ್ಸಿನ ಮೇಲೆ ವಿಲಕ್ಷಣವಾಗಿ ಆಗಿತ್ತು; ಮತ್ತು ಇನ್ನೊಂದು ವಿಲಕ್ಷಣ ಸಂಗತಿಯು ಪತ್ರವು ತನ್ನ ಹೆಸರಿಗೆ ಬಂದು, ಅದು ಎಲ್ಲಿ ಮನೆಯೊಳಗಿನ ಬೇರೆಯವರ ಕೈಗೆ ಸಿಗು ವುದೋ-ಏನೋ ಎಂಬ ಅಂಜಿಕೆಯಿಂದ ಆ ಬಡವಳ ಜೀವಕ್ಕೆ ಮಹಾ ಹೃದ್ರೋಗ ವಂಟಿಕೊಂಡಿತ್ತು. ಇತ್ತೀಚೆಗೆ ಅವಳಿಗೆ ಊಟ-ಪಾಟಗಳು ಕೂಡ ರುಚಿಸದಂತಾಗಿ ದ್ದವು. ಪೋಷ್ಟಮನ್ನನು ಕಣ್ಣಿಗೆ ಕಂಡೊಡನೆ ಕಕ್ಕಾವಿಕ್ಕಿಯಾಗಿ ಕೈಗೆಲಸಗಳನ್ನು ಚೆಲ್ಲಿ ಕೊಟ್ಟು, ಆತನು ತನ್ನನ್ನು ಹೆಸರುಗೊಂಡು ಕರೆಯುವನೇನೋ ಎಂದು ಅವಳು ಯಾವುದೊಂದು ನೆವ ಮಾಡಿ ತಲೆಬಾಗಿಲ ಕಡೆಗೆ ಧಾವಿಸಿ ಬರುತ್ತಿ ದ್ದಳು. "ಕುಮುದಿನಿ, ಇನ್ನು ನಿನಗಾರ ಪತ್ರ ಬರಬೇಕಾಗಿದೆಯೆಂದು ಪೋಷ್ಟ ಮನ್ನನುಕಂಡೊಡನೆಯೇ ನೀನು ಹೀಗೇಕೆ ಧಾವಿಸಿ ಹೋಗುವೆ?' ಎಂದು ನರ್ಮ ದೆಯು ವಲ್ಲಭರಾಯನ ಸಮಕ್ಷಮನೇ ಒಂದೆರಡು ಸಾರೆ ಕುಮುದಿನಿಗೆ ಕೇಳಿದ್ದಳು ಸಹ. ಕುಮುದಿನಿಯ ಬಗ್ಗೆ ಇದುವರೆಗೆ ಯಾವ ಕಿಲ್ಮಿಷವೂ ವಲ್ಲಭರಾಯನ ಮನಸ್ಸಿನಲ್ಲಿ ಬಾರದ್ದರಿಂದ, ತನ್ನ ಹೆಂಡತಿಯಾದ ನರ್ಮದೆಯು ಕೇಳಿದ ಪ್ರಶ್ನೆ ಯಿಂದ ಆಗ ಅವನಿಗೇನೂ ಅನಿಸಿರಲಿಲ್ಲ.

ಒಳ್ಳೇ ಸಂತೋಷದಲ್ಲಿರುವಂತೆ ನಟಿಸಿ ಕುಮುದಿನಿಯು ತನ್ನಷ್ಟಕ್ಕೆ ತಾನು ಶಂಕರ ರಾಯನೊಡನೆ ವರ್ತಿಸುತ್ತಿದ್ದಳು; ಆದರೆ ಮುಲಾಮಿನ ಬಂಗಾರವು ಎಷ್ಟು ಹೊಳೆ ದರೂ ಅದು ನಿಜವಾದ ಬಂಗಾರವೆಂತಾದೀತು? ಇತ್ತೀಚೆಗೆ ಶಂಕರರಾಯನಿಗೆ ಕುಮು ದಿನಿಯ ಸಹವಾಸದಿಂದ ಸುಖವೆನಿಸದಾಗಿತ್ತು. ಕುಮುದಿನಿಯ ಮನಸ್ಸು ಶಾಂತವಾಗ ಲಿಕ್ಕೆ ಏನು ಉಪಾಯ ಮಾಡಬೇಕೆಂಬ ಯೋಚನೆಯಲ್ಲಿ ಆತನೂ ಚಿಂತಾಕ್ರಾಂತನಾಗಿ ತೋರತೊಡಗಿದ್ದನು. ತನ್ನ ಅಂತಃಕರಣದ ವಿಷಯಗಳನ್ನು ತೋಡಿಕೊಳ್ಳಲಿಕ್ಕೆ ಕುಮುದಿನಿಗೆ ಕಮಲೆಯ ಹೊರತು ಬೇರೆ ಯಾವ ಜೀವದ ಗೆಳತಿಯೂ ಇರಲಿಲ್ಲ; ಆದರೆ ಈಗ ಅವಳು ಪರದೇಶಕ್ಕೆ ಹೊರಟು ಹೋದ್ದರಿಂದ ಕುಮುದಿನಿಯ ಹೃದ ಯವು ತಲ್ಲಣಿಸತೊಡಗಿತ್ತು. ಘೋರವಾದ ಚಿಂತಾನಲವು ಅವಳ ಅಂತರಂಗದಲ್ಲಿ ಹಾಗೆ ಧಗಧಗಿಸುತ್ತಿದ್ದರೂ ಆಕೆಯ ಮುಖದ ಮೇಲಿನ ತೇಜವು ಮಾತ್ರ ಒಂದಿಷ್ಟೂ

ಕಡಿಮೆಯಾಗಿರಲಿಲ್ಲ. ಆ ಬಿಡಾಡಿ ಸಾಧುವಿನ ಕಿವಿಮಾತುಗಳಿಂದ ನರ್ಮದೆಯು ಇತ್ತೀಚೆಗೆ ಇವಳನ್ನು ಹೆಚ್ಚಾಗಿ ಕಾಡುತ್ತಿರದಿದ್ದರೂ "ಹುಟ್ಟುಗುಣವು ಹುಗಿದರೂ ಹೋಗದೆಂಬ"ಂತೆ, ಅವಳ ಅಂತರಂಗದಲ್ಲಿಯ ಮತ್ಸರಾಗ್ನಿಯು ಚಕ್ರಬಡ್ಡಿ-ಮಹಾ ಬಡ್ಡಿಗಳಂತೆ ಒಂದೇಸವನೆ ಹೆಚ್ಚುತ್ತ ನಡೆದಿತ್ತು.

ವಲ್ಲಭರಾಯನು ಒಳ್ಳೇ ಬುದ್ಧಿವಂತನೂ ಪ್ರೋಕ್ತನೂ ಆಗಿದ್ದರೂ ಪ್ರಥಮ ದರ್ಶನದಲ್ಲಿಯೇ ಕಮಲಾಕಾಂತಸಾಧುವು ಆತನ ಮೇಲೆ ತನ್ನ ಛಾಪನ್ನು ಕೂಡ್ರಿಸಿ ಬಿಟ್ಟಿದ್ದನು. "ಇಂದು ತಾವು ಗುರುಗಳ ದರ್ಶನಕ್ಕೆ ಬರಲೇಬೇಕು; ಅಂದರೆ ಗುರು ಗಳಿಗೆ ಸಮಾಧಾನವಾಗುವುದು" ಎಂದು ನರ್ಮದೆಯು ಈ ಮೊದಲೊಮ್ಮೆ ಅಂದ ಕೂಡಲೆ ವಲ್ಲಭರಾಯನು ಆ ಬಿಡಾಡಿ ಸಾಧುವಿನ ಭಕ್ತಿಣಿ, ಸಂತಿಣಿ, ಶರಣಮ್ಮರೊ ಡನೆ ಕಮಲಾಕಾಂತ ಸಾಧುವಿನ ದರ್ಶನಕ್ಕೆ ಹೋಗಿದ್ದನು. ಒಳಿತು-ಕೆಡಕು ಸಂಗತಿ ಗಳ ಭವಿಷ್ಯವು ಗೊತ್ತಿದ್ದಿತೆಂದರೆ ಆದರಂತೆ ಯೋಗಾಯೋಗಗಳು ತಪ್ಪದೆ ಒದಗಿ ಬರುತ್ತವೆ. ಇದರಂತೆಯೇ ಆ ದಿನ ಕಮಲಾಕಾಂತಸಾಧುವು ತೀರ ಸಾದಾ ವೇಷ ಭೂಷಣಗಳನ್ನು ಧರಿಸಿಕೊಂಡದ್ದರಿಂದ ಆ ಬಿಡಾಡಿ ಸಾಧುವಿನ ಆ ಬಕವೃತ್ತಿಯನ್ನು ಕಂಡು ಎಂಥ ಚಾಣಾಕ್ಷ ಮನುಷ್ಯನಾದರೂ ಮೋಸಗೊಳ್ಳುತ್ತಿದ್ದನು; ಅಂದಮೇಲೆ ವಲ್ಲಭರಾಯನಂತಹ ಕೇವಲ ಭೋಳೇ ಭಾವಿಕನು ಮೋಸಗೊಂಡಿದ್ದರಲ್ಲೇನು ಚೋಜಿಗ? ಕಮಲಾಕಾಂತನು ವೇದಾಂತದ ಕೆಲವು ವಚನಗಳನ್ನು ಹೇಳಿ ವಲ್ಲಭ ರಾಯನನ್ನು ಚಕಿತಗೊಳಿಸಿದನು. ಅದರಿಂದ ವಲ್ಲಭರಾಯನು ಹೆಂಡತಿಯೊಡನೆ ಆ ಸಾಧುವಿನ ಬಲೆಯಲ್ಲಿ ಸಿಕ್ಕನು. ಅದನ್ನು ಕಂಡು ನಿರ್ಮಲೆಗಂತೂ ಕಟ್ಟಾಡಿಸಿ ದಂತಾಯಿತು! ಆಗಲವಳು ಮುರಕ ಮಾಡುತ್ತ ಮಾಡುತ್ತ ಕಮಲಾಕಾಂತನನ್ನು ಕುರಿತು:—"ಸಾಧುಗಳೇ, ಒಂದರ ಬದಲು ಈ ಜೋಡು ಹಕ್ಕಿಗಳನ್ನೇ ನಿಮ್ಮ ಬಲೆ ಯಲ್ಲಿ ತಂದು ಸೇರಿಸಿರುತ್ತೇನೆ; ಆದರೆ ನೀವು ಇನ್ನು ಈ ನಿರ್ಮಲೆಯನ್ನು ಮಾತ್ರ ಮರೆಯ ಬೇಡಿರಿ ಕಂಡಿರಾ? ಇಡೀ ಜನ್ಮದ ವೃತ್ತಿಯು ಸಹಜವಾಗಿ ಕೈಸೇರು ವಂತಹ ಜಾಲವನ್ನು ಇವರ ಮೇಲೆ ಒಡ್ಡಿ ಬಿಡಿರಿ. ಅಂದರಾಯಿತು."

ಪಟ್ಟದ ಶರಣಮ್ಮನ ಆ ಮಾತುಗಳನ್ನು ಕೇಳಿ ಮೋದಗೊಂಡ ಆ ಬಿಡಾಡಿ ಸಾಧುವು ಮೆಲ್ಲನೆ ಅವಳ ಗಲ್ಲದ ಮೇಲೊಮ್ಮೆ ಚಿಟುಕು ಹೊಡೆದು ವರಪ್ರದಾನ ಮಾಡಿದನು. ಆ ಸಾಧುವು ಬಕನಂತೆ ಕೇವಲ ನಿರಿಚ್ಛನಿದ್ದನು; ಆದರೆ ಆ ನಿರ್ಮಲಾ ಶರಣಮ್ಮನ ಕಿವಿಮಾತಿನಿಂದ ವಲ್ಲಭರಾಯನು ಅರಿವೆ-ಅಂಚಡಿ, ಹಣ-ಕಾಸು, ವಸ್ತ್ರ-ಒಡವೆ ಮುಂತಾದ ಯಾವ ಯಾವ ಜೀನಸುಗಳನ್ನು ಪ್ರಸಾದೇಚ್ಛೆಯಿಂದ ತಂದು ಕೊಡುತ್ತಿದ್ದನೋ, ಅವೆಲ್ಲವುಗಳನ್ನು ಕೇವಲ ನಿರಿಚ್ಛೆಯಿಂದ ಸ್ವೀಕರಿಸುವ ಪ್ರಸಂಗವು ಆ ಸಾಧುವಿಗುಂಟಾಗುತ್ತಿತ್ತು; ಯಾಕಂದರೆ, ಅದು ಮಹಂತರ ಆಶ್ರಮ ಸ್ಥಾನವಾಗಿತ್ತಲ್ಲವೇ? ಭಕ್ತಗಣಗಳು ವಿಮ್ಮುಖರಾಗಿ ಹೋದರೆ, ಸಾಧುಗಳ ಸಾಧುತ್ವ ವೆಲ್ಲುಳಿದೀತು? ಅದರಿಂದ ಲೋಕಕಲ್ಯಾಣಕ್ಕಾಗಿಯೇ ದೊಡ್ಡವರ ಅವತಾರವೆಂಬ

ಸಾಣ್ಣುಡಿಗೆ ಕಳಂಕಹತ್ತೀತು.

ಈ ಬಗೆಯಾಗಿ ವಲ್ಲಭರಾಯನ ವರ್ತನವು ಹೆಂಡತಿಯ ಮೂಲಕ ದಿನದಿನಕ್ಕೆ ವಿಪರೀತವಾಗತೊಡಗಿತು. ಒಂದು ದಿನ ಕುಮುದಿನಿಗೂ ಗುರುಚರಣದ ದರ್ಶನ ಮಾಡಿಸಬೇಕೆಂಬ ಬಗ್ಗೆ ಆತನು ತನ್ನ ಹೆಂಡತಿಯೊಡನೆ ಚರ್ಚಿಸಹತ್ತಿದ್ದನು. ಇಷ್ಟ ರಲ್ಲಿ ಒಂದು ಸಾರೋಟ ಗಾಡಿಯು ಬಂದು ಅವರ ಬಾಗಿಲೆದುರಿಗೆ ನಿಂತಿತು. ಆಗ ನರ್ಮದೆಯು ಸಹಜವಾಗಿ ಕಿಟಕಿಯೊಳಗಿಂದ ಇಣಿಕಿ ನೋಡಲು, ಆ ಗಾಡಿಯೊಳ ಗಿಂದ ಪ್ರಭಾಕರನು ಇಳಿಯುತ್ತಿರುವದು ಅವಳಿಗೆ ಕಾಣಿಸಿತು. ಆಗ ಅವಳು ತನ್ನ ಗಂಡನನ್ನು ಕುರಿತು:—"ಅಂದು ಕುಮುದಿನಿಯ ಆಭರಣಗಳನ್ನು ತಂದು ಕೊಟ್ಟು ಹೋಗಿದ್ದವರು ಬಂದಂತೆ ಕಾಣುತ್ತದೆ." ಎಂದು ಅನ್ನಲು, ವಲ್ಲಭರಾಯನು ತಾನೂ ಕಿಟಕಿಯೊಳಗಿಂದ ಹೊರಗೆ ಇಣಿಕಿ ನೋಡಬೇಕೆನ್ನುವಷ್ಟರಲ್ಲಿ ಆ ಗೃಹ ಸ್ಥನು ಪಾವಟಿಗೆಗಳನ್ನೇರುತ್ತಿರುವ ಕಾಲಸಪ್ಪಳವು ಕೇಳ ಬಂದಿತು. ಪ್ರಭಾಕರ ನನ್ನು ಕಂಡು ವಲ್ಲಭರಾಯನು ನಮಸ್ಕಾರ ಮಾಡಿ "ಬನ್ನಿರಿ, ಕುಳ್ಳಿರಿ" ಎಂದಂದನು. ಪ್ರಭಾಕರನು ಸಮೀಪದ ಒಂದು ಕುರ್ಚಿಯಲ್ಲಿ ಕುಳಿತನು. ಆಗ ವಲ್ಲಭರಾಯನು ಪ್ರಭಾಕರನ ಮುಖದ ಕಡೆಗೆ ನೋಡುತ್ತ:—"ವಿಜಾಪುರದಿಂದ ಬಂದಿರೇನು?"

"ಅಹುದು; ನಾನು ಈ ಮೊದಲು ಗದಗಿನಿಂದ ಮತ್ತೆ ಬರುವೆನೆಂದು ಹೇಳಿ ಹೋಗಿದ್ದೆನು; ಆದರೆ ಅವಸರದ ಕೆಲಸದ ಮೂಲಕ ನಾನು ಅತ್ತಿಂದತ್ತೇ ವಿಜಾಪುರಕ್ಕೆ ಹೋಗಬೇಕಾಯಿತು; ನನಗೆ ಆಗ ಆ ಸುಬುದ್ಧಿಯುಂಟಾಗದಿದ್ದರೆ ಭವಾನರಾಯ ನಿಗೂ ನನಗೂ ಭೆಟ್ಟಿಯೇ ಆಗುತ್ತಿರಲಿಲ್ಲ."

ಭವಾನರಾಯನ ಹೆಸರು ಹೊರಟೊಡನೆಯೇ ವಲ್ಲಭರಾಯನ ಮುಖಚರ್ಯೆ ಯು ತುಸ ಖಿನ್ನವಾಯಿತು. ಭವಾನರಾಯರ ನಿಧನಕ್ಕೆ ಅಂಥ ಆಕಸ್ಮಿಕ ಪ್ರಸಂಗ ವೇನುಂಟಾಯಿತೆಂದು ಆತನು ಪ್ರಭಾಕರನಿಗೆ ಕೇಳಿದನು. ಪ್ರಭಾಕರನಿಗೆ ಭವಾನ ರಾಯನ ನಿಧನದ ನಿಜವಾದ ಕಾರಣವು ಭವಾನರಾಯನಿಂದಲೇ ತಿಳಿದಿತ್ತು; ಆದರೆ ಅದನ್ನು ಬೇರೆಯವರೆದುರಿಗೆ ಹೇಳುವಂತಿರಲಿಲ್ಲ. ಸ್ವರ್ಗಸ್ಥನಾದ ತನ್ನ ಪರಮ ಮಿತ್ರನ ಮರ್ಯಾದೆಯುಳಿಸುವದಕ್ಕಾಗಿ ಆ ಸಂಗತಿಯನ್ನು ಗೌಪ್ಯವಾಗಿರಿಸುವುದೇ ಯೋಗ್ಯವಾಗಿತ್ತು. ಆದರಿಂದ ಪ್ರಭಾಕರನು ಏನಾದರೊಂದು ಹೇಳಿ ವಲ್ಲಭ ರಾಯನ ಸಮಾಧಾನ ಮಾಡಿದನು. ಬಳಿಕ ಆತನು ಕುಮುದಿನಿಯ ಬಗ್ಗೆ ವಲ್ಲಭ ರಾಯನನ್ನು ಕೇಳಿದನು. ಕುಮುದಿನಿಯ ಬಗ್ಗೆ ತನಗೆ ಏನು ಅನಿಸುತ್ತಿತ್ತೋ ಅದನ್ನು ಆತನು ಪ್ರಭಾಕರನಿಗೆ ಮರೆಮಾಜದೆ ತಿಳಿಸಿದನು. ಕುಮುದಿನಿಯ ಭ್ರಮಿಷ್ಟವೃತ್ತಿ ಯನ್ನು ವಲ್ಲಭರಾಯನ ಮುಖದಿಂದ ಕೇಳಿ ಪ್ರಭಾಕರನಿಗೆ ಕೆಡಕೆನಿಸಿತು. ಆದರಿಂದ ಅವನು "ರಾಯರೇ ತಮ್ಮ ಪ್ರೀತಿಯ ಜನರ ಮರಣದ ಆಕಸ್ಮಿಕ ಸಂಗತಿಯಿಂದ ನಮ್ಮ-ನಿಮ್ಮುಗಳ ಮನಸ್ಸಿನ ಮೇಲೆಯೇ ಇಷ್ಟು ವಿಲಕ್ಷಣ ಪರಿಣಾಮವಾಗುತ್ತಿರಲು, ಕುಮುದಿನಿಯಂತಹ ಕಂದಮ್ಮನಿಗೇನೆನಿಸಿರಬಹುದು? ಇರಲಿ. ಸದ್ಯಕ್ಕೆ ಅವಳು

ಎಲ್ಲಿರುತ್ತಾಳೆ?"

"ಕೆಳಗೆ ಅವಳು ನಿಮ್ಮ ದೃಷ್ಟಿಗೆ ಬೀಳಲಿಲ್ಲೇನು?" ಎಂದು ವಲ್ಲಭರಾಯನು ನರ್ಮದೆಯ ಕಡೆಗೆ ಹೊರಳಿ ನೋಡುತ್ತ ನುಡಿದನು; ಹಾಗು ನರ್ಮದೆಯನ್ನು ಕುರಿತು:—"ನೀನು ಹೋಗಿ ಕುಮುದಿನಿಯನ್ನು ಇಲ್ಲಿಗೆ ಕಳಿಸಿಕೊಡು" ಎಂದು ಆಜ್ಞಾಪಿಸಿದನು. ಕೂಡಲೆ ನರ್ಮದೆಯು ಕೆಳಗಿಳಿದು ಹೋಗಲು. ಪ್ರಭಾಕರನು:— "ವಲ್ಲಭರಾಯರೇ, ನಾನು ಬೇರೊಂದು ಉದ್ದೇಶದಿಂದಿಲ್ಲಿಗೆ ಬಂದಿರುತ್ತೇನೆ. ಕುಮುದಿನಿಯನ್ನು ನಾಲ್ಕು ದಿನ ವಿಜಾಪುರಕ್ಕೆ ಕರೆದೊಯ್ದರೆ ಅವಳ ಮನಸ್ಸಿನ ಸ್ಥಿತಿಯು ತುಸ ಬದಲಾದೀತಲ್ಲದೆ, ಅವಳ ತಾಯಿಗೂ ತುಸ ಸಮಾಧಾನವೆನಿಸ ಬಹುದಾಗಿದೆ."

ಪ್ರಭಾಕರರೇ, ಕುಮುದಿನಿಯನ್ನು ನಿಮ್ಮೊಡನೆ ಕಳಿಸಿಕೊಡಲು ನನ್ನ ಅಡ್ಡಿ ಯಿಲ್ಲ; ಆದರೆ ಅವಳು ಬರಲಿಕ್ಕೆ ಒಪ್ಪುವಳೊ? ವಲ್ಲಭರಾಯನು ಹೀಗೆ ಅನ್ನುತ್ತಿ ರಲು, ಕುಮುದಿನಿಯು ಅಟ್ಟವನ್ನೇರಿ ಬಂದಳು. ಪ್ರಭಾಕರನನ್ನು ಕಂಡ ಕೂಡಲೆ ಅವಳ ಅಂತಃಕರಣವು ಉಕ್ಕೇರಿತು. ಪ್ರಭಾಕರನು ಆಕೆಯ ಕಡೆಗೆ ಕರುಣಾ ಪೂರ್ಣದೃಷ್ಟಿಯಿಂದ ನೋಡುತ್ತ:—"ಕುಮುದಿನೀ, ದೈವದ ಮುಂದೆ ಯಾರ ಆಟ ನಡೆಯುವದು? ನಿನ್ನ ಸುಖ-ಶಾಂತಿಗಳನ್ನು ನೋಡಲಿಕ್ಕೆ ಭವಾನರಾಯರು ಇನ್ನೂ ಕೆಲ ದಿನ ಬದುಕಿರಬೇಕಾಗಿತ್ತು; ಆದರೆ ದೈವಲೀಲೆಯನ್ನು ವರ್ಣಿಸುವರಾರು? ನೀನು ನಿನ್ನ ಕಣ್ಣುಗಳನ್ನೊರಸು. ಹೀಗೆ ಅತ್ತು-ಅತ್ತು ಸುಮ್ಮನೆ ಜೀವಕ್ಕೆ ತೊಂದರೆ ಮಾಡಿಕೊಳ್ಳಬೇಡ. ತಮ್ಮ ಜನರು ಎಷ್ಟು ಜೀರ್ಣರಾದರೂ ಅವರು ತಮಗೆ ಬೇಕೇ ಅನಿಸುವರು"

"ಅವ್ವನು ಹೇಗಿರುವಳು?" ಕುಮುದಿನಿಯು ಕಣ್ಣೊರೆಸುತ್ತ ಕೇಳಲು,

"ನಿನ್ನನ್ನು ನಾಲ್ಕು ದಿನ ಕರೆತರಬೇಕೆಂದು ಹೇಳಿ ಅವರು ನನ್ನನ್ನು ಕಳಿಸಿ ಕೊಟ್ಟಿರುತ್ತಾರೆ; ನೀನು ಅಲ್ಲಿಗೆ ಕೆಲ ದಿನಗಳ ಮಟ್ಟಿಗೆ ಬರುತ್ತೀಯಷ್ಟೆ?"

"ನಾನೇನು ಹೇಳಲಿ? ಭಾವನವರು ಹೇಗೆ ಹೇಳುವರೋ ಹಾಗೆ ಕೇಳುವ ವಳು" ಎಂದು ಕುಮುದಿನಿಯು ಕೆಳಮೋರೆಯಿಂದ ನುಡಿಯಲು,

"ಒಳ್ಳೇದು. ನೀನಿನ್ನು ನಿನ್ನ ಕೆಲಸಕ್ಕೆ ಹೊರಡು. ನಾನೂ ವಲ್ಲಭರಾಯರೂ ಆ ಬಗ್ಗೆ ಆಲೋಚಿಸುತ್ತೇವೆ" ಹೀಗೆಂದು ಪ್ರಭಾಕರನು ಹೇಳಲು, ಕುಮುದಿನಿಯು ಅಲ್ಲಿಂದ ಕೆಳಗೆ ಹೊರಟಳು. ಆಗ ವಲ್ಲಭರಾಯನು ಅವಳನ್ನು ಹೋಗಗೊಡದೆ, "ಕುಮುದಿನೀ, ಇಂದು ಈ ಅಭ್ಯಾಗತರ ಭೋಜನವು ನಮ್ಮಲ್ಲಿಯೇ ಆಗತಕ್ಕದ್ದು."

ಕುಮುದಿನಿಯು "ಒಳ್ಳೇದೆ"ಂದು ಹೇಳಿ, ಕೆಳಗಿಳಿದು ಹೋದಳು. ಬಳಿಕ ಪ್ರಭಾಕರನು:—"ವಲ್ಲಭರಾಯರೇ, ಈ ಮೊದಲಿಗಿಂತ ಈಕೆಯು ಹೆಚ್ಚಾಗಿ ಸೊರಗಿ ರುತ್ತಾಳೆ."

ವಲ್ಲಭ:—ಹೃದ್ರೋಗದಂತಹ ಬೇರೆ ಕಠಿಣ ರೋಗವಿರುವದೇ?

"ಅದಿರಲಿ. ವಲ್ಲಭರಾಯರೇ, ತಾವು ಕುಮುದಿನಿಯನ್ನು ನನ್ನೊಡನೆ ವಿಜಾಪುರಕ್ಕೆ ಕಳಿಸಿ ಕೊಡುವಿರಷ್ಟೇ?"

"ಪ್ರಭಾಕರಪಂತರೇ, ಮನೆಯ ಯಜಮಾನನೆಂದು ನಾನು ಅವಳನ್ನು ನಿಮ್ಮೊಡನೆ ಕಳಿಸಲಿಕ್ಕೆ ಒಪ್ಪುತ್ತಿದ್ದರೂ, ನೀವು ಆಕೆಯ ಗಂಡನನ್ನು ಕೇಳುವದೇ ವಿಹಿತವು."

ವಲ್ಲಭರಾಯನ ಬಾಯಿಂದ ಈ ಶಬ್ದಗಳು ಹೊರ ಹೊರಡುತ್ತಿರುವಷ್ಟರಲ್ಲಿ ಇದುವರೆಗೆ ಹೊರಗೆ ಹೋಗಿದ್ದ ಶಂಕರರಾಯನು ಅಲ್ಲಿಗೆ ಬಂದೇ ಬಿಟ್ಟನು; ಹಾಗು ಪ್ರಭಾಕರನನ್ನು ಕಂಡು ನಮಿಸಿ "ಯಾವಾಗ ಬಂದಿರಿ?" ಎಂದು ಪ್ರಶ್ನೆ ಮಾಡಿದನು. ಪ್ರಭಾಕರನು ತಮ್ಮಲ್ಲಿಗೆ ಬಂದ ಕಾರಣವನ್ನು ವಲ್ಲಭರಾಯನು ತನ್ನ ತಮ್ಮನಿಗೆ ತಿಳಿಸಿದನು. "ನಿಮ್ಮ ಮನಸ್ಸಿಗೆ ಸರಿದೋರಿದಂತೆ ಮಾಡಬಹುದೆ"ಂದು ಶಂಕರರಾಯನು ಅಣ್ಣನಿಗೆ ಹೇಳಲು, ಅವರಿಬ್ಬರಿಂದಲೂ ಕುಮುದಿನಿಯ ಪ್ರಯಾಣಕ್ಕೆ ಸಮ್ಮತಿ ದೊರೆಯಿತು. ಊಟವಾದ ಮೇಲೆ ಅವರಿಬ್ಬರೂ ಅದೇ ಉಪ್ಪರಿಗೆಯ ಮೇಲೆ ವಾಮಕುಕ್ಷಿಗಾಗಿ ಪವಡಿಸಿದರು. ಇಳಿಹೊತ್ತಿನಲ್ಲಿ ನಿರ್ಮಲಾ ಶರಣಮ್ಮನು ಬರಲು, ನರ್ಮದೆಯು ಅವಳೊಡನೆ ಕೆಳಗಿನ ಕೋಣೆಯಲ್ಲೇ ಮಾತಾಡುತ್ತ ಕುಳಿತಳು. ಶಂಕರರಾಯನು ಮಾತ್ರ ಕುಮುದಿನಿಯೊಡನೆ ತನ್ನ ಕೋಣೆಯಲ್ಲಿ ಮಾತನಾಡುತ್ತ ಕುಳಿತನು.

ತನ್ನ ಮಲತಾಯಿಯಾದ ಸರಸಿಯು ಒಂದೇಸವನೆ ತನ್ನನ್ನು ಪೀಡಿಸುತ್ತಿದ್ದರೂ ಕುಮುದಿನಿಯ ನಿಷ್ಕಲ್ಮಿಷವಾದ ಮನಸ್ಸಿನಲ್ಲಿ ಅವಳ ಬಗ್ಗೆ ಕೊಂಚವೂ ಅನಾದರ-ಅಸಡ್ಡೆಗಳಿರದ್ದರಿಂದ, ಆ ತನ್ನ ಮಲತಾಯಿಯು ತನ್ನ ಸತ್ಯಾನಾಶಮಾಡುವದಕ್ಕಾಗಿ ಕಾರಸ್ಥಾನಗಳನ್ನು ಹೂಡಿರಬಹುದೆಂಬದರ ಅನುಮಾನವು ಆ ನಿಷ್ಪಾಪ ಅಂತಃಕರಣದ ಯುವತಿಯಲ್ಲಿ ಒಮ್ಮೆ ಕೂಡ ಉಂಟಾಗಿರಲಿಲ್ಲ. ಆದರಿಂದ ತಾನು ಒಮ್ಮೆ ತನ್ನ ಮಲತಾಯಿಯನ್ನು ಕಂಡು ಬರಬೇಕೆಂದು ಕುಮುದಿನಿಗೆ ಅನಿಸಹತ್ತಿತು. "ನೀನು ವಿಜಾಪುರಕ್ಕೆ ಹೋಗುತ್ತೀಯೇನು?" ಎಂದು ಶಂಕರರಾಯನು ಕೇಳಿದೊಡನೆಯೇ ಹೋಗಿ ಬರುತ್ತೇನೆಂದು ಅವಳು ಹೇಳಿದಳು. ಶಂಕರರಾಯನಾದರೂ ಅವಳಿಗೆ ಯಾವ ಬಗೆಯ ಆತಂಕವನ್ನೂ ಮಾಡದೆ ಸಮ್ಮತಿಯನ್ನಿತ್ತನು. ಆದರಿಂದ ಅಂದು ರಾತ್ರಿಯ ಊಟವಾದ ಬಳಿಕ ಕುಮುದಿನಿಯು ಪ್ರಭಾಕರನೊಡನೆ ವಿಜಾಪುರಕ್ಕೆ ಹೊರಟಳು.

ಸಾಯುವ ಕಾಲಕ್ಕೆ ಭವಾನರಾಯನು "ನನ್ನ ಮಗಳನ್ನು ಈ ನನ್ನ ೨ನೇ ಹೆಂಡತಿಯಾದ ಚಂಡಾಲ ಸರಸಿಯ ಕೈಯಿಂದ ಪಾರುಮಾಡಿರಿ"ಎಂದು ನಿಕ್ಷುಣ್ಣವಾಗಿ ಹೇಳಿದ್ದರೂ ಪ್ರಭಾಕರನು ಆ ಕುಮುದಿನಿ ಎಂಬ ಹರಿಣಿಯನ್ನು ಸರಸಿಯೆಂಬ ಹೆಣ್ಣುಹುಲಿಯ ಗುಹೆಗೆ ಕರೆದೊಯ್ಯುತ್ತಿರುವದನ್ನು ಕಂಡು ವಾಚಕರು ಘೋರವಾದ ಚಿಂತೆಗೊಳಗಾಗದಿರರು; ಆದರೆ ವಸ್ತುಸ್ಥಿತಿಯು ಬೇರೆಯಿತ್ತು. ಕುಮುದಿನಿ

ಯನ್ನು ನಾಲ್ಕು ದಿನಗಳ ಮಟ್ಟಿಗೆ ತನ್ನ ಮನೆಗೆ ಕರೆದೊಯ್ದು ಅವಳನ್ನು ಸಂತೈಸಿ ಕಳಿಸಬೇಕೆಂದು ಪ್ರಭಾಕರನ ಮನೋಗತವಾಗಿತ್ತು; ಆದರೆ ಭವಾನರಾಯ ಹಾಗು ತನ್ನಲ್ಲಿ ಎಷ್ಟೋ ಸ್ನೇಹವಿದ್ದರೂ, ನಾಮಮಾತ್ರಕ್ಕೆ ಕುಮುದಿನಿಯ ಮಲತಾಯಿ ಯೆಂಬವಳು ಬಳ್ಳಾರಿಯಲ್ಲಿರುತ್ತಿರಲು, ಕುಮುದಿನಿಯಂತಹ ಯುವತಿಯನ್ನು ತಮ್ಮಲ್ಲಿಗೇ ಕಳಿಸಿಕೊಡಿರೆಂದು ವಲ್ಲಭರಾಯನಿಗೆ ತಿಳಿಸುವದು ಪ್ರಭಾಕರನಿಗೆ ಯೋ-ಗ್ಯವೆನಿಸಲಿಲ್ಲ; ಮತ್ತು ಒಂದು ವೇಳೆ ಆತನು ಹಾಗೆ ಅಂದಿದ್ದರೆ ಅದು ವಲ್ಲಭರಾಯ ನಿಗಾದರೂ ಸರಿದೋರುವದೋ ಇಲ್ಲವೋ ಎಂಬ ಬಗ್ಗೆ ಅವನಿಗೆ ಅನುಮಾನವೆನಿಸಿ ದ್ದರಿಂದ, ಶುದ್ಧ ಹೇತುವಿಗಾಗಿ ಕ್ಷಣಹೊತ್ತಿನ ವರೆಗೆ ಸುಳ್ಳಾಡುವ ಪಾಪವನ್ನು ಆತನು ಆಚರಿಸಿದ್ದನು.

ಬಳ್ಳಾರಿಗೆ ತಲುಪುತ್ತಲೆ ಪ್ರಭಾಕರನು ಒಂದು ಬಾಡಿಗೆಯ ಝಟಕಾ ಬಂಡಿ ಯನ್ನು ಗೊತ್ತುಮಾಡಿ ಅದನ್ನು ತನ್ನ ಬಿಡಾರಿಗೆ ಸಾಗಿಸಲು ಹೇಳಿದನು. ಆಗ ಕುಮುದಿನಿಯು: "ಅಪ್ಪನು ಈಗ ಮೊದಲಿನ ಮನೆಯನ್ನು ಬಿಟ್ಟಿರುವನೇನು?" ಎಂದು ಕೇಳಲು, ಪ್ರಭಾಕರನು ಅವಳಿಗೆ ಏನೇನೋ ಹೇಳಿ ಅವಳನ್ನು ಸುಮ್ಮನಿರಿಸಿ ದನು. ಕುಮುದಿನಿಯು ಪ್ರಭಾಕರನ ಮನೆಗೆ ಹೋಗಲು, ಆತನ ಹೆಂಡತಿಯು ಅವಳನ್ನು ಬಹು ಮಮತೆಯಿಂದ ಕಂಡಳು; ಕುಮುದಿನಿಯ ಮನಸ್ಸನ್ನು ನಾನಾ ಪರಿಯಿಂದ ಸಮಾಧಾನ ಪಡಿಸಿದಳು. ಆದರಿಂದ ಕುಮುದಿನಿಯು ಅಂದಿನ ಮಟ್ಟಿಗಾ ದರೂ ತನ್ನ ಎಲ್ಲ ದುಃಖವನ್ನು ಮರೆತು ಬಿಟ್ಟಳು.

ತನ್ನ ಹೆಂಡತಿಯು ಡಬ್ಬಿಯಿಂದ ಅಪ್ಪಳಿಸಿದ ಪೆಟ್ಟಿನಿಂದ ಭವಾನರಾಯನು ಮುಂದೆ ಒಂದೆರಡು ದಿನಗಳಲ್ಲಿಯೇ ಕಾಲವಾಗಿದ್ದನು. ಭವಾನರಾಯನು ತೀರಿದ ನಂತರ ಸರಿಸಿಯು ಆ ತನ್ನ ಮೊದಲನೇ ಮನೆಯಲ್ಲೇ ಇರುತ್ತಿದ್ದಳು. ಇನ್ನು ಎಲ್ಲಿ ಯಾದರೂ ಬೇರೆ ಚಿಕ್ಕ ಮನೆಯನ್ನು ನೋಡಿಕೊಂಡು ಅಲ್ಲಿಗೆ ಹೋಗಿರಬೇಕೆಂದು ಅವಳು ನಿಶ್ಚಯಿಸಿದ್ದಳು; ಆದರೆ ಇನ್ನೂ ಹಾಗೆ ಮಾಡಿರಲಿಲ್ಲ. ಮೊದಲೇ ಮರ್ಕಟ; ಅದಕ್ಕೆ ಸರೆ ಕುಡಿಸಿ, ಮತ್ತೆ ಚೇಳು ಕಚ್ಚಿಸಿದರೆ ಹೇಗಾಗುವದೋ ಹಾಗೆಯೇ ಆ ಸರ ಸಿಯ ಮನಃಸ್ಥಿತಿಯಾಗಿತ್ತು. ಭವಾನರಾಯನ ಆ ಆಕಸ್ಮಿಕ ನಿಧನಕ್ಕೆ ತನ್ನ ಮಲಮಗ ಳಾದ ಆ ಪೋಡಿ ಕುಮುದಿನಿಯೇ ಕಾರಣಳೆಂದು ಆ ಸಟವಿಯ ಖಾತ್ರಿಯಾದ್ದರಿಂದ, ಅವಳು ಕುಮುದಿನಿಯನ್ನು ಒಂದೇ ಸವನೆ ಶಪಿಸುತ್ತಿದ್ದಳು. ನಾನು ನಮ್ಮವ್ವ ನನ್ನೊಮ್ಮೆ ಕಂಡು ಬರುತ್ತೇನೆಂದು ಕುಮುದಿನಿಯು ಮರುದಿನ ಪ್ರಭಾಕರನಿಗೆ ಕೇಳಿದಳು; ಆದರೆ ಆತನು ಆಕೆಯನ್ನು ಸರಸಿಯ ಕಡೆಗೆ ಹೋಗಗೊಡಲಿಲ್ಲ. ನೀನು ಗಂಡನ ಮನೆಗೆ ಹೊರಡುವ ಮೊದಲು ನಾವೆಲ್ಲರೂ ಕೂಡಿ ಹೋಗಿ ಒಮ್ಮೆ ನಿಮ್ಮ ಮಲತಾಯಿಯನ್ನು ಕಾಣೋಣವೆಂದು ಹೇಳಿ, ಕುಮುದಿನಿಯನ್ನು ಸುಮ್ಮನಿರಿಸಿ ದನು. "ನಿನ್ನನ್ನು ಕಂಡು ನಿನ್ನ ತಾಯಿಯ ದುಃಖವು ಹೆಚ್ಚೀತೆ"ಂದು ಪ್ರಭಾಕರನು ಹೇಳಿದ ಮಾತು ಕುಮುದಿನಿಗೆ ಸರಿದೋರಿದ್ದರಿಂದ, ಅವಳೂ ತೆಪ್ಪಗಾದಳು.

ಕುಮುದಿನಿಯು ಪ್ರಭಾಕರನೊಡನೆ ವಿಜಾಪುರಕ್ಕೆ ಹೊರಟು ಹೋದ ಮರು ದಿನ ಬೆಳಗ್ಗೆ ವಲ್ಲಭರಾಯನು ತನ್ನ ಮನೆಯ ತಲೆಬಾಗಿಲ ಬಳಿಯಲ್ಲಿ ಸಹಜವಾಗಿ ನಿಂತುಕೊಂಡಿದ್ದನು. ನರ್ಮದೆಯು ಅಡಿಗೆಯ ಮನೆಯಲ್ಲಿದ್ದಳು ಶಂಕರರಾಯನು ಎಲ್ಲಿಯೋ ಹೊರಗೆ ಹೋಗಿದ್ದನು. ಇಷ್ಟರಲ್ಲಿ ಪೋಷ್ಟಮನ್ನನು ಬಾಗಿಲ ಬಳಿಗೆ ಬಂದು ಕುಮುದಿನಿಯ ಹೆಸರಿನ ಒಂದು ಪತ್ರವನ್ನು ವಲ್ಲಭರಾಯನ ಕೈಗಿತ್ತನು. ಪತ್ರದ ಮೇಲಿನ ಅಕ್ಷರಗಳನ್ನು ಓದಿ ಅದು ಸರಸಿಯಿಂದಲೇ ಬಂದಿರಬೇಕೆಂದು ತರ್ಕಿಸಿ, ವಲ್ಲಭರಾಯನು ಅದನ್ನು ಅಟ್ಟಕ್ಕೆತಕ್ಕೊಂಡು ಹೋದನು. ಶಂಕರರಾಯನು ಬಂದ ಮೇಲೆ ಅವನಿಗೆ ಅದನ್ನು ಕೊಡಬೇಕೆಂದು ಯೋಚಿಸಿ, ಆ ಪತ್ರದ ಮೇಲೆ ಮೂಡಿದ್ದ ಪೋಷ್ಟಿನ ಮುದ್ರೆಗಳನ್ನು ನೋಡುತ್ತ ಕುಳಿತನು. ಇಷ್ಟರಲ್ಲಿ ಆತನ ಮನಸ್ಸಿನಲ್ಲಿ ಏನು ಬಂದಿತೋ ಅದಾರು ಬಲ್ಲರು? ಅವನು ಆ ಪತ್ರದ ಚೀಲವನ್ನು ಹರಿದು ಒಳಗಿನ ಪತ್ರವನ್ನು ಓದತೊಡಗಿದನು. ಪತ್ರವನ್ನೋದುವದು ಮುಂದರಿದ ಹಾಗೆ ವಲ್ಲಭರಾಯನ ಮುಖಚರ್ಯೆಯು ಭಯಂಕರವಾಗಿ ತೋರತೊಡಗಿತು. ಆತನ ಕಣ್ಣುಗಳು ಕೆಕ್ಕರಿಸಿದವು. ಸಂತಾಪಾತಿರೇಕದಿಂದ ಆತನ ತಲೆಯೊಳಗಿಂದ ಅಗ್ನಿ ಜ್ವಾಲೆಗಳು ಹೊರಚಿಮ್ಮಹತ್ತಿದವು. ಆಗ ಆತನು ದವಡೆಯನ್ನು ಕಚ್ಚುತ್ತ ತನ್ನಷ್ಟಕ್ಕೆ ತಾನೇ:—"ಈ ಸೆಟವಿಯು ನಮ್ಮ ಮನೆತನದ ಮರ್ಯಾದೆಗೆ ಕಲಂಕ ಹಚ್ಚಿದಳು! ನಮ್ಮ ಶಂಕರನನ್ನು ಮೋಸಗೊಳಿಸಿದಳು. ನಿನ್ನೆ ಬಂದಿದ್ದ ಆ ನೀಚನು ಬೇರೆ ಯಾರೂ ಆಗಿರದೆ...."

ವಲ್ಲಭರಾಯನ ಮುಖದಿಂದ ಆ ಅಭದ್ರ ಶಬ್ದಗಳು ಹೊರಟಿದ್ದರೂ ಆ ನಿಷ್ಪಾಪ ಕುಮುದಿನಿಯ ಮೇಲೆ ಇಲ್ಲದ ಸಲ್ಲದ ಆರೋಪಗಳನ್ನು ನಾವು ಹೊರಿಸಲಾರೆವು. ಹಾಗು ವಲ್ಲಭರಾಯನಿಗಾದರೂ ನಾವು ಹೇಳುವದೇನಂದರೆ:—ವಲ್ಲಭರಾಯರೇ, ನೀವು ಒಳ್ಳೇ ಬುದ್ಧಿವಂತರು. ಪೋಕ್ತರು. ಸಮಂಜಸರು. ನಿಮ್ಮಂಥವರಿಗೆ ಬುದ್ಧಿ ಹೇಳುವದೆಂದರೆ, ನಮ್ಮದು ನಮಗೆ ಹೇಗೆ ಹೇಗೋ ಅನಿಸುತ್ತದೆ. ರಾಯರೇ, ನಿಮ್ಮ ಜಾಣತನವೆಲ್ಲಿ ಅಡಗಿತು? ಆ ಲಚ್ಯಾನು ಮೇಲ್ವಿಳಾಸವನ್ನು ಸರಿಯಾಗಿ ಬರೆಯದ್ದರಿಂದ ಆ ಪತ್ರವು ಹಲವು ಊರಿಗೆ ಹೋಗಿ ಅಲ್ಲಲ್ಲಿಯ ಪೋಷ್ಟಿನ ಮುದ್ರೆಗಳನೊತ್ತಿಸಿಕೊಂಡು ಇಂದು ಅದು ನಿಮ್ಮಲ್ಲಿಗೆ ಬಂದಿದೆ. ಇಂಥ ನೀಚ ಕೆಲಸ ಮಾಡುವಾಗ ಮೊದಲನೇ ದಿನವೇ ಪತ್ರ ಕಳಿಸಿ, ಮರುದಿನವೇ ಸ್ವಂತ ಬರುವಂತಹ ಮೂರ್ಖನಾವನಾದರೂ ಇರಬಹುದೇ? ರಾಯರೇ, ಪ್ರಭಾಕರರ ವಯಸ್ಸಿನ ಕಡೆಗಾದರೂ ನೋಡಬಹುದಲ್ಲವೇ? ಕುಮುದಿನಿಯು ಅವರಗೆ ಮೊಮ್ಮಗಳು-ಮರಿಮಗಳಾಗಿ ಒಪ್ಪಬಹುದಾಗಿದೆ. ಅದರಿಂದ ರಾಯರೇ, ಈಗಿನ ನಿಮ್ಮ ವರ್ತನವು ತೀರ ವಿಪರೀತವಾಗಿದೆ.

ಸರಸಿಯು ಈ ಮೊದಲೊಮ್ಮೆ ತನ್ನ ಹಸ್ತಕ ಪಾತ್ರನಾದ ಲಚ್ಯಾ ಎಂಬವನಿಂದೊಂದು ಇಂಥದೇ ಅಭದ್ರವಾದ ಪತ್ರವನ್ನು ಕುಮುದಿನಿಯ ಹೆಸರಿಗೆ ಬರೆಯಿಸಿ ಹಾಕಿಸಿದ್ದಳು. ಆ ಪತ್ರವು ಕುಮುದಿನಿಯು ಬಳ್ಳಾರಿಯಲ್ಲಿ ತನ್ನ ಮನೆಯಲ್ಲಿರು

ವಾಗಲೇ ಬಂದಿತ್ತು. ಅವಳು ಆ ಪತ್ರದ ಸಂಗತಿಯನ್ನೋದಿಕೊಂಡಂದಿನಿಂದಲೇ ಭ್ರಮಿಷ್ಟಳಂತಾಗಿದ್ದಳು. ತಂದೆಯ ಮರಣದ ದುಃಖಕ್ಕಿಂತ ಆ ಪತ್ರದೊಳಗಿನ ಜಹಾಲ ಶಬ್ದ ಬಾಣಗಳಿಂದ ಅವಳ ತಲೆಯು ತಾಳಗೆಟ್ಟಿತ್ತು. ಇಂಥ ಪತ್ರವು ಮತ್ತೆ ಬಂದು ಮನೆಯವರ ಕೈಗೆಲ್ಲಿ ಬೀಳುವದೋ? ಎಂದು ಅವಳು ಬಳ್ಳಾರಿಯಲ್ಲಿರುವ ವರೆಗೆ ಪೋಷ್ಟಮನ್ನನು ಬರುವ ಕಾಲಕ್ಕೆ ಧಾವಿಸಿ ತಲೆಬಾಗಿಲ ಕಡೆಗೆ ಹೋಗುತ್ತಿದ್ದಳು. ಭವಾನರಾಯನು ತೀರಿಕೊಂಡ ಬಳಿಕಂತೂ ಕುಮುದಿನಿಯ ವಿಷಯದ ಸರಸಿಯ ಮಾತ್ಸರ್ಯಕ್ಕೆ ಮೇರೆಯುಳಿಯಲಿಲ್ಲ. ಅದರಿಂದ ಅವಳು ತನ್ನ ಅಭಿಭಾವಕನಾದ ಲಚ್ಯಾಸಿಂದ ಬಳ್ಳಾರಿಗೆ ಮತ್ತೊಂದು ಪತ್ರ ಬರೆಯಿಸಿ, ಅದರಲ್ಲಿ ಕುಮುದಿನಿ-ಪ್ರಭಾಕರ ಇವರಲ್ಲಿ ಅನೀತಿ ಸಂಬಂಧವಿರುವದೆಂಬದನ್ನು ವ್ಯಕ್ತಗೊಳಿಸಿದ್ದಳು. ಲಚ್ಯಾನು ಈ ಸಾರೆ ಪತ್ರದ ಮೇಲ್ವಿಳಾಸ ಬರೆಯುವಾಗ ಬಳ್ಳಾರಿಯಲ್ಲಿ ಚಿ|| ಕುಮುದಿನಿ ಶಂಕರರಾವ ದೇಸಾಯಿ ಎಂದಿಷ್ಟು ವಿಳಾಸ ಬರೆದಿದ್ದನೇ ಹೊರತು, ಮನೆ ನಂಬರು, ಓಣಿ ಮುಂತಾದವುಗಳನ್ನು ಬರೆಯಲಿಕ್ಕೆ ಮರೆತಿದ್ದನು. ಅದರಿಂದ ಅದು ವಿಜಾಪುರದಿಂದ ಹೊರಟ ಮರುದಿನವೇ ಬಳ್ಳಾರಿಗೆ ಬಂದಿದ್ದರೂ, ಆ ವಿಶಾಲವಾದ ಪಟ್ಟಣದಲ್ಲಿ ಕುಮುದಿನಿಯ ಪತ್ತೆ ಹಚ್ಚಲಿಕ್ಕೆ ಪೋಸ್ಟಿನ ಜವಾನನಿಗೆ ಅಷ್ಟೊಂದು ದಿನಗಳು ಬೇಕಾದವು. ಇರಲಿ.

ಸರಸಿಯು ಲಚ್ಯಾನ ನೆರವಿನಿಂದ ಯಾವ ಪಿಶಾಚಿ ಭಾವನೆಯಿಂದ ಆ ಪತ್ರವನ್ನು ಬರೆಯಿಸಿದ್ದಳೋ, ಅದೇ ಪ್ರಕಾರವಾಗಿ ಆ ಪತ್ರವನ್ನೋದಿದ ಬಳಿಕ ವಲ್ಲಭರಾಯನ ಮನೋವೃತ್ತಿಯೂ ಪಿಶಾಚಿ ನೃತ್ಯವನ್ನು ಮಾಡಹತ್ತಿತು. ಶಂಕರರಾಯನು ಮನೆಗೆ ಬಂದ ಬಳಿಕ ವಲ್ಲಭರಾಯನು ಆ ಪತ್ರವನ್ನು ಆತನಿಗೆ ತೋರಿಸಿ ಆತನ ಮನಸ್ಸನ್ನು ಶಾಂತಗೊಳಿಸಲು ಪ್ರಯತ್ನಿಸಿದನು; ಆದರೆ ಅದು ಶಾಂತವಾಗುವ ಬದಲು ಮತ್ತಿಷ್ಟು ಪ್ರಕ್ಷುಬ್ಧವಾಗಿ, ಆತನ ಅಂತರಂಗದಲ್ಲೂ ಪಿಶಾಚಿನೃತ್ಯ ಮಾಡಹತ್ತಿತು! ಸ್ವಲ್ಪ ಹೊತ್ತಿನಲ್ಲಿ ವಿವೇಕಿಯಾದ ವಲ್ಲಭರಾಯನು ತುಸ ಶಾಂತನಾಗಿ, ಈ ಬಗ್ಗೆ ಏನು ಮಾಡಬೇಕೆಂದು ಯೋಚಿಸತೊಡಗಿದನು. ಎಷ್ಟೋ ಹೊತ್ತು ಯೋಚಿಸಿದ ಬಳಿಕ ಈ ಪತ್ರದ ಸಂಗತಿಯನ್ನು ಬೇರೆ ಯಾರ ಮುಂದೂ ಉಚ್ಚರಿಸಬಾರದೆಂದು ನಿಶ್ಚಯಿಸಿಕೊಂಡು "ಕುಮುದಿನಿಯು ಇಷ್ಟರಲ್ಲಿ ನಿಮ್ಮಲ್ಲಿಗೆ ಬಂದಿರಬಹುದು. ಗೃಹಕೃತ್ಯದ ಅಡಚಣಿಯ ಸಲುವಾಗಿ ಅವಳನ್ನು ಬೇಗನೆ ಮರಳಿ ಕರೆಯಿಸಬೇಕಾಯಿತು. ಕಾರಣ ಈ ಪತ್ರ ತಲುಪುತ್ತಲೆ ಅವಳನ್ನು ಪ್ರಭಾಕರರೊಡನೆ ಕಳಿಸಿಕೊಡಬೇಕು. ಈ ಪತ್ರವು ಅರ್ಜಂಟ ಟೆಲಿಗ್ರಾಮ್ ಎಂದು ತಿಳಿಯತಕ್ಕದ್ದು." ಎಂಬ ಸಂಗತಿಯ ಕಾರ್ಡನ್ನು ಗೀಚಿ ವಿಜಾಪುರಕ್ಕೆ ಸರಸಿಯ ವಿಳಾಸಕ್ಕೆ ಕಳಿಸಿದನು; ಹಾಗು

"ಭೃಂಗ ಕೇಳಲು ಚಂದ | ಹಂಗ ನೋಡಲು ಚಂದ |
ಭಂಗವಿಲ್ಲದಾ-ನುಡಿ ಚಂದ ಸಜ್ಜನರ | ಸಂಗವೇ ಚಂದ |"

ಎಂಬ ಸರ್ವಜ್ಞೋಕ್ತಿಯಂತೆ ಕಮಲಾಕಾಂತ ಸಾಧುವಿನೆಡೆಗೆ ನಡೆದನು.

## ಸಮಾನಶೀಲೇ ವ್ಯಸನೇಷು ಸಖ್ಯಂ|

ಭವಾನರಾಯನ ಮರಣಕ್ಕೆ ಕಾರಣವಾದ ಸರಸಿಯ ಆಚರಣೆಯಿಂದ ಸರಸಿಯು ಎಂಥ ಮನುಷ್ಯಳೆಂಬದು ವಾಚಕರಿಗಿನ್ನೂ ಚನ್ನಾಗಿ ಅವಗತವಾಗಿರುವುದಿಲ್ಲ ನಾವು ಇನ್ನು ಸರಸಿ, ಭವಾನರಾಯ ಹಾಗು ಕುಮುದಿನಿಯರ ಪೂರ್ವವೃತ್ತವನ್ನು ನಮ್ಮ ವಾಚಕರಿಗಾಗಿ ಸಂಕ್ಷೇಪಿಸಿ ತಿಳಿಸುವೆವು.

ಕುಮುದಿನಿಯು ಸರಾಸರಿ ಎಂಟು ವರ್ಷದವಳಾದಾಗ ಆಕೆಯ ಹಡೆದವ್ವನು ಆಕಸ್ಮಿಕವಾಗಿ ತೀರಿಕೊಂಡಳು. ಪ್ರಿಯ ಪತ್ನಿಯ ಮರಣದಿಂದ ಭವಾನರಾಯನು ಬಹು ವ್ಯಸನಾಕ್ರಾಂತನಾದನು; ಆದರೂ ಮಗಳ ಸಂರಕ್ಷಣೆಗಾಗಿಯೂ ತನ್ನ ಊಟ-ಪಾಟಗಳಿಗಾಗಿಯೂ ಮನೆಯಲ್ಲಿ ಬೇರೆ ಯಾರೂ ಇರದ್ದರಿಂದ, ಆಪ್ತ-ಮಿತ್ರರ ಸಲಹೆಯ ಮೇರೆಗೆ ಆತನು ದ್ವಿತೀಯ ವಿವಾಹಕ್ಕೆ ಮನಸ್ಸು ಮಾಡಿದನು. ಸರಸಿಯ ತಂದೆಯು ನಿರ್ಧನನಾಗಿದ್ದರೂ ಸಚ್ಛೀಲನಾಗಿದ್ದನು; ಆದರೆ ಆಕೆಯ ತಾಯಿಯು ಮಹಾ ನ್ಯಾಯಗಂಟಳೂ ಪರೋತ್ಕರ್ಷ ಸಹಿಸದವಳೂ ಆಗಿದ್ದಳು. ಇಂಥವಳ ಹೊಟ್ಟೆಯಲ್ಲಿ ಹುಟ್ಟಿದ ಏಕಮಾತ್ರ ಪುತ್ರಿಯಾದ ಸರಸಿಯು ಮಹಾ ಜಗಳಗಂಟಿಯೂ ಹೊಟ್ಟೆಕಿಚ್ಚಿನವಳೂ ಆಗಿ, ಅನೇಕ ದುರ್ಗುಣಗಳಿಂದ ಕೂಡಿದ್ದಳೆಂದು ಹೇಳಬಹುದು. ಸರಸಿಯ ತಂದೆಯ ಮನಸ್ಸಿನಲ್ಲಿ ಸರಸಿಯ ವಿವಾಹವನ್ನು ಚಿಕ್ಕಂದಿನಲ್ಲಿಯೇ ಯಾವನೊಬ್ಬ ಸಚ್ಛೀಲ ಬಡವನಿಗೆ ಕೊಟ್ಟು ಮಾಡಬೇಕೆಂದಿದ್ದರೂ, ತನ್ನ ಅಚ್ಚುದ ಒಬ್ಬಳೇ ಒಬ್ಬಳಾದ ಮಗಳ ಲಗ್ನವನ್ನು ಅಷ್ಟು ಅಲ್ಪ ವಯಸ್ಸಿನಲ್ಲಿ, ಅದೂ ಯಾವನೊಬ್ಬ ಬಡ ಬ್ರಾಹ್ಮಣ ಕುಮಾರನೊಡನೆ ಮಾಡಿ ಕೊಡಲಿಕ್ಕೆ ಆತನ ಹೆಂಡತಿಯು ಒಪ್ಪಲಿಲ್ಲ. ಅದರಿಂದ ಸರಸಿಗೆ ಹದಿನಾರು ವರುಷಗಳಾಗುವ ವರೆಗೂ ಅವಳ ಲಗ್ನದ ಯೋಗವು ಕೂಡಿ ಬರಲಿಲ್ಲ.

ಮೇಲೆ ಹೇಳಿದಂತೆ ಭವಾನರಾಯನ ಮೊದಲನೇ ಕುಟುಂಬವು ಆಕಸ್ಮಿಕವಾಗಿ ತೀರಿಕೊಳ್ಳಲು, ಆತನ ಮಿತ್ರ-ಪರಿಚಿತರು ಆತನ ಸಮ್ಮತಿಯಿಂದ ಸರಸಿಯ ತಾಯಿ-ತಂದೆಗಳ ಬಳಿಗೆ ಸಂಧಾನಕಟ್ಟಿದರು. ಭವಾನರಾಯನು ೩೪-೩೫ ವರ್ಷದ ನಡುಹರೆಯದ ಗೃಹಸ್ಥನಾಗಿದ್ದು, ಸರಕಾರಿ ನೌಕರಿ, ಭೂಮಿ-ಕಾಣೆಗಳ ಆದಾಯ, ಮನೆಯೊಳಗಿನ ವಸ್ತ್ರ-ಒಡವೆಗಳ ಸಂಪತ್ತಿ ಮುಂತಾದವುಗಳಿಂದ ತಕ್ಕ ವರನಾಗಿದ್ದನು. ಸರಸಿಯು ಆ ಸಮಯಕ್ಕೆ ಪ್ರಾಪ್ತ ವಯಸ್ಸಿಗೆ ಬಂದದ್ದರಿಂದ "ಪ್ರಾಪ್ತೇ ಷೋಡಶೇ ವರ್ಷೇ ಗಾರ್ದಭೀ ಅಪ್ಸರಾ ಭವೇತ್|" ಎಂಬಂತೆ ನೋಡುವವರಿಗೆ ಒಡೆದು ಕಾಣುತ್ತಿದ್ದಳು; ಆದರಿಂದ ಭವಾನರಾಯನಂತಹ ಭಾರ್ಯಾವಿರಹವಾದವನಿಗೆ ಆ ಹೆಣ್ಣು ಒಳ್ಳೇ ಮಿಂಚಿನಂತೆ ತೋರಿದ್ದರೆ ಅರಿದೇನು?

ಮುಂದೆ ಸ್ವಲ್ಪ ದಿನಗಳಲ್ಲಿಯೇ ಭವಾನರಾಯನು ಸರಸಿಯನ್ನು ದ್ವಿತೀಯ ಸಂಬಂಧವೆಂದು ಲಗ್ನವಾದನು. ಪ್ರಥಮ ಲಗ್ನದ ಕಾಲಕ್ಕಿರುವ ಗಂಡಸಿನೊಳ

ಗಿನ ಒಗರು-ಆತ್ಮವಿಶ್ವಾಸಗಳು ದ್ವಿತೀಯ ಸಂಬಂಧದ ಕಾಲಕ್ಕೆ ಉಳಿದಿರುವದಿಲ್ಲ ವೆಂದೆನ್ನಬಹುದು. ದ್ವಿತೀಯ ಸಂಬಂಧದ ಕಾಲಕ್ಕೇ ಹಾಗೆ ಆತ್ಮವಿಶ್ವಾಸದಲ್ಲಿ ಶೈಥಿಲ್ಯ ಹೊಂದಿದ್ದ ಗೃಹಸ್ಥನು, ದೈವವಶಾತ್ ತೃತೀಯ,-ಚತುರ್ಥಾದಿ ಸಂಬಂಧ ಮಾಡಿಕೊಳ್ಳುವ ಪ್ರಸಂಗ ಒದಗಿದರೆ ಆತನ ಅವಸ್ಥೆಯನ್ನು ಅವನೇ ಬಲ್ಲನು. ಅದನ್ನು ವರ್ಣಿಸುವದು ಅಶಕ್ಯವೇ ಸರಿ! ಪ್ರಥಮಲಗ್ನದ ಕಾಲಕ್ಕೆ ಗಂಡಸು ಕೇವಲ ತನ್ನ ಒಗರಿನಿಂದಲೇ ನಡೆಯುತ್ತಿರುವದರಿಂದ ಜನರು ಏನು ಅಂದಾರು, ಹೆಣ್ಣಿನ ಕಡೆಯವರೇನಂದಾರು? ಎಂಬದರ ಪರಿವೆಯು ಆತನಿಗೆ ಇರುತ್ತಿರುವದಿಲ್ಲ. ಅಂದ ಬಳಿಕ ತನ್ನನ್ನು ವರಿಸುತ್ತಿರುವ ಹೆಂಡತಿಯೇನೆಂದಾಳೆಂಬದರ ವಿಚಾರವು ಆತನ ಅಂತರಂಗ-ಬಹಿರಂಗಗಳಿಗೆ ಸೋಂಕುವ ಬಗೆ ಹೇಗೆ? ಆದರೆ ಆ ನಿರ್ಭೀತಿಯ ಸ್ಥಿತಿಯು ತುಸ ವಯಸ್ಸಾದ ಬಳಿಕ ದ್ವಿತೀಯ ಸಂಬಂಧಕ್ಕೆ ಪ್ರವೃತ್ತನಾದ ವರನಲ್ಲಿ ಸರ್ವಥಾ ಉಳಿಯುವದಿಲ್ಲ. ಅವನು ತನ್ನ ಅಂತರಂಗಕ್ಕಿಂತ ಬಹಿರಂಗದ ಸ್ಥಿತಿ-ಗತಿಗಳ ಕಡೆಗೇ ಹೆಚ್ಚು ಮನಸ್ಸುಗೊಡುವನು; ಅದರಿಂದ ಬೇರೆ ಗಂಡಸರು ಏನೆಂದಾರೆಂಬದರ ಕಡೆಗೆ ನೋಡುವ ದೃಷ್ಟಿಗಿಂತ, ಹೆಚ್ಚು ಸೂಕ್ಷ್ಮದೃಷ್ಟಿಯಿಂದ ಹೆಂಗಸರು, ಅದ ರಲ್ಲಿಯೂ ಹೆಣ್ಣಿನ ಕಡೆಯ ಹೆಂಗಸರು; ಅವರಲ್ಲಿಯೂ ತನ್ನ ದ್ವಿತೀಯ ಸಂಬಂ ಧದ ವಧುವಿನ ಕಡೆಗೆ ನೋಡಹತ್ತಿ, ಅವಳು ತನ್ನ ವಿಷಯವಾಗಿ ಎಲ್ಲಿ ಅಸಂತುಷ್ಟ ಳಾಗುವಳೋ ಎಂಬ ಕಲ್ಪನೆಯಿಂದ ಯಾವಾಗಲೂ ಹೆಚ್ಚಾಗಿ ತಳಮಳಗೊಳ್ಳು ತ್ತಿರುತ್ತಾನೆ.

ಭವಾನರಾಯನು ಸರಸಿಯನ್ನು ಲಗ್ನವಾದ ಬಳಿಕ ಇದೇ ಪ್ರಕಾರವಾಗಿ ಆಕೆಯ ಕಡೆಗೆ ನೋಡಹತ್ತಿದನು. ಸರಸಿಯು ಒಳ್ಳೇ ಹೊಯ್ಕಾಲೆಯು. ಗಂಡ ನನ್ನು ತನ್ನ ಹಿಡಿತದಲ್ಲಿ ಹೇಗೆ ಹಿಡಿದುಕೊಳ್ಳಬೇಕೆಂಬದನ್ನು ಅರಿತವಳು; ಆದರಿಂದ ಅವಳು ತನ್ನ ಬಿರಿನೋಟದಿಂದ ಅಲ್ಪಾವಧಿಯಲ್ಲೇ ಭವಾನರಾಯನನ್ನು ಅಂಕಿತ ಪಡಿಸಿಕೊಂಡಳು. ಭವಾನರಾಯನಾದರೂ ಲೋಕಾರೂಢಿಯಂತೆ ತನ್ನ ಎರಡನೇ ಹೆಂಡತಿಯ ಹಸ್ತಕನಾಗಿ, ಆಕೆಯು ಕುಣಿಸಿದಂತೆ ಕುಣಿಯತೊಡಗಿದನು.

ಸರಸಿಯು ತನ್ನ ಮಲಮಗಳಾದ ಕುಮುದಿನಿಯನ್ನು ಮೊದಮೊದಲು ಬಹು ಪ್ರೀತಿಸುತ್ತಿರುವಂತೆ ನಟಿಸುತ್ತಿದ್ದಳು. ಕುಮುದಿನಿಯ ಊಟ-ಪಾಟಗಳ ಕಡೆಗೂ ಬಟ್ಟೆ-ಬರೆ, ವಸ್ತ್ರ-ಒಡವೆಗಳ ಕಡೆಗೂ ಒಳ್ಳೇ ಆಸ್ಥೆಯಿಂದ ನೋಡುತ್ತಿರುವಂತೆ ಭಾಸ ಗೊಳಿಸುತ್ತಿದ್ದಳು; ಆದರೆ ನಾಟಕದ ದೃಶ್ಯವು ಎಲ್ಲಿಯ ವರೆಗೆ ಚಂದ? ಅರುಣೋ ದಯವಾಗಿ ಸೂರ್ಯನ ಹೊಂಬಣ್ಣದ ಕರಗಳು ಹೊರಬೀಳುವವರೆಗಷ್ಟೇ? ಅದ ರಂತೆಯೇ ಲಗ್ನವಾದ ನಾಲ್ಕೈದು ವರ್ಷಗಳಲ್ಲಿಯೇ ಸರಸಿಯ ಸ್ಥಿತಿಯು ತೀರ ವ್ಯತ್ಯಸಗೊಂದಿತು. ಈ ಅವಧಿಯಲ್ಲಿ ಸರಸಿಗೆ ಒಂದೆರಡು ಸಾರೆ ಕೆಲ ತಿಂಗಳುಗಳ ಗರ್ಭನಿಂತು ಗರ್ಭಸ್ರಾವವಾಗಿತ್ತು. ಮಕ್ಕಳ ಹುಚ್ಚು ಪ್ರತಿಯೊಬ್ಬ ಹೆಂಗಸಿಗೂ ಇರುತ್ತದೆ. ಅದರಲ್ಲಿಯೂ ಮುದಿಗಂಡಂದಿರ ದ್ವಿತೀಯ-ತೃತೀಯಾದಿ ಸಂಬಂಧದ

ಹೆಂಗಸರಿಗಂತೂ ಹೆಚ್ಚಾಗಿರುತ್ತಿರುವಂತೆ ಸರಸಿಗೂ ಉಂಟಾಯಿತು. ತನ್ನ ಹೊಟ್ಟೆಯಲ್ಲಿ ಮಕ್ಕಳು ಹುಟ್ಟಬೇಕೆಂದು ಅವಳು ಹಲವು ದೇವರಿಗೆ ಹರಕೆ ಹೊತ್ತಳು. ಬಾವಾ-ಬೈರಾಗಿಗಳ ಮಂತ್ರ-ತಂತ್ರಗಳಾದವು. ಚೇಳಿನ ಮರಿಗಳನ್ನು ನುಂಗುವುದು, ಮಂದಿಯ ಹಸುಗೂಸುಗಳ ಮೈ ಮೇಲೆ ಹೆರವರಿಗೆ ಗೊತ್ತಾಗದಂತೆ ಗೇರು ಹಾಕುವದು, ಅಶ್ವತ್ಥ-ಔದುಂಬರಾದಿ ವೃಕ್ಷಗಳಿಗೆ ಸಂಕ್ರಾಂತಿ ಅಮಾವಾಸ್ಯಾದಿಗಳ ರಾತ್ರಿಯಲ್ಲಿ ನಗ್ನರೀತಿಯಿಂದ ಪ್ರದಕ್ಷಿಣೆ ಹಾಕುವುದು ಮುಂತಾದ ಸತ್ಕೃತಿ-ದುಷ್ಕೃತಿಗಳನ್ನೆಲ್ಲವನ್ನೂ ಮಾಡಿ ಮಾಡಿ ಬೇಸತ್ತಿದ್ದಳು; ಆದರೂ ಅವಳಿಗೆ ಮಕ್ಕಳಾಗಲಿಲ್ಲ; ಆದರಿಂದ ಮೊದಲೇ ಭಾವನಾಪರಳಾದ ಸರಸಿಗೆ ಒಂದು ಬಗೆಯ ಉನ್ಮಾದವಾದಂತಾಯಿತು. ಆ ಭರದಲ್ಲಿ ಅವಳು ಇತ್ತೀಚೆಗೆ ತನ್ನ ಮಲಮಗಳಾದ ಕುಮುದಿನಿಯನ್ನೂ ಗಂಡನಾದ ಭವಾನರಾಯನನ್ನೂ ಬಾಯಿಗೆ ಬಂದಂತೆ ಅನ್ನ ಹತ್ತಿದಳು; ಕುಮುದಿನಿಯನ್ನು ಹೊಡೆದು ಬಡೆದು ಪೀಡಿಸತೊಡಗಿದಳು.

ಕುಮುದಿನಿಗೆ ಹದಿನಾಲ್ಕು ವರ್ಷಗಳಾಗಲು, ಅವಳು ಸಾಲೆಯಲ್ಲಿ ಇಂಗ್ಲಿಷ ಐದನೇ ಇಯತ್ತೆಯಲ್ಲಿ ಓದುತ್ತಿರುವಾಗಲೆ ಮನೆಯೊಳಗಿನ ತನ್ನ ಎರಡನೇ ಹೆಂಡತಿಯ ಕಾಟಕ್ಕೆ ಬೇಸತ್ತು ಭವಾನರಾಯನು ಕುಮುದಿನಿಗಾಗಿ ವರಶೋಧನೆ ನಡಿಸಿದನು; ಹಾಗು ಬಳ್ಳಾರಿಯ ನಿವಾಸಿಗಳಾದ ಸರಾಫ ವಲ್ಲಭರಾಯರ ತಮ್ಮನಾದ ಶಂಕರರಾಯನನ್ನು ವರನೆಂದು ನಿಯೋಜಿಸಿ, ಕುಮುದಿನಿಯ ಲಗ್ನವನ್ನೊಮ್ಮೆ ಮಾಡಿಬಿಟ್ಟನು. ಭವಾನರಾಯನು ತನ್ನ ಒಬ್ಬಳೇ ಒಬ್ಬ ಮಗಳಾದ ಕುಮುದಿನಿಗೆ ಸಾಕಷ್ಟು ವರದಕ್ಷಿಣೆಯನ್ನೂ ವಸ್ತ್ರ-ಒಡವೆಗಳನ್ನೂ ಕೊಟ್ಟಿದ್ದನು. ಸರಸಿಯ ತಂದೆ ತಾಯಿಗಳು ಬಡವರಾದ್ದರಿಂದಲೂ ಭವಾನರಾಯನು ಇಮ್ಮನೆ ವರನಾದ್ದರಿಂದಲೂ ಸರಸಿಯ ಲಗ್ನದ ಕಾಲಕ್ಕೆ ಅವಳ ತಂದೆಯು ವರದಕ್ಷಿಣೆ ಮುಂತಾದದ್ದೇನೂ ಕೊಟ್ಟಿರಲಿಲ್ಲ. ಎರಡೂ ಕಡೆಯ ಖರ್ಚು-ಕಂದಾಯಗಳನ್ನು ತಾನೇ ವಹಿಸಿಕೊಂಡು, ಭವಾನರಾಯನು ಸರಸಿಯನ್ನು ಲಗ್ನವಾಗಿದ್ದನು. ಕುಮುದಿನಿಗೆ ಸಾಕಷ್ಟು ವರದಕ್ಷಿಣೆ ಹಾಗು ವಸ್ತ್ರ-ಒಡವೆ ಕೊಟ್ಟಿದ್ದನ್ನು ಕಂಡು ಸರಸಿಯ ಹೊಟ್ಟೆಯು ಕಿಚ್ಚು ಧಗಧಗಿಸಹತ್ತಿತು; ಆದರಿಂದ ಅವಳು ಕುಮುದಿನಿಯನ್ನು ಬೈದು, ಅಂದು ಕಾಡಿಸುವದು ಮತ್ತಿಷ್ಟು ಹೆಚ್ಚಿತು. ಈ ಕಾರಣದಿಂದ ಲಗ್ನವಾದ ತುಸ ದಿನಗಳಲ್ಲಿಯೇ ವಲ್ಲಭರಾಯನು ತನ್ನ ನಾದಿನಿಯನ್ನು ತಮ್ಮ ಮನೆಗೆ ಕರೆದೊಯ್ದನು.

ವಲ್ಲಭರಾಯನೂ ಶಂಕರರಾಯನೂ ಆಧುನಿಕ ವಿದ್ಯಾಸಂಪನ್ನರು. ಆದರಿಂದ ಅವರಿಗೆ ಸ್ತ್ರೀ ಶಿಕ್ಷಣವು ಮನಃಪೂರ್ವಕವಾಗಿಯೂ ಸೇರುತ್ತಿತ್ತು. ವಲ್ಲಭರಾಯನ ಲಗ್ನವನ್ನು ಆತನ ಬಾಲ್ಯದಲ್ಲಿಯೇ ಒಬ್ಬ ನಿರಕ್ಷರ ವಧುವಿನೊಡನೆ ಆತನ ತಂದೆ-ತಾಯಿಗಳು ಮಾಡಿದ್ದರು. ವಲ್ಲಭರಾಯನು ತನ್ನ ಹೆಂಡತಿಗೆ ಶಿಕ್ಷಣ ಕೊಡಿಸಬೇಕೆಂದು ಎಷ್ಟು ಪ್ರಯತ್ನಿಸಿದರೂ ಹೆಂಡತಿಯು ಚಂಡಿತನದ ಮೂಲಕ ಸಾಧಿಸಿರಲಿಲ್ಲ. ತನ್ನ ನಾದಿನಿಯು ಇಂಗ್ಲಿಷ ಐದನೇ ಇಯತ್ತೆಯ ವರೆಗೆ ಕಲಿತಿರುವು

ದನ್ನೂ ಮುಂದೆ ಕಲಿಯಬೇಕೆಂಬ ಅಭಿಲಾಷೆಯುಳ್ಳವಳಿರುವುದನ್ನೂ ತಿಳಿದು, ವಲ್ಲಭರಾಯನು ಶಂಕರರಾಯನ ಒಪ್ಪಿಗೆಯ ಮೇರೆಗೆ ಕುಮುದಿನಿಯನ್ನು ಬಳ್ಳಾರಿಯ ಹೈಸ್ಕೂಲಿಗೆ ಸೇರಿಸಿದನು; ಆದರೆ ತನ್ನ ನೆಘೆಣ್ಣಿಯು ಸ್ಕೂಲಿಗೆ ಹೋಗುವದು ವಲ್ಲಭರಾಯನ ಹೆಂಡತಿಯಾದ ನರ್ಮದೆಗೆ ಸರಿಬೀಳಲಿಲ್ಲ. ಅದರಿಂದ ಅವಳು ತಮ್ಮ ಮನೆಯ ಗಂಡಸರ ಕಿವಿಗೆ ಬೀಳದ ಹಾಗೆ ಕುಮುದಿನಿಗೆ ಹಲವು ಬಗೆಯಿಂದ ಆಡಿಕೊಂಡು ಪೀಡಿಸಹತ್ತಿದಳು. "ಇನ್ನು ನಮ್ಮ ಕುಮುದಿನೀಬಾಯಿಸಾಹೇಬರು ಕಲಿತು ದೊಡ್ಡ ಪರೀಕ್ಷೆ ಪಾಸಾಗಿ, ಸರಕಾರಿ ಚಾಕರಿ ಮಾಡಿ ಗಂಡನ ಹೊಟ್ಟೆಗೆ ಹಾಕತಕ್ಕವರು. ನಾವೇನು, ಇವರ ಮನೆಯ ಅಡಿಗೆ-ನೀರಿನವರು! ಹಸೇ ದಡ್ಡರು! ನಮಗೆ ಏನೂ ತಿಳಿಯುವದಿಲ್ಲ. ಕಲಿತ ಹೆಂಗಸರೇ ಇತ್ತೀಚಿಗಿನ ಗಂಡಸರಿಗೆ ಸೇರುತ್ತಾರೆ. ಈ ಕಲಿತ ಹೆಂಗಳೆಯರು ತಮ್ಮ ವಿದ್ಯಾಪ್ರಭಾವದಿಂದ ಏನೇನು ಮಾಡುವರೋ ಆದಾರು ಹೇಳಬೇಕು? ಈ ನಮ್ಮ ಕುಮುದಿನೀಬಾಯಿಸಾಹೇಬರು ನಾಳೆ ಲೇಡಿಯುವರಾಗಿ, ಕಂಡಕಂಡ ಗಂಡಸರ ಕೈ ಹಿಡಿದು ನಡೆಯಹತ್ತಿದರೆಂದರೆ, ನಮ್ಮ ಶಂಕರಪ್ಪನವರ ಮೊಖಕ್ಕೆ ಆರುತಿ ಬೆಳಗಿದಂತಾಗುವದು. ಆ ಮೇಲೆ ಅವರು ಹೆಂಡತಿಯ ಮೇಲೆ ಸಿಟ್ಟಾದರೆ ಅವರ ಮಾತನ್ನು ಕೇಳುವವರಾರು? ಈ ವಿದ್ಯಾವತಿ ಬಾಯಿಸಾಹೇಬರು ಅವರ ಸಿಟ್ಟನ್ನು ಲೆಕ್ಕಿಸುವರೇತಕ್ಕೆ? ಇವರು ತಮಗೆ ಸರಿದೋರಿದ ಯಾವನೊಬ್ಬನ ಮಡಮ್ಮಳಾಗಿ ಹೋಗಿಬಿಡುವರು...." ಇತ್ಯಾದಿ ಹೃದಯದಲ್ಲಿ ನೆಟ್ಟು ಬೆನ್ನಲ್ಲಿ ಬಿರಿಯುವಂತಹ ಪಿಸುಣ ನುಡಿಗಳನ್ನು ನರ್ಮದೆಯು ಪ್ರತಿದಿನವೂ ಕುಮುದಿನಿಗೆ ನುಡಿಯಹತ್ತಿದಳು. ಆಕೆಯು ಈ ಬಗೆಯ ಮಾತುಗಳಿಂದ ಕುಮುದಿನಿಗನ್ನುತ್ತಿರುವದು ಹಲಕೆಲವು ಸಾರೆ ವಲ್ಲಭರಾಯನ ಕಿವಿಗೂ ಮುಟ್ಟಿತ್ತು. ಶಂಕರರಾಯನಿಗೂ ಒಂದೆರಡು ಸಾರೆ ಕೇಳಿಸಿತು. ಅದರಿಂದ ಇಲ್ಲಿ ತನ್ನ ಹೆಂಡತಿಯ ಶಿಕ್ಷಣವು ಸರಿಯಾಗಿ ಸಾಗಲಾರದೆಂದು ಆತನು ತಿಳಿದುಕೊಂಡು, ಈ ಬಗ್ಗೆ ತನ್ನ ಅಣ್ಣನಿಗೆ ಯಾವ ಬಗೆಯಾಗಿ ಹೇಳಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ ಒಂದು ದಿನ ವಲ್ಲಭರಾಯನೇ ಆ ವಿಷಯವನ್ನು ಶಂಕರಪ್ಪನ ಮುಂದೆ ತೆಗೆದನು. ಆಗ ಅವರ ಆಲೋಚನೆಯ ಮೇರೆಗೆ ಕುಮುದಿನಿಯನ್ನು ಇನ್ನೆರಡು ವರ್ಷ ವಿಜಾಪುರದಲ್ಲಿ ತವರುಮನೆಯಲ್ಲೇ ಇಟ್ಟು ಅಲ್ಲಿಯ ಸ್ಕೂಲಿಗೆ ಕಳಿಸಬೇಕೆಂದೂ, ಮ್ಯಾಟ್ರಿಕ್ ಪರೀಕ್ಷೆಯಾದ ಬಳಿಕ ಅವಳನ್ನು ತಮ್ಮಲ್ಲಿಗೆ ಕರೆಯಿಸಿಕೊಳ್ಳಬೇಕೆಂದೂ ನಿರ್ಣಯಿಸಿದರು; ಹಾಗು ಬೇಸಿಗೆ-ಚಳಿಗಾಲಗಳ ರಜೆಗಳಲ್ಲಿ ಅವಳನ್ನು ತಮ್ಮಲ್ಲಿಗೆ ತಪ್ಪದೆ ಕರೆಯಿಸಬೇಕೆಂದೂ ಗೊತ್ತು ಮಾಡಿಕೊಂಡು, ಆ ಪ್ರಕಾರ ವಿಜಾಪುರಕ್ಕೆ ಭವಾನರಾಯನಿಗೆ ತಿಳಿಸಿ ಆತನ ಸಮ್ಮತಿಯ ಮೇರೆಗೆ ಕುಮುದಿನಿಯನ್ನು ಮುಂದಿನ ಅಭ್ಯಾಸಕ್ರಮಕ್ಕಾಗಿ ತವರೂರಿಗೆ ಕಳಿಸಿದರು.

ಕುಮುದಿನಿಯು ಮರಳಿ ಬಂದು ತನ್ನ ಮನೆಯಲ್ಲೇ ಇದ್ದು ಸ್ಕೂಲಿಗೆ ಹೋಗಹತ್ತಿದ್ದನ್ನು ಕಂಡು ಸರಸಿಯ ಪಿತ್ಥವು ನಡುನೆತ್ತಿಗೇರಿತು. ಕುಮುದಿನಿಯು ವಯ

ಸ್ಸಿಗೆ ಬಂದದ್ದರಿಂದ ಅವಳಿಗೂ ಸಂಸಾರದೊಳಗಿನ ಹೇಚು-ಪೇಚುಗಳ ಜ್ಞಾನವಾಗ ತೊಡಗಿತು. ಕುಮುದಿನಿಯು ಬಂದ ಮೇಲೆ ಒಂದು ದಿನ ರಾತ್ರಿ ಆಕೆಯ ವಿಷಯ ವಾಗಿ ಸರಸಿಯು ಗಂಡನೊಡನೆ ಬೆಳತನಕ ಜಗಳಾಡಿದಳು. ಅದರಿಂದ ಮರುದಿನ ಸೂರ್ಯೋದಯವಾಗಿ ತುಸ ಹೊತ್ತು ಏರಿದರೂ ಅವಳು ಹಾಸಿಗೆ ಬಿಟ್ಟು ಏಳಲಿಲ್ಲ. ಭವಾನರಾಯನು ಎರಡು-ಮೂರು ಸಾರೆ ಹೆಂಡತಿಯ ಕೋಣೆಗೆ ಹೋಗಿ ಅವಳ ನ್ನೆಬ್ಬಿಸುವ ಪ್ರಯತ್ನ ಮಾಡಿದನು; ಆದರೆ ಆಕೆಯ ಸಮೀಪಕ್ಕೆ ಹೋಗುತ್ತಲೆ ಅವಳನ್ನು ಹೆಸರುಗೊಂಡು ಕರೆದು ಎಬ್ಬಿಸುವ ಧೈರ್ಯವು ಅವನಿಗಾಗುತ್ತಿರಲಿಲ್ಲ! ಕುಮುದಿನಿಯು ಎಂದಿನಂತೆ ನಸಕಿನಲ್ಲೇ ಎದ್ದು ತನ್ನ ಕೋಣೆಯಲ್ಲಿ ಕುಳಿತು ಅಭ್ಯಾಸ ಮಾಡುತ್ತಿದ್ದಳು. ರಾತ್ರಿಯಲ್ಲಿ ಪಕ್ಕದ ಕೋಣೆಯಲ್ಲಿ ತಂದೆ-ತಾಯಿಗಳಲ್ಲಿ ತನ್ನ ವಿಷಯವಾಗಿ ನಿಕರದ ಜಗಳವಾದದ್ದನ್ನು ಅವಳು ಕೇಳಿಕೊಂಡಿದ್ದರೂ ಆ ವಿಚಾರ ಶೀಲಳು ಆ ಬಗ್ಗೆ ತಂದೆಯನ್ನೇನೂ ಕೇಳಲಿಲ್ಲ. ತನ್ನ ಮಲತಾಯಿಯ ಮನಸ್ಸಿ ನೊಳಗಿನ ತನ್ನ ವಿಷಯದ ಅಸೂಯೆಯನ್ನು ಹೇಗೆ ಹೋಗಲಾಡಿಸಬೇಕೆಂದು ಆಕೆಯು ಯೋಚಿಸಹತ್ತಿದಳು. ಎಷ್ಟೋ ಹೊತ್ತಾದರೂ ಸರಸಿಯು ಎದ್ದೇಳದ್ದರಿಂದ, ಕುಮುದಿನಿಯು ತಾನೇ ಅವಳ ಕೋಣೆಗೆ ಹೋಗಿ, ಅವಳ ಕಾಲ ಮುಟ್ಟಿ ನಮ ಸ್ಕಾರ ಮಾಡಿ:—"ಅವ್ವಾ, ಇಂದು ಇಷ್ಟು ಹೊತ್ತೇಕೆ ಮಲಗಿರುತ್ತೀ?" ಎಂದು ಕೇಳಿದಳು.

"ನಿಮ್ಮವ್ವನ ಹೆಣವು ಸುಡಗಾಡಿಗೆ ಹೋಗಿದೆ." ಎಂದೆನ್ನುತ್ತ ಕಾಲು ಜಾಡಿಸಿ ಕುಮುದಿನಿಯನ್ನು ಒದೆದು, ಒಳ್ಳೇ ಸಿಟ್ಟಿನಿಂದ ಸರಸಿಯು:—"ಮಡಮ್ಮ ಸಾಹೇಬರೇ, ತಾವು ತಮ್ಮ ಮಾರ್ನಿಂಗ ವಾಕ್ಕಿಗೆ ಹೋಗತಕ್ಕದ್ದು. ತಮ್ಮ ಸೂಕ್ಷ್ಮ ಕೈಗಳನ್ನು ನಮ್ಮ ಒರಟು ಕಾಲುಗಳಿಗೆ ಹಚ್ಚಿ ನಮಸ್ಕರಿಸುವದು ಬೇಡ. ತಮ್ಮ ವಿದ್ಯಾವ್ಯಾಸಂಗಕ್ಕೆ ಬಳ್ಳಾರಿಯ ಶಾಲೆ-ಕಾಲೇಜುಗಳು ಸಾಕಾಗಲಿಲ್ಲೇನು? ಅಲ್ಲಿಯ ಶಿಕ್ಷಕರಾರೂ ಮನಸ್ಸಿಗೆ ಬರಲಿಲ್ಲವೇ? ಇಲ್ಲಿಯ ನಿಮ್ಮ ಹಳೇ ಪರಿಚಯದ ಶಿಕ್ಷಕರೇ ಬೇಕಾದರೇನು? ನಿಮ್ಮ ಈ ವಿದ್ಯಾಪ್ರಭಾವದಿಂದ ನೀವು ನಿಮ್ಮ ಗಂಡನ ಮನೆಯವರ ಮಾನ-ಮರ್ಯಾದೆಯನ್ನು ಕಳೆದದ್ದಲ್ಲದೆ, ಇಲ್ಲಿಗೆ ಬಂದು ನಮ್ಮನ್ನಷ್ಟು ಬೈಲಿಗೆ ಎಳೆಯಬೇಕೆಂದಿರುತ್ತೀರೇನು? ಪಾಪ! ಆ ಬಡವೆ, ನಿನ್ನ ನೆಗೆಣ್ಣಿಯಾದ ನರ್ಮ ದಕ್ಕನ ಸುಶೀಲತನವೆತ್ತ, ನಿನ್ನ ಹೊಯ್ಮಾಲಿತನವೆತ್ತ? ಅಲ್ಲಿ ಮನೆಯಲ್ಲಿ ಅಲ್ಪಸ್ವಲ್ಪಾ ದರೂ ಕೆಲಸ ಮಾಡಬೇಕಾಗುವದೆಂದು ನೀನು ಇಲ್ಲಿಗೆ ಬಂದೆಯೇನು? ಥೂ! ನಾಚಿಕೆ ಗೇಡೀ, ನೀನು ಇನ್ನು ಕಲಿತು ಮಾಡುವದೇನು? ಬೀದಿಯ ಬಸವೆಯಾಗಿ ಅಂಡಲೆಯ ಬೇಕೆಂದಿರುತ್ತೀಯಾ? ಹೋಗು, ನನ್ನೆದುರಿಗೆ ಇಲ್ಲದ ಹಗಣದ ಮಾತುಗಳನ್ನಾಡ ಬರಬೇಡ...." ಎಂದು ಗದ್ದರಿಸಿದಳು.

"ಅವ್ವಾ, ಹೀಗೇಕೆನ್ನುವೆ? ರಾತ್ರಿಯಿಂದ ಅಪ್ಪನ ಮುಖಚರ್ಯೆಯು ಹೇಗಾ ಗಿದೆ ನೋಡಿದೆಯಾ?" ಎಂದು ದುಃಖಿತ ದನಿಯಿಂದ ಕುಮುದಿನಿಯು ಅನ್ನಲು,

"ಹೋಗು ಮುಂಡೇ, ಹೋಗಿ, ಅವರ ಕೊರಳಿಗೆ ತೆಕ್ಕೆ ಬಿದ್ದುಕೋ. ರಂಡೇ, ನೀನು ಪರಪುರುಷರ ಮುಖಚರ್ಯೆಗಳನ್ನು ಚನ್ನಾಗಿ ಪರೀಕ್ಷಿಸ ಕಲಿತಿರುವೆಯವ್ವಾ!" ಹೀಗೆಂದು ಸರಸಿಯ ಬಾಯಿತೋಪು ಅಭದ್ರಶಬ್ದಗಳ ಗುಂಡುಗಳನ್ನು ಹಾರಿಸಹತ್ತಿತು. ಅಷ್ಟರಲ್ಲಿ ಅವರ ಮನೆಗೆ ಯಾರೋ ಪರಕೀಯರು ಬಂದದ್ದರಿಂದ ಸರಸಿಯ ಆ ಬಾಯಿ ಬಾಂಬುಗಳು ಒಮ್ಮೆಲೆ ಕಟ್ಟಾದವು. ಆಗ ಅಲ್ಲಿಗೆ ಬಂದವರು ಬೇರೆ ಯಾರೂ ಆಗಿರದೆ, ಕುಮುದಿನಿಯ ಭಾವನಾದ ವಲ್ಲಭರಾಯನಾಗಿದ್ದನು. ಆಕಸ್ಮಿಕವಾಗಿ ಬಂದ ಆತನನ್ನು ಕಂಡು ಮನೆಯೊಳಗಿದ್ದ ಸರಸಿ, ಕುಮುದಿನಿ ಹಾಗು ಭವಾನರಾಯ ಈ ಮೂವರಿಗೂ ಒಂದೊಂದು ಬಗೆಯಿಂದ ಸಮಾಧಾನವಾಯಿತು; ಆದರೆ ಆ ಸಮಾಧಾನದಲ್ಲಿ ಆ ಮೂವರ ಹೇತುಗಳೂ ಪರಸ್ಪರ ಭಿನ್ನವಾಗಿದ್ದವು. ಇನ್ನು ಕುಮುದಿನಿಯು ಇಲ್ಲಿಂದ ಹೊರಟು ಹೋಗುವಳೆಂದು ಸರಸಿಗೆ ಸಮಾಧಾನವಾಗಿತ್ತು. ಇನ್ನು ಈ ಚಂಡಾಲಳ ಕೈಯೊಳಗಿಂದ ಮಗಳು ಪಾರಾದಳೆಂದು ಭವಾನರಾಯನು ಸಮಾಧಾನಗೊಂಡನು. ಇನ್ನು ನಾನು ಇಲ್ಲಿಂದ ಹೊರಟು ಹೋಗುವದರಿಂದ ತನ್ನ ತಂದೆ-ತಾಯಿಗಳಲ್ಲಿಯ ವೈಮನಸ್ಸು ಕಡಿಮೆಯಾಗಿ, ಇಬ್ಬರೂ ಸುಖ-ಶಾಂತಿಯಲ್ಲಿರುವರೆಂದು ತಿಳಿದು ಕುಮುದಿನಿಯು ಸಮಾಧಾನ ಹೊಂದಿದಳು.

ಕಾಗೆ ಕೂಡ್ರಲಿಕ್ಕೂ ಟೊಂಗೆ ಮುರಿಯಲಿಕ್ಕೂ ಗಂಟು ಬೀಳುವಂತೆ ಇಂದು ವಲ್ಲಭರಾಯನು ವಿಜಾಪುರಕ್ಕೆ ಬಂದಾಗ ಆಯಿತು; ಯಾಕಂದರೆ ಇಂದು ಕುಮುದಿನಿಯು ತನ್ನ ಮಲತಾಯಿಯ ಹೊಲ್ಲದ ಮಾತುಗಳಿಗೆ ಬೇಜಾರಗೊಂಡು, ತನ್ನನ್ನು ಕರೆದೊಯ್ಯಿರೆಂದು ಗಂಡನಿಗೆ ಪತ್ರ ಬರೆಯಬೇಕೆಂದು ನಿಶ್ಚಯಿಸಿದ್ದಳು. ಅವಳ ಮನಸ್ಸಿನ ಆ ಚಿಂತಾಭಾರವು ವಲ್ಲಭರಾಯನ ಆಗಮನದಿಂದ ಒಮ್ಮೆಲೆ ಹಗುರಾಯಿತು.

ಸರಸಿಯು ವಲ್ಲಭರಾಯನನ್ನು ಕಂಡ ಕೂಡಲೆ ಚಟಕ್ಕನೆ ಹಾಸಿಗೆಯಿಂದೆದ್ದಳು. ಹರವಿದ್ದ ಕೂದಲುಗಳನ್ನು ಮೊದಲು ಸರಿಪಡಿಸಿಕೊಂಡಳು; ಹಾಗು ಇದುವರೆಗಿನ ತನ್ನ ಉರಿಮೊಗವನ್ನು ನಾಟಕದೊಳಗಿನ ಟ್ರಾನ್ಸಫರ ಸೀನರಿಯಂತೆ ಒಮ್ಮೆಲೆ ಬದಲಿಸಿ ನಗಮೊಗದಿಂದ ವಲ್ಲಭರಾಯನೆದುರಿಗೆ ಬಂದು ನಿಂತು, ಅವರ ಮನೆಯ ಜನರ ಕುಶಲ ವಾರ್ತೆಯನ್ನು ಕೇಳತೊಡಗಿದಳು. ಬೀಗರ ಉಪಚಾರ-ಔತನಗಳಿಗಾಗಿ ಭರದಿಂದ ಸಿದ್ಧತೆ ನಡೆಸಿದಳು. ಬಳಿಕ ಅವಳು ಕುಮುದಿನಿಗೆ ಹೆಳಲು ಹಾಕಹತ್ತಿದಳು. ಅವಳ ಗುಣಗಳನ್ನು ವರ್ಣಿಸಹತ್ತಿದಳು "ಇವಳು ಬಂದು ಸ್ವಲ್ಪೇ ದಿನಗಳಾಗಿರಲು, ಇಷ್ಟರಲ್ಲೇ ಇವಳನ್ನು ಕರೆದೊಯ್ಯುವ ಕಾರಣವೇನು?" ಇತ್ಯಾದಿ ಔಪಚಾರಿಕ ಶಬ್ದಗಳು ಹೊರಬೀಳಹತ್ತಿದವು. ಅದನ್ನೆಲ್ಲ ಕಂಡು ವಲ್ಲಭರಾಯನು ಚಕಿತನಾದನು. ಮುನ್ನಿನ ರಾತ್ರಿಯಲ್ಲಿ ಹುಚ್ಚು ಹಿಡಿದ ನಾಯಿಯಂತೆ ಮೈ ಮೇಲೆ ಏರಿ ಬರುತ್ತಿದ್ದ ತನ್ನ ಹೆಂಡತಿಯು ಯಕ್ಷಿಣಿಯ ಮಾಯೆಯಿಂದ ಇಷ್ಟು ಸಭ್ಯಳಾದಳೋ ಏನೋ ಎಂದು ಭವಾನರಾಯನು ವಿಚಾರಮೂಢನಾದನು. ಕುಮುದಿನಿಗೆ ಮಾತ್ರ ಸರಸಿಯ ಆ ಆಚರಣೆಯಿಂದ ಸೋಜಿಗವೆನಿಸಲಿಲ್ಲ. ಈ ಮಾಯ್ಯ

ಗಾರ್ತಿಯು ಇಷ್ಟೇಕೆ ಖುಷಿಗೊಂಡಿರುವಳೆಂಬವನ್ನು ಅವಳು ಚೆನ್ನಾಗಿ ಅರಿತು ಕೊಂಡಿದ್ದಳು.

ಊಟವಾದ ಬಳಿಕ ಭವಾನರಾಯನೂ ವಲ್ಲಭರಾಯನೂ ಪಡಸಾಲೆಯ ಮೇಲೆ ಅಡ್ಡಾಗಿದ್ದರು. ವಲ್ಲಭರಾಯನು ತಾನು ಬಂದ ಉದ್ದೇಶವನ್ನು ಭವಾನ ರಾಯನಿಗೆ ತಿಳಿಸಿದನು. ವಲ್ಲಭರಾಯರ ಆಪ್ತರ ಮನೆಯ ಲಗ್ನಕ್ಕೆಂದು ಅವರು ಕುಮುದಿನಿಯನ್ನು ಇಷ್ಟು ಬೇಗನೆ ಕರೆಯ ಬಂದಿದ್ದರು. ಕುಮುದಿನಿಯಂತಹ ಸದ್ಗುಣಿಯಾದ ಮಗಳನ್ನು ಇಷ್ಟು ಬೇಗನೆ ಕಳಿಸುವುದು ಭವಾನರಾಯನ ಜೀವಕ್ಕೆ ಬಂತು; ಆದರೂ ಲಗ್ನವಾದ ಹೆಣ್ಣುಮಗಳೆಂದರೆ ಮಂದಿಯ ಸೊತ್ತು. ಅದನ್ನು ಅವರದವರಿಗೆ ಒಪ್ಪಿಸಲೇಬೇಕು. ಮೇಲಾಗಿ ಮನೆಯಲ್ಲಿ ಚಂಡಾಲಸ್ವಭಾವದ ಹೆಂಡತಿಯ ಕಾಟ; ಅಂದ ಬಳಿಕ ಆತನೇನು ಮಾಡಬೇಕು? ಕುಮುದಿನಿಯು ಅತ್ತೆಯ ಮನೆಗೆ ಹೋಗುವದೇ ಉಕ್ತವೆಂದು ತಿಳಿದು, ವಲ್ಲಭರಾಯನ ಮಾತಿಗೆ ಸಮ್ಮತಿಸಿದನು.

ಅಂದೇ ಮಧ್ಯಾಹ್ನದಲ್ಲಿ ಸರಸಿಗೊಂದು ಪತ್ರ ಬಂದಿತು. ಆ ಪತ್ರವನ್ನೋದಿದ ನಂತರ ಅವಳು ಬಹು ಮೋದಗೊಂಡಳು; ಹಾಗು ಆ ಪತ್ರ ಬರೆದ ವ್ಯಕ್ತಿಯನ್ನು ಹಲವು ವಿಧದಿಂದ ಮನದಲ್ಲಿಯೇ ಕೊಂಡಾಡಿದಳು. ಅವಳು ಆ ಪತ್ರದಲ್ಲಿ ಸೂಚಿಸಿ ದಂತೆಯೇ ನಡೆಯುವದನ್ನು ನಿರ್ಧರಿಸಿಕೊಂಡು ಆ ಉದ್ಯೋಗಕ್ಕೆ ತೊಡಗಿದಳು.

ನಾಳೆ ಬೆಳಿಗ್ಗೆ ಊರಿಗೆ ಹೋಗಬೇಕಾಗುವದೆಂದು ಕುಮುದಿನಿಯು ತಮ್ಮೂರ ತನ್ನ ಗೆಳತಿಯರಿಗೆ ಅಂದೇ ಭೆಟ್ಟಿಯಾಗಿ ಹೇಳಿ ಬರುವದಕ್ಕೆಂದು, ಸಂಜೆಯ ಮುಂದೆ ಅವರ ಮನೆಗೆ ಹೋದಳು. ಭವಾನರಾಯನೂ ವಲ್ಲಭರಾಯನೊಡನೆ ಬೇರೆ ಕಡೆಗೆ ಹೋಗಿದ್ದನು. ಈ ಸಂಧಿಯನ್ನು ಸಾಧಿಸಿ ಸರಸಿಯು ನಿರ್ಮಲಾ ಶರಣಮ್ಮನ ಪತ್ರದ ಮೇರೆಗೆ ಭವಾನರಾಯನ ಕಪಾಟಿನೊಳಗಿದ್ದ ಕುಮುದಿನಿಯ ಗಂಡನ ಮನೆಯ ಹಾಗು ತವರು ಮನೆಯ ಎಲ್ಲ ವಸ್ತ-ಒಡವೆಗಳನ್ನು ತಕ್ಕೊಂಡು ಬೇರೆ ಸ್ಥಳದಲ್ಲಿ ಗೌಪ್ಯವಾಗಿರಿಸಿ ಬಿಟ್ಟಳು.

ರಾತ್ರಿಯಲ್ಲಿ ಕುಮುದಿನಿಯು ತನ್ನ ಸಾಮಾನುಗಳನ್ನು ಸಿದ್ಧಪಡಿಸಿಕೊಳ್ಳು ವಾಗ ತಂದೆಯ ಬಳಿಯ ತನ್ನ ಆಭರಣಗಳ ಡಬ್ಬಿಯನ್ನು ಕೇಳಿದಳು. ಭವಾನ ರಾಯನು ಕಪಾಟಿನ ಬೀಗ ತೆಗೆದು ನೋಡುತ್ತಾನೆ, ತಾನಿಟ್ಟ ಸ್ಥಳದಲ್ಲಿ ಆ ಆಭರಣದ ಡಬ್ಬಿಯೇ ಇರಲಿಲ್ಲ. ಅದರಿಂದ ಆತನು ಎಷ್ಟೋಹೊತ್ತಿನ ವರೆಗೆ ಕಪಾಟಿನಲ್ಲಿಯೂ ಬೇರೆ ಎಲ್ಲ ಸ್ಥಳಗಳಲ್ಲಿಯೂ ಹುಡುಕಿದನು. ಎಲ್ಲಿಯೂ ಅದು ಸಿಗಲಿಲ್ಲ. ಆತನು ಅಂದೇ ಮಧ್ಯಾಹ್ನದಲ್ಲಿ ಅದನ್ನು ಆ ಕಪಾಟಿನಲ್ಲಿ ನೋಡಿದ್ದನು. ಹೀಗಿದ್ದು ಆಯತ ಕಾಲಕ್ಕೆ ಆ ಡಬ್ಬಿಯು ಅಲ್ಲಿಂದ ಮಾಯವಾದದ್ದರಿಂದ, ಅವನಿಗೆ ತನ್ನ ಹೆಂಡತಿಯ ವಿಷಯಕ್ಕೆ ಸಂಶಯ ಬಂದಿತು; ಆದರೆ ಆಗ ಆತನು ಆ ಬಗ್ಗೆ ಅವಳನ್ನು ಏನೊಂದೂ ಕೇಳುವಂತಿರಲಿಲ್ಲ; ಯಾಕಂದರೆ ಅವಳು ಆ ಬಗ್ಗೆ ಸರಳವಾದ ಉತ್ತರ ಹೇಳದೆ,

ಮನೆಗೆ ಬಂದ ಬೀಗರ ಎದುರಿಗೆ ಇಲ್ಲದ ಆಕ್ರೋಶ ಮಾಡಿ, ತನ್ನ ಅವಮಾನ ಮಾಡುವಳೆಂದು ಬಗೆದ- ಸುಮ್ಮನಾದನು. ಬಳಿಕ ಕುಮುದಿನಿಯನ್ನು ಒತ್ತಟ್ಟಿಗೆ ಕರೆದು ನಿಜ ಸಂಗತಿಯನ್ನು ತಿಳಿಸಿ, ನಾನು ನಿನ್ನ ಭಾವನಿಗೆ ಈ ಬಗ್ಗೆ ಈಗ ಬೇರೊಂ-ದು ನೆವ ಹೇಳುತ್ತೇನೆಂದೂ ಇನ್ನು ತುಸ ದಿನಗಳಲ್ಲಿಯೇ ಅವುಗಳ ಪತ್ತೆ ಹಚ್ಚಿ ಅವುಗಳನ್ನೆಲ್ಲ ಅವರಿಗೆ ತಲುಪಿಸುವ ವ್ಯವಸ್ಥೆ ಮಾಡುತ್ತೇನೆಂದೂ ಹೇಳಿ ಅವಳನ್ನು ಸಮಾಧಾನ ಪಡಿಸಿದನು.

ರಾತ್ರಿಯ ಊಟವಾದ ಬಳಿಕ ಭವಾನರಾಯನು ವಲ್ಲಭರಾಯನನ್ನು ಕುರಿತು: "ರಾಯರೇ, ನೀವು ಕುಮುದಿನಿಯನ್ನು ಹೀಗೆ ಅಕಸ್ಮಿಕವಾಗಿ ಕರೆಯಬರುತ್ತೀರೆನ್ನು ವದು ನನಗೆ ಹೇಗೆ ಗೊತ್ತಾಗಬೇಕು? ಅವಳು ಇನ್ನೂ ವರ್ಷೆರಡು ವರ್ಷ ಇಲ್ಲಿಯೇ ಇರುವಳೆಂದು ಭಾವಿಸಿ, ನಾನು ಅವಳ ಎಲ್ಲ ಆಭರಣಗಳನ್ನು ನಮ್ಮ ನೆರೆಹೊರೆಯ ಬಂಧುಗಳ ಮನೆಯ ಲಗ್ನದ ಹುಡುಗಿಗೆ ಇಡಲಿಕ್ಕೆ ಕೊಟ್ಟಿರುತ್ತೇನೆ; ಆ ಹುಡು ಗಿಯ ಲಗ್ನವು ಇದೇ ವಾರದಲ್ಲಿರುವದು. ಆದರಿಂದ ನಾನು ಈಗಲೆ ಅವರಿಂದ ಅವು ಗಳನ್ನು ಇಸಕೊಂಡು ಬರುವಂತಿಲ್ಲ. ನನ್ನ ಸ್ಥಳದಲ್ಲಿ ನೀವಿದ್ದರೂ ನೀವೂ ಹೀಗೆಯೇ ಮಾಡಬಹುದಾಗಿತ್ತು. ಆದ್ದರಿಂದ ನೀವು ಕುಮುದಿನಿಯನ್ನು ಇನ್ನೆಂಟು ದಿನ ಗಳಿಗೆ ಕರೆದೊಯ್ಯಬೇಕು; ಇಲ್ಲವೆ ಆ ನಮ್ಮ ಬಂಧುಗಳ ಮನೆಯ ಲಗ್ನವಾದ ಕೂಡಲೆ ನಿಮ್ಮ ಎಲ್ಲ ಆಭರಣಗಳನ್ನು ನಾನೇ ನಿಮಗೆ ತಲುಪಿಸುವ ವ್ಯವಸ್ಥೆ ಮಾಡು ತ್ತೇನೆ ಇವುಗಳಲ್ಲಿ ನಿಮಗೆ ಸರಿದೋರಿದಂತೆ ಮಾಡಬೇಕು" ಎಂದು ಹೇಳಿದನು.

ಭವಾನರಾಯನು ದೊಡ್ಡ ಮನುಷ್ಯನೆಂಬದು ವಲ್ಲಭರಾಯನಿಗೆ ಗೊತ್ತಿತ್ತು. ಆದರಿಂದ ಅವನು ಯಾವ ಸಂದೇಹವನ್ನೂ ತಾಳದೆ, ಇನ್ನೆಂಟು ದಿನಗಳಿಗೆ ಆಭರಣ ಗಳನ್ನು ನೀವೇ ಕಳಿಸಿರೆಂದು ಹೇಳಿ, ಮರುದಿನ ಬೆಳಿಗ್ಗೆ ಕುಮುದಿನಿಯೊಡನೆ ಬಳ್ಳಾ ರಿಗೆ ನಡೆದನು.

ಅಂದು ಸರಬಿಗೆ ಬಂದ ಪತ್ರದಲ್ಲಿ "ಕುಮುದಿನಿಯ ಅಭರಣಗಳನ್ನೆಲ್ಲ ಎತ್ತಿ ಹಾಕಬೇಕು; ಅದರಿಂದ ಅವಳ ಮೇಲೆ ಅವಳ ಗಂಡನ ಮನೆಯವರು ನಾನಾ ಬಗೆಯ ಸಂದೇಹಗೊಂಡು ಅವಳನ್ನು ತಮ್ಮ ಮನೆಯಿಂದ ಹೊರಗೆ ಹಾಕುವರು. ಹೀಗೆ ಮಾಡುವದರಿಂದ ಈ ವಿದ್ಯಾವತಿಯರ ಸೇಡು ತೀರಿಸಿಕೊಂಡಂತಾಗು ವದು. ಇದರಿಂದ ನಿನ್ನಂತೆ ನರ್ಮದಾಬಾಯಿಗೂ ಸಮಾಧಾನವಾಗುವದೆ"ಂದು ಬರೆದಿತ್ತು. ಆ ಪತ್ರವನ್ನು ಬರೆದ ವ್ಯಕ್ತಿಯು ನಮ್ಮ ಕಮಲಾಕಾಂತ ಸಾಧು ಗಳ ಪಟ್ಟದ ಶರಣಮ್ಮಳಾದ ನಿರ್ಮಲೆಯು. ಇಂಥ ಕುಹಕ ವಿಚಾರದ ಆ ವ್ಯಕ್ತಿಯು ಸರಸಿಯ ಸಖಿಯು. ಸಮಾನ ಶೀಲೇ ವ್ಯಸನೇಷು ಸಖ್ಯಂ| ಎಂಬಂತೆ ಆ ಇಬ್ಬರೂ ಗೆಳತಿಯರು ಒಂದೇ ಬಗೆಯ ಹೀನ ಆಚಾರ-ವಿಚಾರದವರಿರಬೇಕಲ್ಲವೆ?

---

## ಕಿ ವಿ ಮಾ ತು.

ಕುಮುದಿನಿಯನ್ನು ಕರೆದೊಯ್ದ ನಂತರ ತುಸದಿನಗಳಲ್ಲಿಯೇ ಭವಾನರಾಯನು ಹೆಂಡತಿಯ ಗುಪ್ತ ಸ್ಥಳಗಳನ್ನೆಲ್ಲ ಶೋಧಿಸಿ, ಕುಮುದಿನಿಯ ಆಭರಣಗಳನ್ನು ಗೊತ್ತು ಹಚ್ಚಿದನು. ಆಗ ಅವನಿಗೊಂದು ಹಂಚಿಕೆಯು ಸೂಚಿಸಿತು. ಕೂಡಲೆ ಅವನು ಆ ಎಲ್ಲ ಆಭರಣಗಳನ್ನು ತನ್ನ ಜೋತರದ ಸೆರಗಿನಲ್ಲಿ ಸುರುವಿಕೊಂಡು, ಆ ಆಭರಣಗಳ ಡಬ್ಬಿಯನ್ನು ತನ್ನ ಹೆಂಡತಿಯು ಇಟ್ಟಲ್ಲಿಯೇ ಇರಿಸಿ, ಅದರ ತೂಕವು ಕಡಿಮೆಯಾಗಿ ತೋರಬಾರದೆಂದು ಅದರಲ್ಲಿ ಒಂದೆರಡು ಭಾರವಾದ ಕಲ್ಲುಗಳನ್ನು ಹಾಕಿ ಮುಚ್ಚಿಟ್ಟನು; ಹಾಗು ಆ ಆಭರಣಗಳನ್ನು ತನ್ನ ಮಿತ್ರನಾದ ಪ್ರಭಾಕರನ ಮುಖಾಂತರ ವಲ್ಲಭರಾಯನಿಗೆ ಕಳಿಸಿದನು. ಆ ಸಂಗತಿಯೂ ಅದರ ಮುಂದಿನ ವೃತ್ತಾಂತವೂ ನಮ್ಮ ವಾಚಕರಿಗೆ ಈ ಕಥಾನಕದ ಈ ಮೊದಲಿನ ಪ್ರಕರ್ಣಗಳಲ್ಲಿ ತಿಳಿದಿದೆ. ಮುಂದೊಂದು ದಿನ ರಾತ್ರಿ ಸರಸಿಯು ಆ ಆಭರಣಗಳ ಡಬ್ಬಿಯನ್ನು ತೆಗೆದು ನೋಡಲು ಅದು ತೆರವಾಗಿದ್ದು, ಅದರಲ್ಲಿ ಭಾರವಾದ ಕಲ್ಲುಗಳಿರುವುದು ಗೋಚರವಾಯಿತು. ಈ ಕೃತಿಯು ತನ್ನ ಗಂಡನದೇ ಎಂದು ತಿಳಿದ ಸರಸಿಯು ಗಂಡನ ಮೇಲೆ ಕ್ರೋಧಸಂತಪ್ತಳಾಗಿ, ತನ್ನ ಮಲಮಗಳನ್ನು ಬಾಯಿಗೆ ಬಂದಂತೆ ಬೈಯುತ್ತ ಆ ಡಬ್ಬಿಯನ್ನು ಆ ಸ್ಥಳದಿಂದಲೇ ಗಂಡನು ಮಲಗಿರುವ ಕಡೆಗೆ ಬಿಸುಟಿಬಿಟ್ಟಳು. ಕೂಡಲೆ ಕರ್ಮಧರ್ಮ ಸಂಯೋಗದಿಂದ ಅದು ಭವಾನರಾಯನ ಹಣೆಗೆ ಬಡಿದು, ಪೋಟೆ ಬಿದ್ದು, ಅದರೊಳಗಿಂದ ನೆತ್ತರದ ಧಾರೆಗಳು ಸುರಿಯಹತ್ತಿದವು. ಅದರಿಂದ ಸರಸಿಯು ಗಾಬರಿಗೊಂಡು ಗಂಡನ ಸಲಹೆಯ ಮೇರೆಗೆ ನೆರೆಮನೆಯ ಕಲ್ಲಪ್ಪನ ಮುಖಾಂತರ ಜಂಗೀ ಡಾಕ್ಟರರಿಂದ ತನ್ನ ಗಂಡನಿಗೆ ಔಷದೋಪಚಾರ ಮಾಡಿಸಿದಳು; ಆದರೆ ದುರ್ದೈವದ ಮೂಲಕ ಯಶ ದೊರೆಯದೆ, ಮುಂದೆ ತುಸ ದಿನಗಳಲ್ಲಿ ಭವಾನರಾಯನು ಆ ಅಪಘಾತದಿಂದಲೇ ತನ್ನ ಇಹಲೋಕದ ಯಾತ್ರೆಯನ್ನು ಮುಗಿಸಿದನು ಆಗ ಸರಸಿಯ ಮೇಲೆ ವಜ್ರಾಘಾತವಾದಂತಾಯಿತು. ಆ ಸಂಗತಿಯನ್ನು ಕೇಳಿ ಕುಮುದಿನಿಯು ತಲ್ಲಣಗೊಂಡಳು.

ಭವಾನರಾಯನು ತೀರಿಕೊಂಡನಂತರ ಕೆಲ ದಿನಗಳ ಮೇಲೆ ಸರಸಿಯ ಮನೆಗೆ ಒಂದು ವ್ಯಕ್ತಿಯು ಅವಳನ್ನು ಮಾತಾಡಿಸಲಿಕ್ಕೆಂದು ಬಂದಿತು. ಅದು ಬಂದ ಕೂಡಲೆ ಸರಸಿಗೆ ಒಂದು ದುಃಖದ ಆವೇಗವು ಬಂದರೂ ತುಸ ಹೊತ್ತಿನಲ್ಲಿಯೇ ಅವಳು ಶಾಂತಳಾಗಿ, ಆ ವ್ಯಕ್ತಿಯ ಕೂಡ ಗುಜುಗುಜು ಎಂದು ಮಾತಾಡಲಾರಂಭಿಸಿದಳು. ಆ ವ್ಯಕ್ತಿಯು ಬೇರೆ ಯಾರೂ ಆಗಿರದೆ, ಈ ಮೊದಲು ಸರಸಿಗೆ ಪತ್ರ ಬರೆದು ಕುಮುದಿನಿಯ ಆಭರಣಗಳನ್ನೆಲ್ಲ ಅಪಹರಿಸಲಿಕ್ಕೆ ಸೂಚಿಸಿದ ನಿರ್ಮಲೆಯಾಗಿದ್ದಳು. ನಿರ್ಮಲೆಯು ಬಂದೊಡನೆಯೆ ಸರಸಿಯನ್ನು ಕುರಿತು:—ಸರಸಕ್ಕಾ ದೇವರು ನಿನ್ನ ಮೇಲೆ ಹೀಗೆ ಒಮ್ಮೆಲೆ ರುಷ್ಟನಾದದ್ದನ್ನು ನೋಡಿ ನನಗೆ ಬಹು ಕೆಡ

ಕೆನಿಸುತ್ತದೆ; ಆದರೆ ದೇವರು ಯಾವಾಗಲೂ ಮಾನವರ ಹಿತ ಬಯಸುವವನೇ. ಅದರಿಂದ ನಮಗೆ ಪರಿಣಾಮದಲ್ಲಿ ಹಿತವಾಗುವದಕ್ಕೆಂದೇ ಅವನು ನಮ್ಮ ಮೇಲೆ ಇಂಥ ಹಲವು ಸಂಕಟಗಳನ್ನು ತಂದೊಡ್ಡುವನು. ಸರಸೀ-ಸರಸಕ್ಕಾ, ನಿನಗೆ ನಿನ್ನ ಆ ಗಂಡನಿಂದಾದರೂ ಏನು ಸುಖವಿದ್ದಿತು? ಆತನ ಒಲವೆಲ್ಲ ತನ್ನ ಆ ಸುಶಿಕ್ಷಿತಳೆನಿಸಿಕೊಳ್ಳುವ ಮಗಳ ಕಡೆಗೇ. ಈ ಸುಶಿಕ್ಷಿತ ಮುಂಡೆಯರು ಯಾರ ಯಾರನ್ನು ತಮ್ಮ ಜಾಲದಲ್ಲಿ ಕೆಡವಿಕೊಳ್ಳುವರೆಂಬದಕ್ಕೆ ನಿಯಮವುಳಿದಿಲ್ಲ. ಅವನಿಂದ ನೀನು ಇದುವರೆಗೆ ಅದಾವ ಸಂಸಾರ ಸುಖವನ್ನು ಅನುಭವಿಸಿದೆ? ಆ ಐವತ್ತರ ಮನೆಗೆ ಬಂದ ಭವಾನರಾಯನು ನಿನ್ನಂತಹ ಮದೋನ್ಮತ್ತ ನವತರುಣಿಗೇನು ತಕ್ಕ ವರನೇ? ನೀನು ಅವನೊಡನೆ ಕಳೆದ ೮-೧೦ ವರ್ಷಗಳಿಂದ ಸಂಸಾರ ಮಾಡಿದೆ; ಆದರೆ ನಿನಗೆ ಒಂದಾದರೂ ಮಗುವಾಯಿತೇ? ಕ್ಷೇತ್ರವು ಎಂಥ ಉತ್ತಮವಾದದ್ದಿದ್ದರೂ ಅದರಲ್ಲಿ ಹುಳಿತ ಬೀಜವನ್ನು ಹೂಳುವದರಿಂದೇನು ಪ್ರಯೋಜನವಾಗಬೇಕು? ಇನ್ನು ಆತನ ಆಸ್ತಿ-ಪಾಸ್ತಿಗಳಿಗೂ ದೊಡ್ಡ ತಲಬಿನ ಸರಕಾರೀ ನೌಕರಿಗೂ ಮನಸೋತು, ನಿನ್ನ ತಂದೆ-ತಾಯಿಗಳು ಆ ಮುದಿಹದ್ದಿನ ಕೊರಳಲ್ಲಿ ನಿನ್ನಂತಹ ಸುಕುಮಾರಿಯನ್ನು ಕಟ್ಟಿದ್ದರು; ಆದರೆ ತಂಗೀ, ಸರಸಕ್ಕಾ, ನಿನ್ನ ಆ ಮುದಿಗಂಡನು ತನ್ನ ಮಗಳ ಮೇಲಿನ ಮೋಹದಿಂದ ತನ್ನ ಆಸ್ತಿಯ ಬಹು ಭಾಗವನ್ನೂ ತನ್ನ ಪ್ರಾವ್ಹಿಡೆಂಟ ಫಂಡಿನ ಹಣವನ್ನೂ ಆಕೆಯ ಹೆಸರಿಗೆ ಮಾಡಿಬಿಟ್ಟಿರುತ್ತಾನೆಂಬದು ನಿನಗೆಲ್ಲಿ ಗೊತ್ತಿದೆ? ಮನೆಯೊಳಗಿನ ನಗದು ರೂಪವಾದ ಆಭರಣಗಳ ಡಬ್ಬಿಯನ್ನು ಅವನು ನಿನ್ನ ಕಣ್ಣಿಗೆ ಇಂಗು ಹಚ್ಚಿ ಹೇಗೆ ಬರಿದಾಗಮಾಡಿದ್ದನೆಂಬದು ನಿನಗೆ ಗೊತ್ತೇ ಇದೆ. ಆದುದರಿಂದ ತಂಗೀ, ನೀನಗಿನ್ನು ಆತನ ಕಟಕಟಿಯ ಪರ್ಲು ಹರಿದು ಹೋದ್ದರಿಂದ, ನೀನಿನ್ನು ಸುಖವಾಗಿರು; ಹಾಗು ನಮ್ಮ ಅಖಂಡಾನಂದ ವೇದಾಂತವೇದ್ಯರಾದ ಶ್ರೀ ಕಮಲಾಕಾಂತ ಸಾಧುಗಳ ಸನ್ನಿಧಿಯನ್ನು ಸೇರಿ, ಜನ್ಮ ಸಾರ್ಥಕ್ಯ ಮಾಡಿಕೊಳ್ಳುವ ಮಾರ್ಗಕ್ಕೆ ಹತ್ತು.

ಅಂದಿನ ಅವರೀರ್ವರ ಭೆಟ್ಟಿಯು ಅಷ್ಟಕ್ಕೇ ಮುಗಿಯಿತು ಮುಂದೆ ಮೂರು-ನಾಲ್ಕು ದಿನಗಳ ಮೇಲೆ ನಿರ್ಮಲೆಯು ಮತ್ತೆ ಸರಸಿಯ ಮನೆಗೆ ಬಂದಳು; ಹಾಗು ಸರಸಕ್ಕಾ, ಏನು ನಡಿಸಿರುತ್ತೀರಿ? ಎಂದು ಕೇಳಿದಳು.

"ಮತ್ತೇನು ನಡಿಸುವದು ನಿರ್ಮಲಕ್ಕಾ? ಎಷ್ಟು ಆಲೋಚಿಸಿದರೂ ಮುಂದೇನ ಮಾಡಬೇಕೆಂಬದು ನಿರ್ಧರವಾಗಲೊಲ್ಲದು. ನೀವೂ ನನ್ನಂತೆ ವಿಧವೆಯಾಗಿದ್ದರೂ ನೀವು ಈ ಸಂಸಾರಲೇಪದಿಂದ ಮುಕ್ತರಾಗಿಬಿಟ್ಟಿರುತ್ತೀರಿ."

"ಅಹುದವ್ವಾ-ಅಹುದು. ನಾನೂ ನಿನ್ನಂತೆ ಮನೆಯಲ್ಲೇ ಮುಳುಮುಳು ಎಂದು ಅಳುತ್ತ ಕುಳಿತಿದ್ದರೆ ನನಗೀ ಸ್ಥಿತಿಯು ಪ್ರಾಪ್ತವಾಗುತ್ತಿದ್ದಿಲ್ಲ ನನ್ನ ಪೂರ್ವ ಜನ್ಮಗಳ ಸುಕೃತದಿಂದಲೂ ಕಮಲಾಕಾಂತ ಸಾಧುಗಳ ಕೃಪೆಯಿಂದಲೂ ನನ್ನ ಪತಿಯ ಮರಣದ ನಂತರ ತುಸ ದಿನಗಳಲ್ಲೇ ನನಗೆ ಅವರ ಸಹವಾಸದ ಯೋಗವು

ಪ್ರಾಪ್ತವಾಯಿತು; ಹಾಗು ನಾನು ಅದನ್ನು ನನ್ನ ಚಾತುರ್ಯದಿಂದ ಪೃಥಕಪಡಿಸಿ ಕೊಂಡದ್ದರಿಂದ ನನ್ನ ಸ್ಥಿತಿಯು ಸುಧಾರಿಸಿ, ಈಗ ನಾನೊಬ್ಬಳು ಕಮಲಾಕಾಂತ ಸಾಧುಗಳ ಪಟ್ಟದ ಶಿಷ್ಯಿಣಿಯಾಗಿರುತ್ತೇನೆ."

"ನಿರ್ಮಲಕ್ಕಾ, ನೀವು ಮುಖ್ಯ ಶಿಷ್ಯಿಣಿಯರಾದ್ದರಿಂದ ನಿಮಗೆ ಸಾಗ್ರ ಶಿಷ್ಯವರ್ಗವು ಸನ್ಮಾನಮಾಡುತ್ತದೆ. ಅದರಿಂದ ಜನರಲ್ಲಿ ನಿಮ್ಮ ವರ್ಚಸ್ವವ ಗುವದಲ್ಲದೆ, ಎಷ್ಟೋ ಜನ ಭಕ್ತರ ಕಾರ್ಯಗಳು ಸುರಳಿ ವಾಗಿ ಎಷ್ಟೋ ಜನ ಶಿಷ್ಯರು ನಿಮ್ಮ ವಚನಗಳನ್ನು ವೇದವಾಕ್ಯಗಳೆಂದು ತಿಳಿ ಗಳಂತೆ ನಡೆಯಲು ಹೆಣಗುವರು."

"ತಂಗೀ, ನೀನನ್ನುವದು ಸುಳ್ಳಲ್ಲ. ನನ್ನಿಂದ ಪ್ರೇರಿತರಾದ ಎಷ್ಟೋ ಜನ ಶಿಷ್ಯ ಶಿಷ್ಯಿಣಿಯರು ನಮ್ಮ ಸಾಧುಗಳ ಭಕ್ತವೃಂದದಲ್ಲಿ ಸೇರಿರುತ್ತಾರೆ; ಆದರೆ ನಮ್ಮ ಗುಂಡ ನಂತಹ ಕೆಲ ಉಪದ್ವ್ಯಾಪಿ ಜನರಿಗೆ ಮಾತ್ರ ನನ್ನ ಬೋಧದಿಂದ ಏನೂ ಪ್ರಯೋ ಜನವಾಗುವದಿಲ್ಲ ನನ್ನ ಬೋಧವು ಅವರಿಗೆ 'ಬೋರ್ಗಲ್ಲ ಮೇಲೆ ಮಳೆಗರೆದರೂ ಕಲ್ಲು ನೀರ್ಕುಡಿಯಬಹುದೇ?' ಎಂಬಂತಾಗುವದು."

"ಅದೇಕೆ? ಹಾಗಾಗುವದಕ್ಕೆ ಕಾರಣವೇನು?"

"ಯಾಕಂದರೆ, ಅವರು ಸಂಸಾರಪಾಶದಲ್ಲಿ ಪೂರಾ ಸಿಲುಕಿದವರು. ಗುಂಡ ನಿಗೆ ನಾನು ಎಷ್ಟು ಹೇಳಿದರೂ ಆತನು ತನ್ನ ಅಣ್ಣನ ದ್ವೇಷ ಮಾಡುವದನ್ನು ಬಿಡ ಲೊಲ್ಲನು. ಅವರಿಬ್ಬರಲ್ಲಿಯೂ ಈಗ ಫೌಜದಾರಿಯು ಖಟ್ಲೆ ನಡೆದಿದೆ. ಇಬ್ಬರೂ ನೂರಾರು ರೂಪಾಯಿ ಕಳಕೊಂಡಿರುತ್ತಾರೆ. ಅದರಿಂದ ಈಗ ಅವರಿಗೆ ನನ್ನ ಹಾಗು ನಮ್ಮ ಸಾಧುಗಳ ಬೋಧವು ನೆನಪಾಗಹತ್ತಿದೆ. ಮೊನ್ನೆ ಅವರಿಬ್ಬರೂ ನನ್ನೆಡೆಗೆ ಬಂದು ನನಗೆ ದುಂಬಾಲ ಬಿದ್ದುದರಿಂದ ನಾನು ಅವರನ್ನು ಸಾಧುಗಳ ಬಳಿಗೆ ಕರೆ ದೊಯ್ದೆನು. ಅವರಿಬ್ಬರನ್ನು ದಾರಿಗೆ ತರಬೇಕಾದರೆ, ನಮಗೆ ಸಾಕು ಸಾಕಾಗಿ ಹೋಯಿತು."

"ಅವರ ಜಗಳವು ಏತಕ್ಕಾಗಿ ನಡೆದಿದೆ?"

"ಗುಂಡನು ಅವರಣ್ಣನ ಮಾಲಕಿಯ ಜಮೀನಿನೊಳಗಿನ ಎರಡು ಮೋಟು ಮರಗಳನ್ನು ಕಡಿದಿರುವನಂತೆ. ಅದಕ್ಕಾಗಿಯೇ ಇಷ್ಟು ಯಾದವಿಯು!

"ಎಂಥ ಅಣ್ಣ-ತಮ್ಮಂದಿರಮ್ಮಾ ಅವರು! ನಮ್ಮ ಜನರೊಳಗಿನ ಈ ಭಾಗಾದಿ ತನದಿಂದಲೇ ನಮ್ಮ ದೇಶವೆಲ್ಲ ಹಾಳಾಗಿ ಹೋಗಿದೆ. ಎಲ್ಲಿಯ ಗಿಡ, ಎಲ್ಲಿಯ ಮಾಲಕ? ಈ ಇಡಿ ಪ್ರಪಂಚವೇ ನಾಲ್ಕು ದಿನದ್ದಾಗಿರಲು, ಇಲ್ಲಿ ಹೀಗೆ ನ್ಯಾಯ- ನಿಗದಿ ಮಾಡಿ ಪ್ರಯೋಜನವೇನು? ನನ್ನ ಈ ಮನೆಯನ್ನು ಬೇಕಾದವರು ಲೂಟಿ ಮಾಡಿಕೊಂಡೊಯ್ದರೂ ನನ್ನ ಬಾಯಿಂದ ಚಕಾರ ಶಬ್ದ ಕೂಡ ಹೊರಡಲಿಕ್ಕಿಲ್ಲ."

"ಸರಸಕ್ಕಾ, ಎಲ್ಲರೂ ನಿನ್ನಂತೆ ಬಲ್ಲವರೆಲ್ಲಿರುತ್ತಾರೆ?"

"ಹೀಗೆ ಯಾರವಾದರೂ ಜಗಳ-ತಂಟೆಗಳನ್ನು ಕೇಳಿದೊಡನೆಯೇ ನನಗೆ ಹೇಗೆ-ಹೇಗೋ ಅನಿಸುತ್ತದೆ. ನನಗೆ ಆ ಗುಂಡಾವಿಗಳ ಭೆಟ್ಟಿಯಾಗಿದ್ದರೆ 'ಅಪ್ಪಗಳಿರಾ, ನೀವು ಹೀಗೆ ಸುಮ್ಮ ಸುಮ್ಮನೆ ಒಬ್ಬರ ಮೇಲೊಬ್ಬರೇಕೆ ಏರಿ ಹೋಗುತ್ತಿರುವಿರಿ? ಯಾರ ಸಂಪತ್ತಾದರೂ ಅವರೊಡನೆ ಹೋದದ್ದುಂಟೇ? ಈ ಅಸೂಯೆ-ದ್ವೇಷಗಳು ಗಾವಿಯೂ ದಾರಿದ್ರ್ಯದ ಬಯಕೆಗಳಾಗಿರುತ್ತವೆ. ನೀವು ಏನು ಸಂಪಾದಿಸಿದರೂ ಅದನ್ನು ...ಯೇ ಬಿಟ್ಟು ತೆರಳಬೇಕಾಗುವದು,' ಎಂದು ಹೇಳಿ, ಅವರನ್ನು ದಾರಿಗೆ ತರು...."

"ಅದಿರಲಿ. ಇನ್ನು ನೀನು ನಿನ್ನ ಕುಮುದಿನಿಯ ಬಗ್ಗೆ ಏನು ಮಾಡಬೇಕೆಂದಿರುತ್ತೀ?"

"ನಾನೇನು ಮಾಡುವದು? ಅವಳು ತನ್ನ ಗಂಡನ ಮನೆಯಲ್ಲಿ ಸುಖವಾಗಿರುವಳು."

"ಹಾಗಾದರೆ ಹೇಗೆ? ನಾನು ಅಂದು ನಿನಗೆ ಬರೆದ ಪತ್ರದ ಉದ್ದೇಶವೇನು? ಮತ್ತು ನಾನು ಈಗೆಂಟು ದಿನಗಳಿಂದ ನಮ್ಮ ಗುರುಗಳ ಸೇವಾ-ಶುಶ್ರೂಷೆಯನ್ನು ಬಿಟ್ಟುಕೊಟ್ಟು ನಿನ್ನ ಬಳಿಗೆ ಎಡತಾಕುತ್ತಿರುವ ಕಾರಣವಾವುದು?"

"ಅಂದರೇನು? ಇವರು ತೀರಿಕೊಂಡಂದಿನಿಂದ ನನಗೆ ಆ ನಮ್ಮ ಕುಮುದಿನಿಯನ್ನಾದರೂ ಒಮ್ಮೆ ನೋಡಬೇಕೆಂದೆನಿಸಹತ್ತಿದೆ. ಮಲಮಗಳಾದ ಆವಳನ್ನು ನಾನು ಉರಿಸಿಕೊಳ್ಳುವೆನೆಂದು ಬೀದಿಯ ಜನರು ಬೇಕಾದ ಹಾಗೆ ಆಡಿಕೊಳ್ಳುತ್ತಿದ್ದರೂ, ನನ್ನ ಮನಸ್ಸಿನಲ್ಲಿ ಅವಳ ವಿಷಯವಾಗಿ ದ್ವೇಷವಿಲ್ಲ. ಹೇಗಿದ್ದರೂ ನಾನು ಆಕೆಯ ತಾಯಿಯೇ. ಅವಳು ನನ್ನೊಡನೆ ಹೇಗೆ ನಡಕೊಂಡರೂ, ನಾನು ಮನಲಜ್ಜೆಗಲ್ಲದಿದ್ದರೂ ಜನಲಜ್ಜೆಗಾದರೂ ಅಂಜಬೇಡವೇ? ಆದ್ದರಿಂದ ನಿರ್ಮಲಕ್ಕಾ, ನಾನು ನಮ್ಮ ಕುಮುದಿನಿಯನ್ನೊಮ್ಮೆ ಕರೆಯಿಸಿಕೊಳ್ಳಬೇಕೆಂದಿರುತ್ತೇನೆ."

"ಛೀ! ಛೀ! ಸರಸಕ್ಕಾ, ನೀವಿದೇನನ್ನು ನುಡಿಯುತ್ತಿರುವಿರಿ? ನಿಮ್ಮ ಕುಮುದಿನಿಯಂತಹ ಹೆಣ್ಣು ನನ್ನ ಹೊಟ್ಟೆಯ ಮಗಳಾಗಿದ್ದರೂ ನಾನು ಅವಳನ್ನು ಒರಳಲ್ಲಿ ಹಾಕಿ ಕುಟ್ಟಿ ಕುಟ್ಟಿ ಕೊಂದು ಬಿಡುತ್ತಿದ್ದೆನು; ಆದರೆ ಅವಳ ಈ ಹುಚ್ಚುಚಾಚಾರವನ್ನು ಮಾತ್ರ ಎಂದೂ ನಡಿಸಿಗೊಡುತ್ತಿದ್ದಿಲ್ಲ"

'ಈಚೆಗೆ ಅವಳು ಮತ್ತೇನು ನಡಿಸಿರುವಳವ್ವಾ! ನನಗದಾವುದೂ ತಿಳಿಯದು.'

"ಸರಸಕ್ಕಾ, ನಿಮ್ಮಂತಹ ಭೋಳೇ ಭಾವಿಕರಿಗೆ ಈ ಆಧುನಿಕ ವಿದ್ಯಾನಿಪುಣೆಯರ ಹೊಲ್ಲದ ಕೃತಿಗಳ ಪರಿಜ್ಞಾನವು ಹೇಗಾಗಬೇಕು? ನಿಮ್ಮ ಕುಮುದಿನಿಯು ಆ ನಿಮ್ಮ ಗಂಡನ ಸ್ನೇಹಿತನೆಂದೆನಿಸಿಕೊಳ್ಳುವ ಪ್ರಭಾಕರನಿಗೆ ಪತ್ರ ಬರೆದು, ತನ್ನನ್ನು ಕರೆಯ ಬರಬೇಕೆಂದು ತಿಳಿಸಿದ್ದರಿಂದ ಆತನು ಇಂದೇ ಬಳ್ಳಾರಿಗೆ ಕರೆಯ ಹೋಗಿರುತ್ತಾನಂತೆ. ಅವಳು ತನ್ನ ತಂದೆಯ ಮನೆಗೆ ಬರುವ ನೆವದಿಂದ ಗಂಡನ ಮನೆಯಿಂದ ಹೊರಟರೂ, ಮುಂದೆ ಏನು ಮಾಡುವಳೆಂಬದು ತಿಳಿದಿದ್ದೇ ಇದೆ. ಆದಕಾರಣ ಸರ

ಸಕ್ಕಾ, ನೀನು ಈಗೊಂದು ಕೆಲಸ ಮಾಡಿದರೆ, ಕುಮುದಿನಿ-ಪ್ರಭಾಕರರ ಹಲ್ಲುಗಳನ್ನು ಚೆನ್ನಾಗಿ ಮುರಿದಂತಾಗಿ, ನಿನ್ನ ಮರ್ಯಾದೆಯನ್ನುಳಿಸಿಕೊಂಡಂತಾಗುವುದು. ಈ ಕಾಲಕ್ಕೆ ನೀನು ಸುಮ್ಮನೆ ಬಿಟ್ಟರೆ ಆ ಅವಿವೇಕಳಿಂದ ನಿಮ್ಮ ಮನೆತನಕ್ಕೆ ಕಲಂಕ ಹತ್ತಿದಂತಾಗುವದಲ್ಲದೆ, ಇಂಥ ಅನೀತಿಯ ಕೆಲಸಕ್ಕೆ ಪರ್ಯಾಯದಿಂದ ನೀನೂ ಸಹಾಯ ಮಾಡಿದ ಆರೋಪವು ಅವಳ ಗಂಡನ ಮನೆಯವರಿಂದ ನಿನ್ನ ಮೇಲೆ ಹೊರಿಸಲ್ಪಡುವುದು."

"ಆ ಪ್ರಭಾಕರಪಂತನೂ ಅವಳ ಜಾಲದಲ್ಲಿ ಸಿಲುಕಿರುವನೇ? ಅವನೀಗ ಐವತ್ತರ ಮನೆಯಲ್ಲಿಲ್ಲವೆ? ನಿರ್ಮಲಕ್ಕಾ, ನಿನ್ನ ಮಾತು ನಂಬಲಿಕ್ಕಾದೀತೇ? ಕುಮುದಿನಿಯು ಒಂದು ವೇಳೆ ಅಂಥ ಹಗಣದವಳಾದರೂ, ಆತನನ್ನು ಹಾಗೆಂದು ಹೇಗೆ ತಿಳಿಯಬೇಕು?"

"ತಂಗೀ, ನಿನ್ನಂತಹಳಿಗೆ ಅವನ್ನೆಲ್ಲ ಹೇಗೆ ತಿಳಿಸುವುದು? ತಂಗೀ, ಗಂಡಸರ ಬುದ್ಧಿಯು ಯಾವ ಕಾಲಕ್ಕೆ ಹೇಗೆ ಆದೀತೆಂಬದಕ್ಕೆ ನಿಯಮವಿಲ್ಲ. ಅದರಲ್ಲಿಯೂ ತರುಣ ಸ್ತ್ರೀಯರ ಸಂಬಂಧದಲ್ಲಿ ಅವರ ಮನಸ್ಸು ಅತ್ಯಂತ ಚಂಚಲವಾಗುತ್ತದೆಂಬದಕ್ಕೆ ಶಂತನುರಾಜನ ಉದಾಹರಣೆಯು ಸಾಕಾಗಲಿಕ್ಕಿಲ್ಲವೆ? ಆ ವೃದ್ಧನು ಅಂಬಿಗರ ತರುಣ ಹುಡುಗಿಯನ್ನು ಏಕಾಂತದಲ್ಲಿ ದೃಷ್ಟಿಸಿದೊಡನೆಯೇ ಆತನ ಗತಿಯೇನಾಯಿತೆಂಬದು ಲೋಕವಿಖ್ಯಾತವಾಗಿಲ್ಲವೆ? ಅಂದ ಬಳಿಕ ಈ ಪ್ರಭಾಕರನ ಗತಿಯೇನು? ಆತನೇ ಆಕೆಯ ಆ ಆಭರಣಗಳನ್ನು ನಿನ್ನ ಗಂಡನ ಮುಖಾಂತರ ನಿನ್ನ ಬಳಿಯಿಂದ ಎತ್ತಿ ಹಾಕಿದವನು; ಹಾಗು ಆತನೇ ಅವುಗಳನ್ನು ಕುಮುದಿನಿಯ ಗಂಡನ ಮನೆಗೊಯ್ದು ಕೊಟ್ಟು ಕುಮುದಿನಿಯ ಮೆಚ್ಚುಗೆಗೆ ಪಾತ್ರವಾದವನು. ಅವರೀರ್ವರಲ್ಲಿ ಆ ಬಗೆಯ ಹುಚ್ಚುಚಕ್ಕಾಟದ ಸಂಬಂಧವಿರದಿದ್ದರೆ ಅವನಿಗೇಕೆ ಆ ಹಾಳು ಉಸಾಬರಿಯು ಬೇಕಾಗಿತ್ತು? ನಾನಂತೂ ನಿನಗೆ ಯೋಗ್ಯಕಾಲಕ್ಕೆ ಸೂಚಿಸಿರುತ್ತೇನೆ. ಇನ್ನು ನೀನು ನಿನ್ನ ಮನಸ್ಸಿಗೆ ಬಂದಂತೆ ಮಾಡು." ಎಂದು ಹೇಳಿದವಳೇ, ನಿರ್ಮಲೆಯು ಅಲ್ಲಿಂದ ಹೊರಡಲನುವಾದಳು.

ಆ ಆಭರಣಗಳ ಹೆಸರು ಹೊರಟ ಕೂಡಲೆ ಸರಸಿಯ ಹೃದಯದೊಳಗಿನ ಕುಮುದಿನಿಯ ವಿಷಯದ ದ್ವೇಷ-ತಿರಸ್ಕಾರಗಳು ಪ್ರಜ್ವಲಿಸಿದವು. ಅದರಿಂದ ಅವಳು ಮತ್ತೆ ಕುಮುದಿನಿಯನ್ನು ಬಾಯಿಗೆ ಬಂದಂತೆ ಬೈಯುತ್ತ ನಿರ್ಮಲೆಯನ್ನು ಕುರಿತು:—"ನಾನು ಈಗ ಏನು ಮಾಡಿದರೆ ಆ ಮುಂಡೆಯ ಸತ್ಯಾನಾಶವಾದೀತು?" ಎಂದು ಕೇಳಲು,

ನಿರ್ಮಲೆಯು ಒಳ್ಳೇ ಒಯ್ಯಾರದಿಂದ:—"ತಂಗೀ, ಸರಸಕ್ಕಾ, ನನಗೇಕವ್ವಾ, ನಿಮ್ಮ ಮನೆಯ ಈ ಜಗಳ-ತಂಟೆಗಳು? ನಾನು ನನ್ನ ಸಂಸಾರದ ವ್ಯಾಪವನ್ನೆಲ್ಲ ತೊರೆದು ಕಮಲಾಕಾಂತ ಸಾಧುಗಳ ಸಹವಾಸದಲ್ಲಿ ಹಾಯ್ ಎಂದಿರುತ್ತಿರಲು, ನನಗೀ ಒಣ ಉಸಾಬರಿಯಿಂದೇನಾಗಬೇಕಾಗಿದೆ? ಆದರೆ ಪ್ರಸಂಗವಿಶೇಷದಲ್ಲಿ ಜನ

ರಿಗೆ ತಕ್ಕ ಸಲಹೆ ಕೊಡುತ್ತಿರಬೇಕೆಂದು ನಮ್ಮ ಸಾಧುಗಳು ಆಗಾಗ್ಗೆ ಬೋಧಿಸುತ್ತಿರುವದರಿಂದ ಈಗ ನನಗೆ ತೋಚುವ ಹಂಚಿಕೆಯನ್ನು ನಿನಗೆ ಹೇಳುವೆನು. ಬೇಕಾದರೆ ಅದರಂತೆ ನಡೆ, ಬೇಡವಾದರೆ ಬಿಡು." ಎಂದು ಅಂದು, ನಿರ್ಮಲೆಯು ಸರಸಿಯ ಕಿವಿಯಲ್ಲಿ ಏನೇನೋ ಗುಜುಗುಜು ಎಂದು ಬಹಳ ಹೊತ್ತಿನ ವರೆಗೆ ಹೇಳಿಕೊಟ್ಟು ಅಲ್ಲಿಂದ ಹೊರಟು ಹೋದಳು.

ಅಂದೇ ಸಂಜೆಗೆ ಸರಸಿಯು ಗುಂಡನೆಂಬ ಹೆಸರಿನ ಆ ನಿರ್ಮಲೆಯ ಹಸ್ತಕನ ಕಡೆಯಿಂದ ಕುಮುದಿನಿಯ ಭಾವನಿಗೊಂದು ಪತ್ರ ಬರೆಯಿಸಿದಳು. ಅದರಲ್ಲಿ 'ಕುಮುದಿನಿಗೂ ಪ್ರಭಾಕರನಿಗೂ ಅನೀತಿಪರ ಸಂಬಂಧವಿರುವದರಿಂದ ಕುಮುದಿನಿಯ ಸೂಚನೆಯ ಮೇರೆಗೆ ಆತನು ಇಷ್ಟರಲ್ಲೇ ಅವಳನ್ನು ಕರೆಯಲಿಕ್ಕೆಂದು ನಿಮ್ಮಲ್ಲಿಗೆ ಬರುವನು. ನೀವು ಆಕೆಯನ್ನು ಅವನೊಡನೆ ಸರ್ವಥಾ ಕಳಿಸಕೂಡದು. ಅದರಿಂದ ನಿಮ್ಮ ಮನೆತನದ ಹಾಗು ನನ್ನ ಮರ್ಯಾದೆಯುಳಿಸಿದಂತಾದೀತು. ಒಂದು ವೇಳೆ ನೀವು ನನ್ನ ಅಭಿಪ್ರಾಯದಂತೆ ನಡೆಯದಿದ್ದರೆ ಅದರ ಫಲವನ್ನು ನೀವು ಬೇಗನೆ ಉಣ್ಣಬೇಕಾಗುವದು. ಇದಕ್ಕೂ ಹೆಚ್ಚಿಗೆ ನಾನೇನು ಹೇಳಲಿ?" ಎಂದು ಅವಳು ತಿಳಿಸಿದ್ದಳು. ಆ ಪತ್ರವು ಪ್ರಭಾಕರನು ವಲ್ಲಭರಾಯನ ಮನೆಯಲ್ಲಿದ್ದಾಗಲೇ ಅವರಿಗೆ ತಲುಪಬೇಕೆಂಬ ಉದ್ದೇಶದಿಂದ ಅದನ್ನು ಅವಸರದಿಂದ ಬರೆಯಿಸಿ, ಅಂದಿನ ರಾತ್ರಿಯ ಮೇಲಿನಲ್ಲಿ ಹಾಕಿಸಿದ್ದಳು. ಆ ಪ್ರಕಾರ ಆ ಪತ್ರವು ಮರುದಿನ ಬೆಳಗಾಗುವಷ್ಟರಲ್ಲಿ ಬಳ್ಳಾರಿಗೂ ಹೋಗಿ ತಲುಪಿತು; ಆದರೆ ಪತ್ರದ ಮೇಲ್ವಿಳಾಸವು ಅಪೂರ್ಣವಿದ್ದುದರಿಂದ ಅದು ಆ ಕೂಡಲೆ ಅವರ ಮನೆಗೆ ತಲುಪದೆ, ಮೂರನೆಯ ದಿನ ಬೆಳಿಗ್ಗೆ ತಲುಪಿತು.

ಗುಂಡನೂ ವಲ್ಲಭರಾಯನ ಮನೆಯೆದುರಿಗಿನ ಉಪ್ಪರಿಗೆಯ ಮೇಲಿರುತ್ತಿದ್ದ ವಾರವನಿತೆಯಾದ ಚಂದ್ರಿಯೂ ನಿರ್ಮಲೆಯ ಹಸ್ತಕವರ್ಗದವರು. ನಿರ್ಮಲೆಯ ಮನಸ್ಸಿನಲ್ಲಿ ಕುಮುದಿನಿಯನ್ನೂ ಸರಸಿಯನ್ನೂ ತಮ್ಮ ಕಮಲಾಕಾಂತ ಸಾಧುವಿನ ಬಲೆಯಲ್ಲಿ ತೊಡಕಿಸಿಕೊಳ್ಳಬೇಕೆಂದಿತ್ತು. ವಲ್ಲಭರಾಯನ ಹೆಂಡತಿಯನ್ನೂ ವಲ್ಲಭರಾಯನನ್ನೂ ಬಹುಮಟ್ಟಿಗೆ ಅವಳು ಕಮಲಾಕಾಂತ ಸಾಧುವಿನ ಜಾಲದಲ್ಲಿ ತೊಡಕಿಸಿಕೊಂಡಿದ್ದಳು. ನರ್ಮದೆಯು ಅಶಿಕ್ಷಿತಳು. ಅವಳಿಗೆ ಏನಾದರೊಂದು ಆಡಂಬರದ ಮಾತು ಹೇಳಿದರೆ ಅವಳು ಸಹಜವಾಗಿ ನಿರ್ಮಲೆಯ ಬಲೆಯಲ್ಲಿ ಸಿಗತಕ್ಕವಳು; ಆದರೆ ಕುಮುದಿನಿಯು ಮಾತು ಹಾಗಿರಲಿಲ್ಲ. ಇವಳು ಕಲಿತವಳು. ಕಮಲಾಕಾಂತ ಸಾಧು-ನಿರ್ಮಲಾ ಶರಣಮ್ಮರಂತಹ ಜನರ ಇಂಗಿತವನ್ನು ಅವಳು ದೂರಿನಿಂದಲೇ ಕಂಡು ಹಿಡಿಯತಕ್ಕಂತಹ ಬುದ್ಧಿಶಾಲಿನಿಯು. ಅದರಿಂದ ಅವಳನ್ನು ತಮ್ಮ ಬಲೆಯಲ್ಲಿ ಹಿಡಿಯುವದು ನಿರ್ಮಲೆಗೆ ಕಠಿಣವಾಗಿತ್ತು. ಅಂತೆಯೇ ಅವಳು ಕುಮುದಿನಿಯ ವರ್ತನದ ಬಗ್ಗೆ ಪೊಟ್ಟ ಮೊದಲು ನರ್ಮದೆಯಲ್ಲಿ ಸಂಶಯ-ತಿರಸ್ಕಾರಗಳುಂಟಾಗುವಂತೆ ನರ್ಮದೆಗೆ ಕಿವಿಮಾತು ಹೇಳಿದಳು. ಅದರಿಂದ ತನ್ನ

ತನೇ ಹೆಂಡತಿಯ ಉಪಟಳದಿಂದ ಕುಮುದಿನಿಯ ಆಭರಣಗಳು ಆಯತ ಕಾಲಕ್ಕೆ ಮಾಯವಾಗಲು, ಭವಾನರಾಯನು ಅವುಗಳನ್ನು ಹಿಂದಿನಿಂದ ಕಳಿಸುತ್ತೇನೆಂದು ವಲ್ಲಭರಾಯನಿಗೆ ಹೇಳಿ ಕಳಿಸಿರಲು, ಆ ಬಗ್ಗೆ ನಿರ್ಮಲೆಯು:—"ನಿನ್ನ ನೆಘೆಣ್ಣಿಯು ತನ್ನ ಆಭರಣಗಳನ್ನೆಲ್ಲ ತಮ್ಮೂರ ತನ್ನ ಪ್ರಿಯಕರನಿಗೆ ಕೊಟ್ಟುಬಿಟ್ಟಿರುವಳು; ಇನ್ನೂ ಅವುಗಳು ಬರಲಾರವು; ಆದರೂ ನೀನು ಈ ಸಂಗತಿಯನ್ನು ನಿನ್ನ ಗಂಡನಿಗೆ ಈಗಲೆ ಹೇಳಬೇಡ" ಎಂದು ಕಿವಿ ಮಾತು ಹೇಳಿದ್ದಳು; ಆದರೆ ಆ ಒಡಕ ಬಾಯ ನರ್ಮದೆಯು ಆ ಸಂಗತಿಯನ್ನು ಕೂಡಲೆ ತನ್ನ ಗಂಡನಿಗೆ ತಿಳಿಸಿ ಕುಮುದಿನಿಯ ವಿಷಯವಾಗಿ ಆತನಲ್ಲಿ ತಿರಸ್ಕಾರಭಾವವುಂಟಾಗುವಂತೆ ಮಾಡಲೆತ್ನಿಸಿದ್ದಳು. ಇಷ್ಟರಲ್ಲಿ ಪ್ರಭಾಕರನು ಕುಮುದಿನಿಯ ಎಲ್ಲ ಆಭರಣಗಳನ್ನು ತಂದುಕೊಟ್ಟದ್ದನ್ನು ನೋಡಿ ತನ್ನ ಹೆಂಡತಿಯು ತನಗೇನಾದರೂ ಸುಳ್ಳು ಹೇಳಿರುವಳೆಂದು ಆತನು ಭಾವಿಸಿ ಕೊಂಡನು. ನರ್ಮದೆಗೂ ಆಭರಣಗಳ ಆಗಮನದಿಂದ ಮುಖಭಂಗಿತವಾಯಿತು. ಅದ ರಿಂದ ಅವಳು ನಿರ್ಮಲೆಯನ್ನು ಆ ವಿಷಯವಾಗಿ ಕೇಳಲು: 'ಇಂದು ಆ ಆಭರಣ ತಂದು ಕೊಟ್ಟವನಿಗೂ ನಿನ್ನ ನೆಘೆಣ್ಣಿಗೂ ಅನೀತಿಕರ ಸಂಬಂಧವಿದೆಯೆಂದು ಕುಮುದಿನಿಯ ತಾಯಿಯಾದ ಸರಸಕ್ಕನೇ ತನಗೆ ತಿಳಿಸಿರುತ್ತಾಳೆ. ಇದರ ಅನುಭವವನ್ನು ನೀನಿನ್ನು ಕೆಲದಿನಗಳಲ್ಲಿಯೇ ಪಡೆಯುವೆ' ಎಂದು ನಿರ್ಮಲೆಯು ನರ್ಮದೆಗೆ ಮತ್ತೆ ಕಿವಿಮಾತು ಹೇಳಿ ಸುಮ್ಮನಿರಿಸಿದಳು.

ನಿರ್ಮಲೆಯು ಕುಮುದಿನಿ-ಸರಸಿಯರನ್ನು ತನ್ನ ಜಾಲದಲ್ಲಿ ತೊಡಗಿಸಿಕೊಳ್ಳು ವದಕ್ಕೆಂದು ದೀರ್ಘವಾಗಿ ಪ್ರಯತ್ನಿಸುತ್ತಿದ್ದಳು. ಆದರಿಂದ ಅವಳು ಆಗಾಗ್ಗೆ ವಿಜಾ ಪೂರ-ಬಳ್ಳಾರಿಗಳಿಗೆ ಎಡತಾಕುತ್ತಿದ್ದಳು. ಬೇರೆ ಯಾವ ಮಾರ್ಗದಿಂದಲೂ ಸಾಧಿಸ ದಿದ್ದರೆ ಕಡೆಗೆ ತನ್ನ ಹಸ್ತಕನಾದ ಗುಂಡನ ಕಡೆಯಿಂದ ಕುಮುದಿನಿಯನ್ನು ಎಳೆ ದೊಯ್ಯಿಸಿ, ಅವಳನ್ನು ಕೆಲ ದಿನ ಚಂದ್ರಿಯ ನೆರವಿನಲ್ಲಿಟ್ಟು, ಆ ದೃಶ್ಯವು ಸಹಜ ವಾಗಿ ವಲ್ಲಭರಾಯ, ಶಂಕರರಾಯರ ಕಣ್ಣಿಗೆ ಬೀಳುವ ಹಾಗೆ ಮಾಡಿ ಅವರು ಕುಮುದಿನಿಯನ್ನು ತಮ್ಮ ಮನೆಯಲ್ಲಿ ಬರಗೊಡದಂತೆ ಮಾಡಿದರೆ, ಬಳಿಕ ಕುಮುದಿ ನಿಯು ನಿರ್ಗತಿಕಳಾಗಿ ತಮ್ಮ ಕಮಲಾಕಾಂತ ಸಾಧುವಿನ ಆಶ್ರಮದಲ್ಲಿಯೇ ಕಡೆತನಕ ಉಳಿಯುವಳೆಂದು ಆ ಪಾತಾಳ ಯಂತ್ರಗಾರ್ತಿಯುಯೋಚಿಸಿದ್ದಳು.

ಭವಾನರಾಯನ ಮರಣದ ನಂತರ ಸರಸಿಯು ನಿರಾಶ್ರಿತಳಾಗಿದ್ದಳು. ಸರ ಸಿಯ ತವರುಮನೆಯವರೆಲ್ಲರು ಈ ಮೊದಲೇ ಗತಿಸಿಹೋಗಿದ್ದರು. ಭವಾನರಾಯ- ಕುಮುದಿನಿಯರ ಹೊರತು ಗಂಡನ ಮನೆಯವರಾರೂ ಇರಲಿಲ್ಲ. ಅದರಿಂದ ಸರಸಿ ಯನ್ನು ಇನ್ನು ತಮ್ಮ ಜಾಲದಲ್ಲಿ ಕೆಡಹಲಿಕ್ಕೆ ಹೆಚ್ಚು ಪರಿಶ್ರಮ ಪಡಬೇಕಾಗ ದಿದ್ದರೂ ಸಮಯ ಸಾಫಲ್ಯಗೊಳಿಸಿಕೊಳ್ಳಬೇಕಾದರೆ ಈಗ ಅವಳ ಮೇಲೆ ತನ್ನ ದೃಷ್ಟಿಯನ್ನು ಸಂಪೂರ್ಣವಾಗಿರಿಸಿ ತನ್ನ ಹಸ್ತಕನಾದ ಗುಂಡನ ಮುಖಾಂತರ ಅವಳನ್ನು ಶೀಲಭ್ರಷ್ಟಗೊಳಿಸಿ, ಬಳಿಕ ನಿರ್ಗತಿಕಳಾಗುವ ಅವಳನ್ನು ತಮ್ಮ ಕಮಲಾ

ಕಾಂತ ಸಾಧುವಿನೆಡೆಗೊಯ್ಯಬೇಕೆಂದು ನಿರ್ಮಲೆಯು ಯೋಚಿಸಿದ್ದಳು; ಮತ್ತು ಅದ ಕ್ಕಾಗಿಯೇ ಗುಂಡನ ವಿಷಯವಾಗಿ ಇಲ್ಲದ್ದೊಂದು ಹೇಳಿ, ಅವನನ್ನು ಸರಸಿಯ ಹತ್ತರ ಇರಿಸಿದ್ದಳು.

ಗುಂಡ-ಚಂದ್ರಿಯರು ಜಾತಿವಂತ ಬದ್‌ಮಾಷ ಜನರು. ಅವರಲ್ಲಿ ನೀತಿ-ರೀತಿಗಳೆಲ್ಲಿರಬೇಕು? ಅವರು ನಿರ್ಮಲೆ-ಕಮಲಾಕಾಂತರ ಹಸ್ತಕರಾಗಿದ್ದುದು ಕೇವಲ ದುಡ್ಡಿನ ಲೋಭದಿಂದ. ಇಂಥ ಹೊಸ ಹೊಸ ಹೆಣ್ಣುಮಕ್ಕಳನ್ನು ಬಗೆ-ಬಗೆಯಿಂದ ತಂದು ಕಮಲಾಕಾಂತ ಸಾಧುವಿನ ಪಾವಣಿಯಲ್ಲಿ ಸೇರಿಸಿದರೆ, ಸಾಧುಗಳು ಸಂತುಷ್ಟರಾಗಿ ಅವರಿಗೆ ಸಾಕಷ್ಟು ಹಣವನ್ನು ಪೂರಯಿಸುತ್ತಿದ್ದರು.

ಕಮಲಾಕಾಂತಸಾಧುವೆಂದರೆ ಯಾರು? ನಿರ್ಮಲೆಯು ಆತನ ಪ್ರಿಯಶಿಷ್ಯಳಾದ ಬಗೆ ಹೇಗೆ? ಅವರೀರ್ವರೂ ಧನಸಂಪನ್ನ ಜನರನ್ನೂ ಧನಿಕರ ಹಾಗು ಬೇರೆಯವರ ಮನೆಯ ರೂಪಸಂಪನ್ನ ತರುಣ ಹೆಂಗಳೆಯರನ್ನೂ ತಮ್ಮ ಶಿಷ್ಯವರ್ಗದಲ್ಲಿ ಸೇರಿಸಿಕೊಳ್ಳಲಿಕ್ಕೆ ಅಷ್ಟೊಂದು ಆತುರಪಡುವ ಉದ್ದೇಶವೇನು? ಕಮಲಾಕಾಂತ ಸಾಧುವಿನ ಅಡ್ಡೆಯೆಂದರೇನು? ಮುಂತಾದ ಸಂಗತಿಗಳನ್ನೋದಿ ನಮ್ಮ ವಾಚಕರು ಗೊಂದಲದಲ್ಲಿ ಬೀಳುವರೆಂಬದೂ, ಅಂತಹ ಹಲವು ಜನರು ಕೂಡಲೆ ಆ ಬಗ್ಗೆ ಪತ್ರ ಮೂಲಕ ಕೇಳುವರೆಂಬದೂ ನಮಗೆ ಗೊತ್ತಿದೆ; ಆದರೂ ನಾವು ಅದನ್ನೆಲ್ಲ ಇಲ್ಲಿಯೇ ತಿಳಿಸಲಶಕ್ಯವು. ಈ ಕಾದಂಬರಿಯನ್ನು ಕ್ರಮಶಃ ಓದುವುದರಿಂದ ಅವುಗಳ ವಿವರಣವು ಸಹಜವಾಗಿಯೇ ತಿಳಿಯಲಿರುವದು; ಆದರೆ ಈ ಪ್ರಸಂಗದಲ್ಲಿ ನಾವು ನಮ್ಮ ಪ್ರಿಯವಾಚಕರಿಗೆ ತಿಳಿಸಿಡುವದೇನಂದರೆ, ಈ ಎಲ್ಲ ವಿವರಣವು ಯಾವುದೊಂದು ವಿವಕ್ಷಿತ ಮನುಷ್ಯರ ಗುಂಪಿಗೆ ಸಂಬಂಧವಾಗಿರುವುದಿಲ್ಲ. ಸಮಾಜದಲ್ಲಿ ಹೆಚ್ಚಿರುವ ಬಿಡಾಡಿ ಸಾಧು-ಶರಣಮ್ಮಗಳ ಹಾಗು ಅವರ ಲೀಲೆ-ಉಪಟಳ ಇವುಗಳಿಂದ ಸಮಾಜಕ್ಕೆ, ಅದರಲ್ಲಿಯೂ ಸ್ತ್ರೀವರ್ಗಕ್ಕೆ ಎಷ್ಟು ಹಾನಿ-ಅವಮಾನಗಳುಂಟಾಗುತ್ತಿರುತ್ತವೆಂಬದನ್ನೂ ಉದಾಹರಣೆ ರೂಪದಿಂದ ತಿಳಿಸತಕ್ಕ ಇದೊಂದು ಪ್ರಚಲಿತ ಸ್ಥಿತಿಯ ನಿರೀಕ್ಷಣಪರವಾಗಿ ಬರೆದ ಕಾದಂಬರಿಯೆಂಬ ಕಿವಿ ಮಾತನ್ನು ತಿಳಿಸಿರುತ್ತೇವೆ.

---

## ವನಿತಾ ಭಾಂಡಾರ.

ಕುಮುದಿನಿಯು ಪ್ರಭಾಕರನೊಡನೆ ತವರೂರಿಗೆ ಹೊರಟು ಹೋದ ೫ನೇ ದಿನ ನರ್ಮದೆಯು ಬೆಳಗ್ಗೆ ಹತ್ತು ಗಂಟೆಗೆ ಊಟ ಮಾಡಿ ಅಟ್ಟದ ಮೇಲಿನ ತನ್ನ ಕೋಣೆಯಲ್ಲಿ ಕುಳಿತು ನಿರ್ಮಲೆಯ ಮಾರ್ಗಪ್ರತೀಕ್ಷೆ ಮಾಡತೊಡಗಿದಳು. ನಿರ್ಮಲೆಯು ಮಹಾ ತಂತ್ರಗಾರಳು. ಅದರಿಂದ ಅವಳು ನರ್ಮದೆಯನ್ನು ತನ್ನ ಜಾಲದಲ್ಲಿ ತೊಡಕಿಸಿಕೊಂಡಿದ್ದರೂ ಅವಳಿಗೆ ತನ್ನ ಮರ್ಮವು ತಿಳಿಯದ ಹಾಗೆ ವರ್ತಿಸುತ್ತಿದ್ದಳು. ನರ್ಮದೆಯು ಭೋಳೇ ಸ್ವಭಾವದವಳು; ಆದರೂ ಬಹು ಚಂಚಲಳು. ಅದರಿಂದ ಯಾವುದೊಂದು ಸಂಗತಿಯು ತನ್ನ ಮನಸ್ಸಿನಂತೆ ಆಗದಾಗಲು, ಅವಳ ಮನಸ್ಸು ನಾನಾ ಬಗೆಯ ಶಂಕೆಗಳಿಗೀಡಾಗುತ್ತಿತ್ತು. ಅದರಂತೆಯೆ ಇಂದು ನಿರ್ಮಲಮ್ಮನು ಹೇಳಿದ ವೇಳೆಗೆ ಬಾರದ್ದರಿಂದ ನರ್ಮದೆಯು ಆಕೆಯ ವಿಷಯವಾಗಿ ತನ್ನ ಮನಸ್ಸಿನಲ್ಲಿ ಬಗೆಬಗೆಯ ಅನುಮಾನಗಳನ್ನು ಕಟ್ಟತೊಡಗಿದ್ದಳು. ನರ್ಮದೆಯ ಮನಸ್ಸಿನ ಈ ಸ್ಥಿತಿಯ ನೆಲೆಯನ್ನು ಚನ್ನಾಗಿ ಅರಿತಿದ್ದ ನಿರ್ಮಲೆಯು ಕುಮುದಿನಿಯ ವಸ್ತ್ರ-ಒಡವೆಗಳ ಸಂಗತಿಯನ್ನಷ್ಟೇ ಆಕೆಯ ಮುಂದೆ ಹೇಳಿದ್ದಳಲ್ಲದೆ, ಇನ್ನುಳಿದ ಆಕೆಯ ವಿಷಯದ ಕಾರಸ್ಥಾನವನ್ನು ಆ ಒಡಕ ಬಾಯ, ಸಂಶಯ ಸ್ವಭಾವದ ನರ್ಮದೆಯ ಮುಂದೆ ಹೇಳಿರಲಿಲ್ಲ ಆಕೆಯು ಹಾಗೆ ಹೇಳದಿರಲಿಕ್ಕೆ ಮತ್ತೂ ಒಂದು ಸಬಲವಾದ ಕಾರಣವಿದ್ದಿತು ಅದೇನೆಂದರೆ, ಮುಂದೆ ಮತ್ತೆ ಯಾವಾಗಾದರೂ ನರ್ಮದೆಯಂತೆ ಕುಮುದಿನಿಯನ್ನೂ ತನ್ನ ಲೋಕಸಂಗ್ರಹ ಕಾರ್ಯದಲ್ಲಿ ಉಪಯೋಗಿಸಿಕೊಳ್ಳಬೇಕಾದೀತೆಂಬದನ್ನು ಅವಳು ತರ್ಕಿಸಿದ್ದಳು; ಮತ್ತು ಆಗ ಕುಮುದಿನಿಯು ಗ್ರಹಿಕೆಯು ತನ್ನ ಬಗ್ಗೆ ವಿಪರೀತವಾಗಿರದೆ, ಅನುಕೂಲವಾಗಿರಬೇಕೆಂಬ ದೂರದರ್ಶಿತ್ವದ ಧೋರಣದಿಂದಲೆ ನಿರ್ಮಲೆಯು ಆ ಆಭರಣದ ಸಂಗತಿಯನ್ನು ತಾನು ಹೇಳಿರುವೆನೆಂದು ಯಾರ ಮುಂದೂ ಒಡನುಡಿಯಕೂಡದೆಂದು ನರ್ಮದೆಗೆ ನಿಕ್ಷುಣ್ಣವಾಗಿ ತಿಳಿಸಿದ್ದಳು. ನರ್ಮದೆಯು ಸಂಶಯದ ಸ್ವಭಾವದವಳಾಗಿದ್ದರೂ ಒಳಗಂಟಿನವಳಾಗಿರಲಿಲ್ಲ. ಅದರಿಂದ ಸಹಜವಾಗಿಯೇ ಮೋಸ ಹೋಗುವವಳಾಗಿದ್ದಳು. ಅದಕ್ಕಾಗಿಯೆ ನಿರ್ಮಲೆಯು ಒಂದೇ ಕಿವಿಮಾತಿನಿಂದ ಅವಳ ಮೇಲೆ ತನ್ನ ವರ್ಚಸ್ಸವನ್ನು ಸ್ಥಾಪಿಸಿಬಿಟ್ಟಿದ್ದಳು ನಿರ್ಮಲೆಯು ಯಾವಾಗ ಬರುವಳೋ, ತಾನು ಅವಳೊಡನೆ ಹೋಗಿ ಕಮಲಾಕಾಂತ ಸಾಧುಗಳ ಚರಣಗಳನ್ನಾವಾಗ ಸೇರುವೆನೋ? ಹಾಗು ಅವರಿಂದ ಪುತ್ರರತ್ನವನ್ನು ಎಂದಿಗೆ ಪಡೆಯುವೆನೋ ಎಂಬಂತೆ ನರ್ಮದೆಗಾಗಿತ್ತು; ಆದರೆ ಆ ಭೋಳೇಭಾವಿಕಳಿಗೆ ಹೀಗೆ ಬುವಾ-ಸಾಧುಗಳ ಅಂಗಾರ-ಅಕ್ಷತೆಗಳಿಂದಾಗಲಿ, ಹನುಮಪ್ಪ-ಭರಮಪ್ಪ ದೇವರುಗಳ ಮೇಲೆ ಮಣವೆರಡು ಮಣ ಎಣ್ಣೆ-ತುಪ್ಪಗಳನ್ನು ಸುರುವುವದರಿಂದಾಗಲಿ ಮಕ್ಕಳು-ಮರಿಗಳನ್ನು ಸಂಪಾ

ದಿಸಬೇಕಾಗಿದ್ದರೆ, ಮಕ್ಕಳುಗಳ ಹೆಚ್ಚುವಿಕೆಗಾಗಿ ಪ್ರತಿ ವರ್ಷ ವರ್ಷದೊಳಗಿನ ಮುನ್ನೂರಾ ಅರವತ್ತೈದು ಸುಮುಹೂರ್ತಗಳೂ ಅವರ ಲಗ್ನ-ವಿವಾಹಗಳಿಗೆ ಸಾಲು ತ್ತಿರಲಿಲ್ಲ; ಹಾಗು ವರದಕ್ಷಿಣೆಯು ಉಪಟಳದಿಂದ ವಧುಗಳ ತಂದೆ-ತಾಯಿಗಳ ತಲೆಯ ಮೇಲಿನ ಕೂದಲುಗಳೊಂದೂ ಉಳಿಯುತ್ತಿರಲಿಲ್ಲವೆಂಬುದೇನು ಗೊತ್ತು? ಸಾಧು ಗಳ ಮುಂದೆ ಸೆರಗನ್ನೊಡ್ಡುತ್ತಲೆ ಅವರು ತಮ್ಮ ಜೋಳಿಗೆಯೊಳಗಿಂದ ಅಪೇಕ್ಷಿತ ಮಗುವನ್ನು ಅದರಲ್ಲಿ ಹಾಕಿಬಿಡುವರೆಂದು ಪಾಪ! ಆ ನರ್ಮದೆಯು ಕಲ್ಪನೆಯಾಗಿ ತ್ತಾದ್ದರಿಂದ, ಅವಳು ಕಮಲಾಕಾಂತ ಸಾಧುವಿನೆಡೆಗೆ ಹೋಗಲಿಕ್ಕೆ ಒಳ್ಳೇ ಆತುರ ಗೊಂಡಿದ್ದಳು. ನಿನ್ನೆ ರಾತ್ರಿಯಿಂದ ಅವಳ ತಲೆಯಲ್ಲಿ ಇದೊಂದೇ ಯೋಚನೆಯು ಗರಗರನೆ ತಿರುಗುತ್ತಿತ್ತು. ಆದರಿಂದ ಬೇರೆ ವಿಚಾರಗಳ ಕಡೆಗೆ ಲಕ್ಷ್ಯವಿರಿಸುವ ಭಾನವೇ ಅವಳಿಗುಳಿದಿರಲಿಲ್ಲ. ಅತ್ತಿತ್ತ ತುಸ ಸಪ್ಪಳವಾದ ಕೂಡಲೆ ನಿರ್ಮಲ ಮ್ಮನು ಬಂದಳೋ ಏನೋ, ಎಂದು ಅವಳು ಮತ್ತೆ ಮತ್ತೆ ಇಣಿಕಿ ನೋಡುತ್ತಿದ್ದಳು. ಆಕೆಯು ಕಾಣದಾಗಲು, "ಈ ನಿರ್ಮಲಮ್ಮನು ನನಗೆ ಸುಮ್ಮನೆ ಆಶೆದೋರಿದಳು" ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡು, ಉರಿವೋರೆಯಿಂದ ಹಣೆಗೆ ಕೈಬಡ ಕೊಳ್ಳುವಳು. ಈ ಮೇರೆಗೆ ನರ್ಮದೆಯ ತಾಲೀಮು ನಡೆದಿರಲು, ಅವಳ ತವರು ಮನೆಯ ಕುಲದೇವತೆಗೋ ಭೂತ-ವೇತಾಳಗಳಿಗೋ ಒಮ್ಮೆ ಅವಳ ಬಗ್ಗೆ ಕರುಣೆ ಯುಂಟಾದಂತಾಗಿ ನರ್ಮದೆಗೆ ಸಂತತಿಯನ್ನು ಪ್ರಾಪ್ತಮಾಡಿಕೊಡುವ ನಿರ್ಮಲಾ ಶರಣಮ್ಮನವರ ಸವಾರಿಯೊಮ್ಮೆ ಅಲ್ಲಿಗೆ ಪ್ರಾಪ್ತವಾಯಿತು ಆಕೆಯನ್ನು ದೃಷ್ಟಿಸಿ ದೊಡನೆಯೇ ನರ್ಮದೆಗೆ ಇಮ್ಮಡಿ ಬಲವುಂಟಾದಂತಾಯಿತು ಆಗ ಅವಳು ಮೋರೆಯನ್ನು ತಿರುಗಿಸುತ್ತ:—"ನಿರ್ಮಲಕ್ಕಾ, ನೀವಿನ್ನು ಬರುವದೇ ಇಲ್ಲೆಂದೂ ನನ್ನ ದುರ್ದಿನಗಳಿನ್ನೂ ತೀರಿಲ್ಲವೆಂದೂ ನಾನು ತಿಳಕೊಂಡಿದ್ದೆನು" ಎಂದು ಅಂದಳು.

"ನರ್ಮದಕ್ಕಾ, ನಿಮಗೆ ಖೊಟ್ಟಿ ಆಶೆದೋರಿ ನಿಮ್ಮ ಬಾಯಿಗೆ ನೀರೊಡೆಸು ವದರಿಂದ ನನಗೇನು ಪ್ರಯೋಜನವಮ್ಮಾ? ನಾನೇನು ಅಂಥ ಹೊಯ್ಮಾಲಿ ಹೆಂಗುಸೇ? ನೀವೇ ಹೇಳಿರಿ ನೋಡೋಣ ಸುಳ್ಳು ಎಂದರೆ ನನ್ನ ಮೈಗೆ ಮುಳ್ಳು ಬಡಿದಂತಾ ಗುತ್ತದೆ ಯಾರಾದರೂ ನನ್ನ ರುಂಡವನ್ನು ಹಾರಿಸಿದರೂ ಅಡ್ಡಿಯಿಲ್ಲ; ಆದರೆ ನನ ಬಾಯಿಂದ ಒಂದು ಕ್ಷುಲ್ಲಕವಾದ ಖೊಟ್ಟಿ ಶಬ್ದ ಸಹ ಹೊರಡಲಿಕ್ಕಿಲ್ಲ"

"ಏನಿರಿ, ನಾನು ನಿಮ್ಮನ್ನು ಇಂದೇ ನೋಡುತ್ತಿರುವೆನೇನು?" ನರ್ಮದೆಯು ಅನ್ನುತ್ತಾಳೆ:—"ನಿರ್ಮಲಕ್ಕಾ, ನೀವು ನನ್ನನ್ನೇನು ಆ ಕುಮುದಿನಿಯೆಂದು ತಿಳಿ ದಿರುವಿರಾ? ನನಗಾದರೂ ಸುಳ್ಳು ಎಂದರೆ ಮೈ ಉರಿಯಹತ್ತುತ್ತದೆ"

"ಅಂತೆಯೇ ನನ್ನ-ನಿಮ್ಮಲ್ಲಿ ಗೆಳೆತನವುಂಟಾಗಿದೆ" ಎಂದು ನಿರ್ಮಲೆಯು ಹಲ್ಲು ಕಿರಿಯುತ್ತ ನುಡಿದಳು.

"ಅದಿರಲಿ ನೀವಿಂದು ನನ್ನನ್ನು ನಿಮ್ಮ ಆ ಸಾಧುಗಳ ಬಳಿಗೆ ಕರೆದೊಯ್ಯು ವಿರಷ್ಟೇ?" ನರ್ಮದೆಯು ಉತ್ಸುಕತೆಯಿಂದ ಪ್ರಶ್ನೆ ಮಾಡಲು,

"ಅಹುದರೀ ನರ್ಮದಕ್ಕಾ, ನಿನ್ನೆಯ ದಿವಸ ಸಾಧುಗಳ ಪ್ರಕೃತಿಯೇ ಚೆನ್ನಾಗಿರಲಿಲ್ಲ. ಅದರಿಂದ ನಿಮ್ಮ ವಿಷಯವಾಗಿ ಅವರೆಡೆಯಲ್ಲಿ ಮಾತೆತ್ತಲಿಕ್ಕೇ ಆಗಲಿಲ್ಲ."

'ಏನಂದಿರಿ?' ನರ್ಮದೆಯು ಆಶ್ಚರ್ಯದಿಂದ ಕೇಳುತ್ತ:—"ನಾನಂತೂ ಬಹು ಆಶೆಯಿಂದ ನಿಮ್ಮ ಆಗಮನವನ್ನು ನಿರೀಕ್ಷಿಸುತ್ತಿದ್ದೆನು; ಆದರೆ ನೀವು ಮಾತ್ರ...."

"ನಾನೇನು?" ನಿರ್ಮಲೆಯು ಸಿನೇಮಾದೊಳಗಿನ ನಟಿಯಂತೆ ಕೈಗಳಿಂದ ಹಾವ-ಭಾವ ತೋರಿಸುತ್ತ:—"ಈ ನಿರ್ಮಲಮ್ಮನು ಕಮಲಾಕಾಂತ ಸಾಧುಗಳ ಪಟ್ಟದ ಶರಣಮ್ಮನು. ನಾನು ಮಾಡಿದ್ದಕ್ಕೆ ನಮ್ಮ ಸಾಧುಗಳು ಅಲ್ಲೆನ್ನಲಾರರು; ಆದರೆ ನರ್ಮದಕ್ಕಾ, ನೀವು ಆ ಸಂಗತಿಯನ್ನು ನಿಮ್ಮ ಯಜಮಾನರ ಕಿವಿಯ ಮೇಲೆ ಹಾಕಿಲ್ಲವಷ್ಟೆ? ಸುಮ್ಮಸುಮ್ಮನೆ ಬೊಬ್ಬಾಟವಾಗಬಾರದೆಂದು ಕೇಳಿದೆನು."

"ಛೇ! ಛೇ! ನಿನ್ನೆಯ ದಿವಸ ಅವರೊಡನೆ ಮಾತಾಡಲಿಕ್ಕೆ ನನಗೆ ಕೂಡಲೇ ಇಲ್ಲ. ಮೇಲಾಗಿ ನಾನು ಇಂಥ ನಾಜೂಕ ಮಾತನ್ನು ಅವರಿಗೆ ಒಮ್ಮೆಲೆ ತಿಳಿಸುವೆನೇ?"

"ಅದೇಕೆ ಮಾತಾಡಲಿಲ್ಲ? ಗಂಡ-ಹೆಂಡಿರಲ್ಲಿ ಜಗಳ ಬೇರೆ ಉಂಟಾಗಿಲ್ಲವಷ್ಟೆ?" ನಿರ್ಮಲೆಯು ನರ್ಮದೆಯ ಮೋರೆಯ ಕಡೆಗೆ ನೋಡುತ್ತ ನಕ್ಕಳು

"ಛೇ! ಛೇ! ಅದೇನೂ ಇಲ್ಲ. ನಿನ್ನೆಯ ದಿವಸ ಅವರು ಕೆಲವೊಂದು ಅವಸರದ ಕೆಲಸಕ್ಕೆಂದು ಹೈದ್ರಾಬಾದಿಗೆ ಹೋಗಿರುತ್ತಾರೆ."

"ಹೀಗೆ ಏನು? ಅಂದಬಳಿಕ ಅಡ್ಡಿಯಿಲ್ಲ. ಏನಾದರೂ ನೀವು ಅಂಥವರೊಳಗಿನವರಲ್ಲ."

"ಅಂಥವರೆಂದರೆ, ಎಂಥವರು?"

"ಇತ್ತೀಚಿಗಿನ ಗಂಡ-ಹೆಂಡಿರ ಸಂಸಾರವೆಂದರೆ ಅಡಿಗಡಿಗೆ ಜಗಳ-ತಂಟೆಗಳು! ಒಂದು ದಿನವಾದರೂ ವಾದಿಸದೆ ಕಳೆಯಲಿಕ್ಕಿಲ್ಲ. ನಾವು ಹೀಗೆ ಜಗಳ-ತಂಟೆಗಳನ್ನೆಂದೂ ಮಾಡಲಿಲ್ಲವ್ವಾ! ನಮ್ಮ ಸಂಸಾರವೇನು, ಆಗಿನ ಸುಖ-ಸಮಾಧಾನಗಳೇನು? ಆ ಪೋಡಿ ದೇವರಿಂದ ನಮ್ಮ ಸಂಸಾರ ನೋಡುವದಾಗಲಿಲ್ಲರೀ. ಅಂತೆಯೇ ಆತನು ನನ್ನ ಜನ್ಮದ ಸತ್ಯಾನಾಶ ಮಾಡಿಬಿಟ್ಟಿರುವನು"

"ನಿರ್ಮಲಕ್ಕಾ, ನೀವಿನ್ನು ಹೀಗೆ ದುಃಖಿಸಬೇಡಿರಿ. ಮಾಡುವದೇನು? ವಿಧಿಲಿಖಿತವೆಂದಾದರೂ ಸುಳ್ಳಾದದ್ದುಂಟೆ? ಆದರೆ ನೀವು ಸುದೈವಿಗಳೆಂದೇ ಗುರುಚರಣದಲ್ಲಿ ಜನ್ಮದ ಸಾರ್ಥಕ್ಯ ಮಾಡಿಕೊಂಡಿರಿ."

"ಅಹುದವ್ವಾ ಅಹುದು. ಗುರುಕೃಪೆಯಿಂದ ಜನನ-ಮರಣಗಳ ನರಕ ಭೋಗದಿಂದ ಮುಕ್ತನಾದೆನು" ಎಂದಂದು, ನಿರ್ಮಲಾಶರಣಮ್ಮನು ಕಣ್ಣು ಮುಚ್ಚಿಕೊಂಡು, ಕೈಯಿಂದ ಚುಟುಕೆ ಬಾರಿಸುತ್ತ:—"ಜಯ ಕಮಲಾಕಾಂತ ಮಹಾರಾಜ, ಜಯ ಜಯ ಕಮಲಾಕಾಂತ ಮಹಾರಾಜ" ಎಂದು ಅನ್ನುತ್ತ ಭಕ್ತಿವೇಷದಿಂದ ಜಪ ಮಾಡತೊಡಗಲು, ನರ್ಮದೆಯು ನಿರ್ಮಲೆಯ ಮೋರೆಯ ಕಡೆಗೆ ಟಕಮಕ

ವೆಂದು ನೋಡುತ್ತ ತಾನೂ ಕೈಜೋಡಿಸಿ ಕಮಲಾಕಾಂತಮಹಾರಾಜರ ಜಯಘೋಷ ಮಾಡಲಾರಂಭಿಸಿದಳು. ಈ ಮೇರೆಗೆ ಮೂರು-ನಾಲ್ಕು ನಿಮಿಷಗಳ ವರೆಗೆ ಕಮಲಾಕಾಂತನ ಭಜನವಾಯಿತು. ನಂತರ ಶರಣಮ್ಮನು ಕಣ್ತೆರೆದಳು. ಆಗ ನರ್ಮದೆಯು ಒಳ್ಳೇ ಆದರ ಬುದ್ಧಿಯಿಂದ ಅವಳನ್ನುದ್ದೇಶಿಸಿ:—"ಏನಿರೀ, ನಿರ್ಮಲಮ್ಮನವರೇ, ನೀವು ನಿಜವಾಗಿಯೂ ನಿಮ್ಮ ಜನ್ಮದ ಸಾರ್ಥಕ ಮಾಡಿಕೊಂಡಿರುತ್ತೀರಿ. ನೀವು ಮೂರೇ ನಿಮಿಷಗಳ ವರೆಗೆ ಕಣ್ಣು ಮುಚ್ಚಿಕೊಂಡು ಗುರುಗಳ ಭಜನ ಮಾಡಿದರೂ ನೀವೆಷ್ಟು ತದ್ರೂಪರಾಗಿದ್ದಿರಲ್ಲ! ನಡೆಯಿರಿ, ನನಗೂ ನಿಮ್ಮ ಗುರುಗಳ ಚರಣದರ್ಶನ ಮಾಡಿಸಿರಿ."

"ಹಾಗಾದರೆ ಏಳಿರಿನ್ನು" ನಿರ್ಮಲೆಯು ಮೈಯಲ್ಲಿ ಸಂಚಾರವಾದಂತೆ ನಟಿಸುತ್ತ ನುಡಿದು:—"ನರ್ಮದಕ್ಕಾ, ನಿಮ್ಮ ಮೇಲೆ ನಮ್ಮ ಗುರುಗಳಾನುಗ್ರಹವಾಗುವದು ಖಂಡಿತವು"

"ಆದರೆ ಗುರುದರ್ಶನಕ್ಕೆ ಹೋಗುವಾಗ ಕಾಯಿ-ಕರ್ಪೂರಗಳನ್ನೊಯ್ಯ ಬೇಡವೆ?" ಎಂದು ನರ್ಮದೆಯು ಭಾವಿಕತನದಿಂದ ಕೇಳಲು,

"ರಾಮ-ರಾಮ! ಅಂಥ ಹುಚ್ಚುಚ್ಚಾರಕ್ಕೆ ಅಲ್ಲಿ ಆಸ್ಪದವಿರುವದಿಲ್ಲ. ತಿರುಗಿ ಅವರೇ ನಿಮಗೆ ಜನ್ಮಸಾರ್ಥಕ್ಯದ ಪ್ರಸಾದ ಕೊಡುವರು."

ಈ ಪ್ರಕಾರ ನುಡಿದು ನಿರ್ಮಲಾ ಶರಣಮ್ಮನು ನರ್ಮದೆಯೊಡನೆ ಕಮಲಾಕಾಂತ ಸಾಧುವಿನ ವನಿತಾ ಭಾಂಡಾರಕ್ಕೆ ಪ್ರಯಾಣ ಮಾಡಿದಳು.

ವಾಚಕರೇ, ಕಮಲಾಕಾಂತ ಸಾಧುವಿನ ಅಡ್ಡೆಯು ಆಗ............ದಲ್ಲಿಯೇ ಇದ್ದಿತು. ನಿರ್ಮಲೆಯು ನರ್ಮದೆಯೊಡನೆ ಅಲ್ಲಿಗೆ ಹೊರಟಾಗ ಮಟಮಟ ಮಧ್ಯಾಹ್ನದ ಹೊತ್ತು. ಬಿಸಿಲಿನ ತಾಪವು ಹೆಚ್ಚಾಗಿದ್ದಿತು. ಹೆಂಗಸರು ಕಾಲಲ್ಲಿ ಜೋಡು ಧರಿಸುವದು ಅಸಭ್ಯತನವೆಂಬ ಮತದವಳು ನರ್ಮದೆಯಾದ್ದರಿಂದ ಆಕೆಯ ಕಾಲುಗಳು ಅಂದಿನ ಆ ಬಿಸಿಲಿನ ತಾಪದಿಂದ ಸುಡುತ್ತಿದ್ದವು; ಆದರೆ ಆಕೆಯ ಚಿತ್ತವು ಗುರುಚರಣದಲ್ಲಿದ್ದುದರಿಂದ ಅವಳು ಆ ತಾಪದ ಕಡೆಗೆ ಲಕ್ಷ್ಯಗೊಟ್ಟಿರಲಿಲ್ಲ ನಿರ್ಮಲಮ್ಮನು ಮಾತ್ರ 'ಎಂಥ ಚುರುಕು ಬಿಸಿಲಿದು? ಅಂಗಾಲಿಗೆ ಬರೆಹಚ್ಚಿದಂತಾಗುವದಲ್ಲ!' ಹೀಗೆ ಬಡಬಡಿಸುತ್ತ ಹಾಗು ಜಿಗಿಯುತ್ತ-ಹಾರುತ್ತ ಹೆಜ್ಜೆಗಳನ್ನಿಕ್ಕುತ್ತ ಮಾರ್ಗಕ್ರಮಿಸಹತ್ತಿದಳು. ಹೀಗೆ ಆ ಶರಣಮ್ಮನು ದೇಹವನ್ನು ಕಷ್ಟಪಡಿಸುತ್ತ ನರ್ಮದಾ ಭಕ್ತಳೊಡನೆ ಗುರುಚರಣಕ್ಕೊಮ್ಮೆ ಬಂದು ಸೇರಿದಳು. ನಿರ್ಮಲೆಯು ಗುರುಗಳ ಚರಣಗಳನ್ನು ಸ್ಪರ್ಶ ಮಾಡಿ ನಮಸ್ಕರಿಸಿದಳು. ಕಮಲಾಕಾಂತ ಸಾಧುವು ಆದೇ ತಾನೆ ಖಾದ್ಯ-ಅಖಾದ್ಯ ಮಿಷ್ಟಾನ್ನಗಳನ್ನು ಭುಂಜಿಸಿ, ಆರಾಮಖುರ್ಚಿಯ ಮೇಲೆ ಅಡ್ಡಾಗಿ ಸಿಗರೇಟಿನ ಹೊಗೆ ಹೊರಡಿಸುತ್ತಿದ್ದನು. ಆ ಅಗಡಬಂಬ ಪುಂಡನು ನಾಲ್ವತ್ತು ವಯಸ್ಸಿನವನಾಗಿದ್ದನು. ಆದರೂ ಆತನು ಒಳ್ಳೇ ಹರೆಯದ ಬಾವುಗನಂತೆ ಟೊಣಪನಾಗಿ ತೋರುತ್ತಿದ್ದನು. ಆತನು ಆಗ ಒಂದು

ರೇಶ್ಮಿಯ ಗೀರು ಅಂಚಿನ ಸೂಕ್ಷ್ಮನೆಯ್ಗೆಯ ಶುಭ್ರ ಧೋತರವನ್ನುಟ್ಟಿದ್ದನು. ಮೈಯಲ್ಲಿ ರೇಶ್ಮಿಯ ನಾಜೂಕಾದ ಶರ್ಟು, ಕಣ್ಣು ಮೇಲೆ ಬಂಗಾರದ ಕಟ್ಟಿನ ಚಾಳೀಸು. ತಲೆಯ ಮೇಲೆ ಸುಂದರವಾಗಿ ಕತ್ತರಿಸಿದ ಕೇಶಕಲಾಪು (ಕ್ರಾಪು). ಕೈ ಬೆರಳುಗಳಲ್ಲಿ ವಜ್ರ-ವೈಢೂರ್ಯಗಳ ಉಂಗರಗಳು; ಹಾಗು ಆಗಾಗ್ಗೆ ಮೋರೆಯನ್ನೊರಸಿಕೊಳ್ಳಲಿಕ್ಕೆ ಬಿಳಿಯ ರೇಶ್ಮಿಯ ಕರವಸ್ತ್ರ. ಈ ಬಗೆಯ ಥಾಟನಿಂದ ಕಮಲಾಕಾಂತ ಸಾಧುವಿನ ಸವಾರಿಯು ಅಲ್ಲಿ ಕುಳಿತಿದ್ದಿತು. ಆತನ ಕಣ್ಣು ಚೆನ್ನಾಗಿದ್ದವು. ಓದು-ಬರೆಯುವದಕ್ಕೆ ಚಾಳೀಸಿನ ಆವಶ್ಯಕತೆಯಿರಲಿಲ್ಲ. ಹೀಗಿದ್ದೂ ಆಗ ಆತನಿಗೆ ಆ ಉಪನೇತ್ರಗಳ ಆವಶ್ಯಕತೆಯೇಕಿದ್ದಿತು? ಅದೇನೋ ತಿಳಿಯದು; ಆದರೆ ಆತನ ಕಣ್ಣುಗಳು ಒಳ್ಳೇ ಕೆಂಪಗಾಗಿದ್ದವು. ಎಲಲ! ಆತನ ಕಣ್ಣಲ್ಲೇನಾದರೂ ಬಿದ್ದಿತ್ತೇ? ಛೇ! ಹಾಗೇನೂ ಆಗಿರಲಿಲ್ಲ. ಆ ಕೆಂಗಣ್ಣಿನ ಪ್ರಕಾರವೇ ಬೇರೆಯಾಗಿತ್ತು. ಕಣ್ಣಿನಲ್ಲಿ ಏನಾದರೂ ಬಿದ್ದಿದ್ದರೆ ಇಲ್ಲವೆ ಕಣ್ಣಬೇನೆ ಬಂದಿದ್ದರೆ ಅವನು ಆಗ ಹಾಗೆ ಒಳ್ಳೇ ಸೊಗಸಿನಲ್ಲಿ ಕೂಡ್ರುತ್ತಿದ್ದನೆ? ಹಾಗಾದರೆ ಆತನ ಕಣ್ಣುಗಳು ಅಷ್ಟು ಕೆಂಪೇಕಾಗಿದ್ದವು? ಅವರ ಆಗಿನ ಮುಖಮುದ್ರೆ-ಕಣ್ಣುಗಳನ್ನು ನೋಡಿದ ನಮ್ಮಂತಹ ಜನರಿಗೆ ಅವರು ಚರಂಡಿ ಸಾಧುಗಳೆಂದು ಅನಿಸಿದರೂ, ನಿರ್ಮಲಾ ಶರಣಮ್ಮನಂತಹ ಅವರ ಪರಮ ಭಕ್ತಳಿಗೆ ಅವರು ಪರಬ್ರಹ್ಮರೂಪರಾಗಿಯೇ ತೋರುತ್ತಿದ್ದರು. ಆದರಿಂದ ನಾವು ಈಗ ಕಮಲಾಕಾಂತ ಸಾಧುವಿಗೆ ಏನಾದರೂ ಅಂದು ಆ ಶರಣಮ್ಮನ ಶಾಪಕ್ಕೆ ಗುರಿಯಾಗದಿರುವದೇ ವಿಹಿತವು.

ಇರಲಿ. ನಿರ್ಮಲೆಯು ಸೆಟ್ಟಗೆ ಹೋಗಿ ಕಮಲಾಕಾಂತ ಸಾಧುವಿನ ಚರಣಗಳ ಮೇಲೆ ಶಿರವನ್ನಿಟ್ಟು ನಮಸ್ಕರಿಸಲು, ನರ್ಮದೆಯೂ ಅವಳ ಅನುಕರಣವನ್ನು ಮಾಡಿದಳು. ಕಮಲಾಕಾಂತ ಸಾಧುವಿನ ಕಣ್ಣುಗಳು ಏತರಿಂದಲೋ ದುಂದಾಗಿದ್ದವಾದ್ದರಿಂದ ನರ್ಮದೆಯನ್ನು ಕಂಡೊಡನೆಯೇ ಆತನು ಒಳ್ಳೇ ಮೋದಗೊಂಡನು. ತನ್ನ ಪರಮ ಭಕ್ತಳಾದ ನಿರ್ಮಲಾ ಶರಣಮ್ಮನು ನಿನ್ನೆ ಹೇಳಿದಂತೆ ಈ ನರ್ಮದೆಯು ಒಳ್ಳೇ ಸುಂದರಳಿರುವಳೆಂದು ಅವನು ಆಕೆಯನ್ನು ಆರ್ಥಿಕ ಹಾಗು ಕಾಮಿಕ ದೃಷ್ಟಿಯಿಂದ ಹುಳು ಹುಳು ಎಂದು ನೋಡುತ್ತ:—"ನಿರ್ಮಲಮ್ಮಾ, ನಿಮ್ಮ ಈ ಕೃತಿಗೆ ನಗಬೇಕೋ-ಅಳಬೇಕೋ ತಿಳಿಯದಾಗಿದೆ. ನೀವು ಬಂದು ನನ್ನ ಚರಣಗಳಿಗೇನು ನಮಿಸುತ್ತೀರಿ? ಹಾಗು ಇವರನ್ನೇನು ನಮಿಸ ಹಚ್ಚುತ್ತೀರಿ? ಏನರೀ, ನಾನೇನು ಯಾವನೊಬ್ಬ ದೇವರಿರುವೆನೊ? ಸಾಧುವಿರುವೆನೊ? ಮಹಾರಾಜನಿರುವೆನೋ? ನೀವು ತಿಳಿದದ್ದಾದರೂ ಏನು? ನಾನೂ ನಿಮ್ಮಂತಹನೊಬ್ಬ ಪ್ರಾಪಂಚಿಕ ಮನುಷ್ಯನು. ಛೇ! ಛೇ! ನಾನು ನಿಮಗೆ ದಿನಾಲು ಈ ಪರಿ ಬೋಧಿಸುತ್ತಿದ್ದರೂ, ನೀವು ನನ್ನ ಪ್ರತಿಷ್ಠೆಯನ್ನೇ ಬೆಳಿಸುತ್ತಿರುವಿರಿ. ನಿಮ್ಮ ಈ ಕೃತಿಯಿಂದ ಈ ಹೆಣ್ಣು ಮಗಳಿಗೆ ನನ್ನ ಬಗ್ಗೆ ಏನೇನೆನಿಸಿರಬಹುದು!"

"ಮಹಾರಾಜರೇ, ಈ ಹೆಣ್ಣುಮಗಳು ನನಗೆ ಪರಕೀಯಳಾಗಿದ್ದರೆ, ನಾನು

ಹೀಗೆ ಆಚರಿಸುತ್ತಿದ್ದೆನೆ? ಇವಳು ನನ್ನ ಖಾಸ ತಂಗಿಯಂತಿರುವದರಿಂದ ನಿಮ್ಮ ಆಜ್ಞೆಯನ್ನು ಪಡೆಯದೆ ನಾನು ಇವಳನ್ನು ಇಲ್ಲಿಗೆ ಕರೆತಂದಿರುತ್ತೇನೆ. ಇವಳು ಒಳ್ಳೇ ಭೋಳೇಭಾಪಿಕ ಹೆಂಗುಸಾಗಿರುತ್ತಾಳೆ. ಮನೆಯಲ್ಲಿ ಸಾಕಷ್ಟು ಸಿರಿವಂತಿಕೆ ಯಿದ್ದರೂ ನೈದುನ-ನೆಘೆಣ್ಣಿಯರ ಕಾಟದಿಂದ ಬಳಲಿದವಳಾಗಿದ್ದಾಳೆ; ಮತ್ತು ಹೊಟ್ಟೆಯ ಮಕ್ಕಳು-ಮರಿಗಳಿರದ್ದರಿಂದ ಜೀವಕ್ಕೆ ಬೇಜಾರುಗೊಂಡಿದ್ದಾಳೆ"

"ಹೀಗೆ ಬೇಜಾರುಗೊಂಡರೆ ನಡೆಯುವ ಬಗೆ ಹೇಗೆ? ಪ್ರಸಂಗ ಬಂದದ್ದಕ್ಕೆ ಎದುರಾಗಲೇ ಬೇಕು. ನಮ್ಮ ಹಿಂದೀ ಜನರಲ್ಲಿ ಹೊಸ ಮನ್ವಂತರದ ಈ ಸುಧಾರಣೆಯ ಗಾಳಿಯು ಬೀಸಹತ್ತಿರುವದರಿಂದ ಅಣ್ಣನಿಗೆ ತಂಗಿ ಬೇಡ; ತಂಗಿಗೆ ಗಂಡ ಬೇಡ; ಗಂಡನಿಗೆ ಹೆಂಡತಿ ಬೇಡ ಹೀಗೆ ಪ್ರಪಂಚದ ಸ್ಥಿತಿಯಾಗಿರುತ್ತದೆ. ಈ ಹೆಣ್ಣುಮಗಳ ನೆಘೆಣ್ಣಿಯು ಇಂಗ್ಲಿಷ ಕಲಿತವಳಿರಬಹುದಲ್ಲವೆ?"

"ನರ್ಮದಕ್ಕಾ, ಕೇಳಿದಿರಾ ನಾನೇನು ಅಂದಿದ್ದೆನೆಂಬದನ್ನು? ನಮ್ಮ ಗುರುಗಳು ಪ್ರತ್ಯಕ್ಷ ಬ್ರಹ್ಮಸ್ವರೂಪರಾಗಿರುತ್ತಾರೆ ನೋಡಿದಿರಾ, ನಿಮ್ಮ ಇಂಗಿತವನ್ನು ಇವರು ಹೇಗೆ ತಪ್ಪದೆ ಒಡನುಡಿದರೆಂಬದನ್ನು? ಜಯ ಕಮಲಾಕಾಂತ ಮಹಾರಾಜ!" ಹೀಗೆಂದು ನಿರ್ಮಲೆಯು ಕೈಗಳನ್ನು ತಿರುವುತ್ತ ಮತ್ತೆ ಸಾಧುವನ್ನು ಪ್ರಾರ್ಥಿಸ ತೊಡಗಿದಳು. ಕಮಲಾಕಾಂತನ ಆಗಿನ ಆ ವೇಷಭೂಷಣಗಳನ್ನು ಕಂಡು ನರ್ಮದೆಯಲ್ಲಿ ಆತನ ವಿಷಯವಾಗಿ ಸದ್ಭಾವನೆಯು ಹುಟ್ಟಲಿಲ್ಲ. 'ತಂಗೀ, ನಿನ್ನ ಕಾಲುಜಾರ ಹತ್ತಿದೆ. ನೀನು ಅಡ್ಡದಾರಿಗೆ ಎಳೆಯಲ್ಪಡುತ್ತಿರುವೆ' ಎಂಬ ಉಪದೇಶವನ್ನು ಯಾರೋ ತನ್ನ ಕಿವಿಯಲ್ಲಿ ಮಾಡುತ್ತಿರುವ ಹಾಗೆ ಆಕೆಗೆ ಭಾಸವಾಯಿತು. ಕಮಲಾಕಾಂತನ ವಾಣಿಯು ಅಸ್ಖಲಿತವಾಗಿತ್ತು ಆದರೂ ಕಣ್ಣಿನ ಕೆಂಪು ವರ್ಣವು ಹೇಗೆ ಆಗಾಗ್ಗೆ ಬದಲಿಸುತ್ತಿತ್ತೋ, ಹಾಗೆಯೇ ವಾಣಿಯಾದರೂ ಬದಲಿಸುತ್ತಿರುವಂತೆ ನರ್ಮದೆಗೆ ಅನಿಸಿತು. ಯಾಕಂದರೆ ಆಗ ಸಾಧುವು ಗಟ್ಟಿಗಟ್ಟಿಯಾಗಿ ಮಾತಾಡುತ್ತಿದ್ದರೂ ಆತನ ಶಬ್ದೋಚ್ಚಾರಗಳು ಮಾತ್ರ ಅಷ್ಟೊಂದು ಸ್ಪಷ್ಟವಾಗಿ ಆಗುತ್ತಿದ್ದಿಲ್ಲವೆಂಬ ಗೌಪ್ಯವನ್ನು ನಿರ್ಮಲೆಯು ಮಾತ್ರ ತಿಳಿದಿದ್ದಳು. ಸಾಧುಗಳ ಆಗಿನ ಕೆಂಗಣ್ಣು ಹಾಗು ಅಸ್ಪಷ್ಟ ಶಬ್ದೋಚ್ಚಾರಗಳಿಂದ ಇವರು ಈಗ ತಾನೆ ಒಂದೆರಡು ಪೇಲೆ ಮದ್ಯವನ್ನು ಸೇವಿಸಿರುತ್ತಾರೆಂದು ಆ ಶರಣಮ್ಮನು ತರ್ಕಿಸಿದಳು.

ವಾಚಕರೇ, ಪ್ರಸಂಗವು ಅನಾಯಾಸವಾಗಿ ಪ್ರಾಪ್ತವಾಗಿರುವದರಿಂದ ಇದೇ ಕಾಲಕ್ಕೆ ನಮ್ಮ ಕಮಲಾಕಾಂತ ಸಾಧುಗಳ ಗುಣಕಥನವನ್ನಷ್ಟು ಮಾಡಿಬಿಡುವೆವು. ವಿಷಯಾಂತರವಾಗುವದಕ್ಕೆ ಕ್ಷಮಿಸಿರಿ.

ಪರಮೇಶ್ವರನ ಭಜನ-ಪೂಜನಗಳ ವಿಷಯದಲ್ಲಿ ಇತ್ತೀಚೆಗೆ ಹೆಚ್ಚಾಗಿ ಅಕ್ರಮಗಳು ನಡೆದಿರುತ್ತವೆ. ಮನಸ್ಸಿನೊಳಗಿನ ನಿಜವಾದ ಭಕ್ತಿ-ಭಾವನೆಗಳು ಲೋಪವಾಗಿ, ಅವುಗಳ ಸ್ಥಳವನ್ನು ಬಹಿರಾಡಂಬರದ ಹಾವಭಾವಗಳು ಮಾತ್ರ ವ್ಯಾಪಿಸಿ ಬಿಡಹತ್ತಿವೆ. ಹಿರಿಯರೆಲ್ಲರೂ ಮೋಕ್ಷಪಡವಿಗೇರಿದ್ದರಿಂದ, ಮನೆಯೊಳಗಿನ

ವೇವರು-ದಿಂಡರುಗಳ ಪೂಜೆಪುರಸ್ಕಾರದ ಲಿಲಾವು ಹುಡುಗರು-ಹುಪ್ಪಡಿಗಳ ಪಾಲಾಯಿತು. ಅವುಗಳ ಆಡಮುಟ್ಟತನದಿಂದ ಪಾಪ! ಆ ದೇವಮೂರ್ತಿಗಳ ಹಣೆ-ತಲೆಗಳಿಗೆ ಆಗಾಗ್ಗೆ ಪೆಟ್ಟು ಬಿದ್ದು, ವಾರಕ್ಕೆ ಒಂದೆರಡು ಸಾರೆಯಾದರೂ ಅವು ಖುಣ್ಣಾಲಯದ ದಾರೀ ಹಿಡಿಯುವ ಪ್ರಸಂಗ ಬಂದಿದೆ. ಇದರಂತೆಯೇ ಸತ್ಯನಾರಾಯಣ, ಗಣಪತಿಪೂಜೆ, ಅನಂತಪೂಜೆ ಮುಂತಾದ ವ್ರತೋದ್ಯಾಪನೆಗಳು ಕೇವಲ ಲೌಕಿಕಕ್ಕಾಗಿಯೂ ಒಬ್ಬರ ಮೇಲೊಬ್ಬರ ಹಟತಟಗಳಿಗೂ ಆಗುತ್ತಿರುತ್ತವೆ. ನಿಜವಾದ ಭಕ್ತಿ-ಭಾವನೆಗಳ ಅಂಶವು ನೂರಕ್ಕೆಷ್ಟರಂತಿರುವದೋ ಎಂಬ ಬಗ್ಗೆ ದೊಡ್ಡ ಭ್ರಾಂತಿಯೇ ಇದೆ. ದೇವರಿಗೆ ಈ ಲೌಕಿಕಾಡಂಬರದ ಆವಶ್ಯಕತೆಯಿರುವದಿಲ್ಲ. ಆತನು ಭಾವಿಕರ ಭಕ್ತಿಗೆ ಲುಬ್ಧನಾಗುವವನು. ಅವನಿಗೆ ಮಂತ್ರ ಬೇಡ, ತಂತ್ರ ಬೇಡ, ಧೂಪ ಬೇಡ, ದೀಪ ಬೇಡ, ನೈವೇದ್ಯ ಬೇಡ, ಆರುತಿ ಬೇಡ; ಮಡಿ-ಮೈಲಿಗೆಗಳ ಕಡೆಗೂ ಆತನ ಕಟಾಕ್ಷವಿರುವದಿಲ್ಲ. ವಂಶಪರಂಪರೆಯಿಂದ ಸಾಗಿ ಬಂದ ರೂಢಿಯನ್ನು ಅಳುತ್ತ, ಕರೆಯುತ್ತ ಹೇಗಾದರೂ ನಡೆಸುತ್ತ, ಆತನ ಹೆಸರಿನಿಂದ ಎಷ್ಟು ಕೂಗಿಕೊಂಡರೂ, ಆತನ ತಲೆಯ ಮೇಲೆ ಎಷ್ಟು ಹೂವ್ವು-ತುಳಸಿಗಳನ್ನೇರಿಸಿದರೂ ಅಥವಾ ಊದಿನಕಡ್ಡಿ-ಕರ್ಪೂರಗಳನ್ನು ಸುಟ್ಟರೂ ಅದರಿಂದ ಏನು ನಿಷ್ಪನ್ನವಾಗುವದು? ದ್ರವ್ಯ ಹಾಗು ವೇಳೆಯ ಅಪವ್ಯಯ-ಅನಾವ್ರಯಗಳು ಮಾತ್ರ ಖಂಡಿತವಾಗಿ ಆಗುವವು. ಶಬರಿಯು ರಾಮನನ್ನು ಪ್ರಸನ್ನೀಕರಿಸಿಕೊಳ್ಳುವಾಗ ಆ ಬಡವಳ ಬಳಿಯಲ್ಲಿ ಗಂಧವಿದ್ದಿತೇ? ನೀರಾಂಜನ-ಧೂಪಾರ್ತಿಗಳಿದ್ದವೆ? ನೈವೇದ್ಯಕ್ಕಾಗಿ ಕಲ್ಲುಸಕ್ಕರೆ-ಉತ್ತತ್ತಿಗಳಿದ್ದವೆ? ಅವೇನೂ ಇರದೆ, ಆಕೆಯಲ್ಲಿ ಕೇವಲ ಶುದ್ಧವಾದ ಮನಸ್ಸೊಂದಿದ್ದಿತು; ಮತ್ತು ಅಂತೆಯೇ ಅವಳು ತಾನು ತಿಂದು ರುಚಿ ನೋಡಿ ಅರ್ಪಿಸಿದ ಕಾಡಿನೊಳಗಿನ ಬಾರೀ ಹಣ್ಣುಗಳನ್ನು ಶ್ರೀರಾಮಚಂದ್ರನು ಒಳ್ಳೇ ಪ್ರೇಮದಿಂದ ಸ್ವೀಕರಿಸಿದನು. ಇದರಂತೆ ಯಾವುದೊಂದು ಕಾರ್ಯವನ್ನು ಅದು ಧಾರ್ಮಿಕವೇ ಇರಲಿ; ರಾಜಕೀಯ-ಸಾಮಾಜಿಕ ಸ್ವರೂಪದ್ದೇ ಆಗಿರಲಿ, ಶುದ್ಧ ಮನಸ್ಸಿನಿಂದ ಮಾಡುತ್ತಿರಬೇಕು; ಅಂದರೆ ಅದರ ಫಲವು ದೊರೆಯುತ್ತದೆ. ಅದಿಲ್ಲದ್ದರೆ ಬೋರ್ಗಲ್ಲ ಮೇಲೆ ಮಳೆಗರೆದಂತಾಗುವದು ನಿಜವು.

ನರ್ಮದೆಯು ಅಷ್ಟೊಂದು ಖಾಣಾಕ್ಷ ಹೆಂಗುಸಾಗಿರಲಿಲ್ಲ. ಅದರಿಂದ ಅವಳು ಸುಮ್ಮನೆ ಕುಳಿತಳು. ಆಕೆಯು ಅಲ್ಲಿಗೆ ಬಂದ ಕ್ಷಣದಿಂದ ಕಮಲಾಕಾಂತನ ದೃಷ್ಟಿಯು ಆಕೆಯ ಮುಖಮಂಡಲದಲ್ಲಿಯೇ ನೆಟ್ಟು ಹೋಗಿತ್ತು. ಆತನ ಮೈಯಲ್ಲ ಸಂಚಾರವಾದಂತಾಗಿತ್ತು. ನಿರ್ಮಲೆಯು ಮಹಾರಾಜರ ಸ್ತುತಿಗೈಯುತ್ತಲೆ, ಕಮಲಾಕಾಂತನು ಹಲ್ಲುಕಿರಿಯುತ್ತ:—"ನಿರ್ಮಲಮ್ಮಾ, ಈ ಹೆಣ್ಣುಮಗಳ ಹೆಸರೇನು?" ಎಂದು ಕೇಳಿದನು.

ಮಹಾರಾಜರು ಹೆಸರು ಕೇಳಿದ ಕೂಡಲೆ ನಿರ್ಮಲೆಯು ನರ್ಮದೆಯ ತಿಳುವಳಿಕೆಗಾಗಿ ಸ್ವಲ್ಪದರಲ್ಲೇ ಆಕೆಯ ವಿಷಯದ ಸಂಪೂರ್ಣ ಮಾಹಿತಿಯನ್ನು ಅವನಿಗೆ

ತಿಳಿಸಿದಳು. ಆಗ ಆ ಟೋಣಪನು ನರ್ಮದೆಯ ಸುಂದರ ಮುಖದ ಕಡೆಗೆ ಆಶಾಪೂರ್ಣ ದೃಷ್ಟಿಯಿಂದ ನಿರೀಕ್ಷಿಸುತ್ತ:—"ನಿರ್ಮಲವ್ವಾ, ಇವರ ಮುಖವನ್ನು ನೋಡಿದರೆ ಇವರು ಒಳ್ಳೇ ಭಾಗ್ಯಶಾಲಿಗಳಿರುತ್ತಾರೆಂದು ನನಗೆ ತಿಳಿಯುತ್ತದೆ. ಹಣೆಯ ಬರಹವನ್ನು ತಿಳಿಯುವದು ಅಷ್ಟೊಂದು ಕಠಿಣವಾಗಿರುವದಿಲ್ಲ ಎಂಥಹ ಸ್ಥಿತಿಯಲ್ಲೂ ಮನುಷ್ಯನ ಭಾಗ್ಯತೇಜವು ಮುಖದ ಮೇಲೆ ಹೊಳೆಯುತ್ತಿರುತ್ತದೆ; ಆದರೆ ಅದನ್ನು ತಿಳಕೊಳ್ಳುವ ತಾರತಮ್ಯ ಬುದ್ಧಿಯು ಮಾತ್ರ ಇರಬೇಕಾಗುತ್ತದೆ. ನಿರ್ಮಲವ್ವಾ, ಆ ಖುರ್ಚಿಯನ್ನು ತುಸ ಮುಂದಕ್ಕೆ ತಕ್ಕೊಳ್ಳಿರಿ ನೋಡೋಣ"

ಮಹಾರಾಜರ ಅಪ್ಪಣೆಯಾಗುತ್ತಲೆ ಆಜ್ಞಾಂಕಿತಳಾದ ಆ ಶರಣಮ್ಮನು ಪಕ್ಕದಲ್ಲಿದ್ದ ಖುರ್ಚಿಯನ್ನು ತಂದು ಮಹಾರಾಜರ ಆರಾಮ ಖುರ್ಚಿಗೆ ಹೊಂದಿಸಿ ಇಟ್ಟಳು. ಆಗ ಕಮಲಾಕಾಂತನು ಮತ್ತೆ: —"ಬನ್ನಿರಿ, ನರ್ಮದಾಬಾಯಿ, ಇತ್ತ ಬಂದು ಈ ಖುರ್ಚಿಯ ಮೇಲೆ ಕುಳಿತುಕೊಳ್ಳಿರಿ." ಮಹಾರಾಜರು ತಮ್ಮ ಪಕ್ಕದ ಖುರ್ಚಿಯಲ್ಲಿ ಕೂಡ್ರು ಹೇಳಲು, ನರ್ಮದೆಗೆ ಹೇಗೆ ಹೇಗೋ ಅನಿಸಿತು. ಆಗ ಅವಳು ನಿರ್ಮಲೆಯ ಮುಖದ ಕಡೆಗೆ ನೋಡಿದಳು. ಯಾತಕ್ಕೂ ಹೇಸದಾಗಿದ್ದ ನಿರ್ಮಲಾ ಶರಣಮ್ಮನು ಆಕೆಯ ಅಂತಃಕರಣದಲ್ಲಿ ಹೊಕ್ಕು ಅದರ ನೆಲೆಯನ್ನು ಕಂಡು ಹಿಡಿದು:—"ನರ್ಮದಕ್ಕಾ, ಎದ್ದೇಳಿರಿ. ಹೀಗೆ ನಾಚುವದೇಕೆ? ಮಹಾರಾಜರೆಂದರೆ ತಂದೆ-ಅಣ್ಣನಂತೆ. ಇವರ ಬಳಿಯಲ್ಲೇತರ ಸಂಕೋಚ?" ಎಂದು ಹೇಳಿ, ಸಂಕೋಚದ ಪ್ರಾಂಗಣವನ್ನು ಆಕುಂಚನಗೊಳಿಸಲು, ಆ ನಿರ್ಭೀತಿಯ-ನಿರ್ಲಜ್ಜೆಯ ಬೈಲನ್ನು ಪ್ರವೇಶಿಸಲಿಕ್ಕೆ ನರ್ಮದೆಗೆ ಅಂಜಿಕೆಯೆನಿಸಲಿಲ್ಲ. ಅವಳು ಕೂಡಲೆ ಕುಳಿತಲ್ಲಿಂದೆದ್ದು ಹೋಗಿ ಮಹಾರಾಜರ ಪಕ್ಕದ ಖುರ್ಚಿಯ ಮೇಲೆ ಕುಳಿತಳು. ನರ್ಮದೆಯು ಖುರ್ಚಿಯ ಮೇಲೆ ಬಂದು ಕೂಡ್ರುವ ಕಾಲಕ್ಕೆ ಸಾಧು-ಶರಣಮ್ಮರಲ್ಲಿ ನೇತ್ರಸಂಕೇತವು ನಡೆಯಿತು.

ಬಳಿಕ ಕಮಲಾಕಾಂತನು ತನ್ನ ಕೈ ಮುಂದೆ ಮಾಡಿ:—"ನರ್ಮದಾಬಾಯಿ, ನಿಮ್ಮ ಎಡಗೈ ತೋರಿಸಿರಿ ನೋಡೋಣ." ಎಂದು ಅಪ್ಪಣೆ ಮಾಡಲು, ನರ್ಮದೆಯು ಮರುಮಾತನಾಡದೆ ತನ್ನ ಎಡಗೈಯನ್ನು ಅವನ ಮುಂದೆ ನೀಡಿದಳು. ಕೂಡಲೆ ಆ ಸಾಧುವು ಅದನ್ನು ತನ್ನ ಕೈಯಿಂದ ಹಿಡಿದುಕೊಂಡು, ಹಸ್ತರೇಖೆಗಳನ್ನು ನೋಡುವ ಮಿಷದಿಂದ ಹಸ್ತಲೀಲೆಗಳನ್ನು ನಡೆಸಿದನು! ನಿರ್ಮಲೆಯು ಮುಗುಳು ನಗೆ ನಗುತ್ತ:—"ಮಹಾರಾಜರೇ, ಚೆನ್ನಾಗಿ ನೋಡಿ ಪರೀಕ್ಷಿಸಿರಿ ಬರುವ ವರ್ಷಕ್ಕೆ ತೊಟ್ಟಿಲು ತೂಗಬೇಕು" ಎಂದು ಹೇಳುತ್ತ ನರ್ಮದೆ ಹಾಗು ಸಾಧುಗಳ ಮುಖದ ಕಡೆಗೆ ಸಹೇತುಕ ದೃಷ್ಟಿಯಿಂದ ನೋಡಹತ್ತಿದಳು. ನರ್ಮದೆಯು ಕಮಲಾಕಾಂತನ ಕೈಯಲ್ಲಿ ತನ್ನ ಕೈಯನ್ನು ಕೊಟ್ಟಿದ್ದಳೇನೋ ನಿಜ; ಆದರೆ ಆ ಪರಪುರುಷನ ಸ್ಪರ್ಶವು ಶುದ್ಧ ಭಾವನೆಯದಿರದ್ದರಿಂದ, ಆತನು ಕೈ ಹಿಡಿಯುತ್ತಲೆ ಅವಳ ಮೈಯೆಲ್ಲೆಲ್ಲ ಮುಳ್ಳುಗಳೆದ್ದವು; ಮತ್ತು ಅದೇ ಕಾಲಕ್ಕೆ ಆ ಸಾಧುವಿನ ಬಾಯೊಳಗಿಂದ

ಯಾವ ಒಂದು ಬಗೆಯ ದುರ್ಗಂಧವು ಹೊರಬೀಳುತ್ತಿತ್ತೋ ಅವನಿಂತಂತೂ ಆಕೆಯು ವ್ಯಾಕುಲಗೊಂಡಿತು; ಆದರೆ 'ಬಂದದ್ದೆಲ್ಲ ಬರಲಿ-ಶ್ರೀಗುರುವಿನ ದಯವೊಂದಿರಲಿ' ಎಂದೆನ್ನದ ಹೊರತು ಆಗ ಬೇರೆ ಮಾರ್ಗವೇ ಇರಲಿಲ್ಲ. ನರ್ಮದೆಯು ದುಂಡಗಾದ ಕೈಯು ಸಾಧುವಿನ ಕೈಯಲ್ಲಿ ಸಿಕ್ಕಬಳಿಕ ಆತನು ಸುಮ್ಮನಿರುವನೆ? ಹಾಲಿನ ಅಭಿಲಾಷೆಯನ್ನು ಅರಳಿಟ್ಟಿನ ನೀರಿನಂತೆ ಪೂರೈಸಿಕೊಳ್ಳಹತ್ತಿದನು! ಎಷ್ಟೋ ಹೊತ್ತಿನವರೆಗೆ ಆತನು ಆ ಕೈಯನ್ನು ತಿರುತಿರುವಿ ನೋಡಿದ ಬಳಿಕ ಆಕೆಯ ಮುಖದ ಕಡೆಗೆ ನೋಡುತ್ತ:—ನಿನ್ನ ಗ್ರಹಗಳು ಒಳ್ಳೇ ಶ್ರೇಷ್ಠವಾಗಿರುತ್ತವೆ; ಆದರೆ ಮಂಗಳನ ದೃಷ್ಟಿಯು ಮಾತ್ರ ತುಸ ವಕ್ರವಾಗಿರುವದರಿಂದ ನೀನು ನಿಮ್ಮವರಿಗಾಗಿ ಎಷ್ಟು ಹೆಣಗಿದರೂ ನಿನಗೆ ಶ್ರೇಯಸ್ಸು ಲಭಿಸುವದಿಲ್ಲ; ನೀನು ಅವರಿಗೆ ಹಗೆಗಳಂತೆ ತೋರುವೆ."

"ನೋಡಿದಿರಾ ನರ್ಮದಕ್ಕಾ! ಮಹಾರಾಜರು ಹೇಗೆ ಬುಡಕ್ಕೇ ಕೈನೀಡಿದರೆಂಬದನ್ನು! ಮಹಾರಾಜರೇ, ಈ ನರ್ಮದಾಬಾಯಿಯವರು ಮನೆಯಲ್ಲಿ ಹಗಲಿರುಳೂ ದುಡಿದು ದುಡಿದು ಸಾಯುತ್ತಾರೆ; ಆದರೆ ಇವರ ಮೈದುನ-ನೆಗೆಣ್ಣಿಯರು ಇವರನ್ನು ಯಾವಾಗಲೂ ದ್ವೇಷಿಸುತ್ತಾರೆ. ನಾಲ್ಕು ತುತ್ತು ಸುಖದಿಂದ ಉಂಡೇನೆಂದರೆ ಉಣ್ಣಗೊಡುವದಿಲ್ಲ. ದಿನಾಲು ಜಗಳ-ತಂಟೆ, ವಾದಿಸ್ಯಾಟ. ಅವರು ಈ ಪರಿ ಕಾಡಿಸುತ್ತಿದ್ದರೂ ಈ ಬಡವಳ ಬಾಯಿಂದ ಒಂದು ಬಿರಿನುಡಿ ಕೂಡ ಹೊರಡುವದಿಲ್ಲ ನರ್ಮದೆಯು ದೊಡ್ಡ ಪಾತ್ರವು! ಬಂದದ್ದನ್ನೆಲ್ಲ ಹೊಟ್ಟೆಯಲ್ಲಿ ಹಾಕಿಕೊಳ್ಳುವದು. ಅಪ್ಪಿತಪ್ಪಿ ಕೂಡ ಎಂದೂ ಯಾರಿಗೂ ಅಧಿಕೋತ್ತರವಿಲ್ಲ. ಮಹಾರಾಜರೇ, ಇವಳ ಕೈಯನ್ನು ಚೆನ್ನಾಗಿ ನೋಡಿರಿ. ಈ ಮುಗ್ಧಳನ್ನು ನಾನು ನಿಮ್ಮ ಚರಣದೆಡೆಗೆ ಕರೆತಂದಿರುತ್ತೇನಾದ್ದರಿಂದ ನೀವು ಇವಳನ್ನು ಅನುಗ್ರಹಿಸಿರಿ"

"ನಿರ್ಮಲಮ್ಮಾ, ಅನುಗ್ರಹ ಮಾಡಬೇಕೆಂದೇ ನಾನಿವರ ಕೈಹಿಡಿದಿರುತ್ತೇನೆ."

ಕಮಲಾಕಾಂತನ ಬಾಯಿಂದ ಈ ವಾಕ್ಯವು ಹೊರಹೊರಡುತ್ತಲೆ ನರ್ಮದೆಯು ಅಂತಃಕರಣಕ್ಕೆ ಚೇಳು ಕಚ್ಚಿದಂತಾಯಿತು. ಅದರಿಂದ ಅವಳು ಆ ಟೊಣಪನ ಕೈಯೊಳಗಿಂದ ತನ್ನ ಕೈಯನ್ನು ಬಿಡಿಸಿಕೊಳ್ಳಲು ಪ್ರಯತ್ನಿಸತೊಡಗಿದಳು. ಸಾಧುವು ಅವಳ ಆ ಚಟುವಟಿಕೆಯ ಕಾರಣವನ್ನು ಗುರ್ತಿಸಿದನು; ಹಾಗು 'ಪ್ರಥಮ ಗ್ರಾಸೇ ಮಕ್ಷಿಕಾಪಾತಃ' ಎಂತಾಗಬಾರದೆಂಬ ಪ್ರೋಕ್ತ ವಿಚಾರ ಮಾಡಿ, ಅವಳನ್ನು ಹಿಡಿದಿದ್ದ ತನ್ನ ಕೈಯನ್ನು ತುಸ ಸಡಲಿಸಿದನು ಕೂಡಲೆ ನರ್ಮದೆಯು ತನ್ನ ಕೈಯನ್ನು ಬಿಡಿಸಿಕೊಂಡು ಅಲ್ಲಿಂದೆದ್ದಳು. ಆಗ ನಿರ್ಮಲೆಯು ಆಶ್ಚರ್ಯಾಭಿನಯಗೈಯ್ಯುತ್ತ:—"ನರ್ಮದಕ್ಕಾ, ಹೀಗೆ ಎದ್ದಿರೇಕೆ? ನಿಲ್ಲಿರಿ, ಇನ್ನೂ ಮುಖ್ಯ ಕೆಲಸವು ಉಳಿದೇ ಬಿಟ್ಟಿದೆ." ಎಂದು ಹೇಳಿ, ಕಮಲಾಕಾಂತನ ಕಡೆಗೆ ಹೊರಳಿ:—"ಮಹಾರಾಜರೇ, ಹಾಗಾದರೆ ಈಕೆಯ ಮೇಲೆ ಅನುಗ್ರಹ ಮಾಡುವಿರಷ್ಟೆ?" ಎಂದು ಕೇಳಿದಳು.

"ನಿರ್ಮಲಮ್ಮಾ, ನಾನೇನು ದೇವರಲ್ಲ; ಅಥವಾ ಪಂಚಾಕ್ಷರಿಯಲ್ಲ. ಕೇವಲ

ನಿಮ್ಮ ಭಿಡೆ-ಮುರವತ್ತಿಗಾಗಿಯೇ ನಾನಿವರ ಕೈನೋಡಿದೆನು.''

"ನಾನು ಇಲ್ಲಿಂತಿಲ್ಲ ಹೇಳುತ್ತೇನೆ; ಆದರೆ ನನ್ನ ಭಿಡೆಗಾಗಿಯೇ ನೀವು ಇವರ ಮೇಲೆ ನಿಮ್ಮ ಅನುಗ್ರಹವನ್ನೂ ಮಾಡಿರಿ. ಇವಳ ಮನೆಯಲ್ಲಿ ಮೂಲಿ-ಮೂಲಿಗೆ ಧನದ ರಾಶಿಯು ಕೊಳೆಯುತ್ತಿದ್ದರೂ ಆದರಿಂದ ಇವಳಿಗೇನು ಸುಖವಾಗುವಂತಿದೆ?"

''ಅಂದರೆ?" ಕಮಲಾಕಾಂತನು ಒಳ್ಳೇ ವಿಸ್ಮಯದಿಂದ ಕೇಳಿದನು.

''ಅಂದರೇನು? ಅದನ್ನು ಅನುಭೋಗಿಸಲಿಕ್ಕೆ ಹೊಟ್ಟೆಯ ಮಕ್ಕಳಿರಬೇಡವೆ? ಅದಾಗದಿದ್ದರೆ ಅದೆಲ್ಲವೂ ಮೈದುನ-ನೆಫೆಣ್ಣೆಯರ ಪಾಲಾಗುವದಿಲ್ಲವೆ?'' ನಿರ್ಮಲೆಯು ಮೂಗು ಮುರಿಯುತ್ತ ಕಣ್ಣು ಹಾರಿಸುತ್ತ ನುಡಿದಳು.

"ಹೀಗೆಯೇನು? ಒಟ್ಟಿನಲ್ಲಿ ನಿಮ್ಮ ಮಾತಿನ ಅರ್ಥವು ಈ ನರ್ಮದಾಬಾಯಿಗೆ ಮಗನಾಗಬೇಕು. ಅಹುದಲ್ಲರೀ ನರ್ಮದಾಬಾಯಿ?" ಕಮಲಾಕಾಂತನು ವಿಲಕ್ಷಣ ನೋಟದಿಂದ ನರ್ಮದೆಯ ಮುಖದ ಕಡೆಗೆ ನೋಡುತ್ತ ಕೇಳಿ:—"ಇದರಲ್ಲಿ ಅಂಥ ವಿಶೇಷ ಕಠಿಣ ಪ್ರಸಂಗವೇನೂ ಇರುವದಿಲ್ಲ; ಆದರೆ ನರ್ಮದಾಬಾಯಿ, ನಾನು ನಿಮಗೆ ಮತ್ತೆ ಮತ್ತೆ ಒತ್ತಿ ಹೇಳುವದೇನಂದರೆ, ನೀವು ನನ್ನೆಡೆಗೆ ಬರುತ್ತಿರುವ ಸಂಗತಿಯ ಸುದ್ದಿ ಕೂಡ ಯಾರಿಗೂ ಹತ್ತಕೂಡದು; ಯಾಕಂದರೆ, ನೀವು ಒಳ್ಳೇ ಅಭಿಮಾನದಿಂದ ನನ್ನ ಪ್ರತಾಪವನ್ನು ಹೊಗಳ ಹತ್ತಬಹುದು; ಆದರೆ ಆದರಿಂದ ನನ್ನೆಡೆಗೆ ಅನುಗ್ರಹಾಪೇಕ್ಷಿತ ನವಯುವತಿಯರ ಹಿಂಡು ಹಗಲು ರಾತ್ರಿಯೆನ್ನದೆ ಎಡೆಬಿಡದೆ ತಿರುಗಹತ್ತೀತು. ನನ್ನ ನಿಜ ಸ್ವರೂಪವು ಬೇರೆಯವರಿಗೆ ತಿಳಿಯಕೂಡದೆಂಬ ಸದುದ್ದೇಶದಿಂದಲೇ ನಾನೀಪರಿ ಸೊಬಗಿನ ಪುರುಷನ ವೇಷದಿಂದ ನಟಿಸುತ್ತಿರುವೆನು; ಆದರೆ ಕಮಲ ಪತ್ರವು ಕೆಸರಲ್ಲಿ ಹುಟ್ಟಿದ್ದರೂ ಅದಕ್ಕೆ ಹೇಗೆ ಕೆಸರಿನ ಲೇಪವಿರುವದಿಲ್ಲವೋ, ಅದರಂತೆಯೇ ನಮ್ಮಂತಹ ವಿರಕ್ತರ ಹೃದಯಕ್ಕೆ ಈ ಬಾಹ್ಯ ಶೃಂಗಾರಗಳ ಗಂಧವೂ ಸ್ಪರ್ಶವಾಗುವದಿಲ್ಲ."

"ಮಹಾರಾಜರೇ, ನನ್ನ ಮೈಮೇಲಿನ ತೊಗಲನ್ನು ತೆಗೆದು ಜೋಡು ಮಾಡಿಸಿ ತಮಗೆ ತೊಡಿಸಿದರೂ ತಮ್ಮ ಋಣಭಾರವು ಹಗುರಾಗಲಿಕ್ಕಿಲ್ಲ. ನಮ್ಮಂತಹ ಪಾಪಿ ಪ್ರಾಣಿಗಳಿಂದ ತಮಗೆ ತೊಂದರೆಯಾಗುತ್ತದೆಂಬದನ್ನು ತಿಳಿದೂ ತಿಳಿದು ನಾನು ಈ ನರ್ಮದಾಬಾಯಿಯನ್ನು ತಮ್ಮ ಚರಣದೆಡೆಗೆ ಕರೆತಂದಿರುತ್ತೇನೆ; ಆದರೆ ತಾವು ನನಗಾಗಿ ಇವಳ ಮೇಲೆ ಕೃಪೆ ಮಾಡಲೇ ಬೇಕು; ಯಾಕಂದರೆ ತಮ್ಮ ಅನುಗ್ರಹವು ಈ ನಿರ್ಮಲಾ ಪಾಪಿಣಿಯ ಮೇಲೆ ಇದ್ದೇ ಇದೆ." ನಿರ್ಮಲೆಯು ಒಳ್ಳೇ ಕಳಕಳಿಯಿಂದ ಹೇಳಿದಳು.

"ನಿರ್ಮಲಾ," ಕಮಲಾಕಾಂತನು ವಿಲಕ್ಷಣ ಮುದ್ರೆಯಿಂದ:—"ಎಲೇ, ನೀನು ನನ್ನ ಪರಮ ಭಕ್ತಳು-ಪಟ್ಟದ ಶರಣಮ್ಮನು. ನನ್ನಲ್ಲಿ ನಿನ್ನ ಭಾವನೆಯೇ ಆ ಬಗೆಯದಾಗಿದೆ. ನೀನು ಹಗಲಿರುಳು ನನ್ನ ಸೇವಾ-ಶುಶ್ರೂಷೆಯಲ್ಲಿ ತತ್ಪರಳಾದವಳು. ಅಂದಬಳಿಕ ನಿನ್ನ ಸಲುವಾಗಿ ನಾನು ಲೋಕದವರ ತುಸ ತೊಂದರೆ

ಯನ್ನು ಸಹಿಸಿದರೆ ಆಶ್ಚರ್ಯವೇನು? ಈ ನರ್ಮದೆಯ ಭೋಳೀ ಭಾವಿಕ ಮುಖ ಮುದ್ರೆಯನ್ನು ಕಂಡೊಡನೆಯೇ ನನಗಿವಳ ವಿಷಯಕ್ಕೆ ಕನಿಕರವುಂಟಾಗಿರುತ್ತದೆ. ನೀನು ನಿನ್ನ ಛಿಡೆ-ಮುರವತ್ತುಗಳನ್ನು ಇವಳ ಸಲುವಾಗಿ ವ್ಯಯಗೊಳಿಸದಿದ್ದರೂ ಇವಳಿಗೋಸುಗ ಏನು ಮಾಡಬೇಕಾಗಿದೆಯೋ ಅದನ್ನು ನಾನು ಮಾಡಿಯೇ ಮಾಡುತ್ತಿದ್ದೆನು"

"ಮಹಾರಾಜರೇ, ಆ ಬಗ್ಗೆ ನನ್ನ ಖಾತ್ರಿಯಾಗಿದೆ. ಅಂತೆಯೇ ನಾನು ತಮ್ಮ ಅಪ್ಪಣೆ ಪಡೆಯುವ ಮೊದಲೇ ಈ ನರ್ಮದಕ್ಕನಿಗೆ ಖಾತ್ರಿ ಹೇಳಿ ಇಲ್ಲಿಗೆ ಕರೆ ತಂದಿರುತ್ತೇನೆ."

"ಒಳ್ಳೇದು. ನರ್ಮದೆ, ನೀನು ಯಾವುದಕ್ಕೂ ಯೋಚಿಸಬೇಡ. ಎಲೆ, ದೇವ ರಿಗೆ ಇತ್ತಣ ಸೃಷ್ಟಿಯನ್ನು ಅತ್ತ ಮಾಡ ಹಚ್ಚುವ ನಮ್ಮಂತಹ ಭಗವದ್ಭಕ್ತರು ಜೀವಿ ಸಿರಲಿಕ್ಕೆ ಮಕ್ಕಳು-ಮಕ್ಕಳು ಎಂದರೆ ಯಾವ ಗಿಡದ ತೊಪ್ಪಲು? ನರ್ಮದೆ, ನಿನ ಗಿನ್ನು ಪ್ರತಿ ವರ್ಷ ಒಂದು ಮಗುವಾಗದಿದ್ದರೆ ಈ ಕಮಲಾಕಾಂತ ಸಾಧುವೆಂತಹನು? ಇದುವರೆಗೆ ನಾನು ಸಾವಿರಾರು ಹೆಂಗಳೆಯರ ಕೈನೋಡಿರುತ್ತೇನೆ; ಆದರೆ ನಿನ್ನಂತಹ ಉಚ್ಚಗ್ರಹದ ಕೈಯನ್ನೇ ನಾನಿದುವರೆಗೆ ಕಂಡಿರಲಿಲ್ಲ. ನಿನ್ನ ಪ್ರತಿಯೊಂದು ಗ್ರಹವೂ ಉಚ್ಚಸ್ಥಾನದ್ದಿದೆ. ಅವುಗಳಲ್ಲಿ ತುಸ ಅಡ್ಡಬರುವದೆಂದರೆ, ಮಂಗಳ ವೊಂದಿದೆ: ಆದರೆ ಆ ಮಂಗಳನ ಕಿವಿಗೆ ಹರಳು ಹಚ್ಚಲಿಕ್ಕೆ ತಡಹಿಡಿಯಲಾರದು. ಆ ಮಂಗಳನನ್ನು ಹೇಗೆ ಹಾದಿಗೆ ತರಬೇಕೋ ಅದನ್ನು ನಾನು ನೋಡಿಕೊಳ್ಳು ತ್ತೇನೆ. ನೀನು ಮಾತ್ರ ನಾಳಿನ ಮಂಗಳವಾರದಿಂದ ಒಂದು ಹೊತ್ತು ಮಾಡ ಹತ್ತು; ಹಾಗು ನಿನ್ನ ಮನಸ್ಸಿಗೆ ಬಂದರೆ ಯಾವನೊಬ್ಬ ಬ್ರಾಹ್ಮಣನಿಗೆ ಆ ದಿವಸ ಊಟಕ್ಕೆ ಕರೆ; ಇಲ್ಲವೆ ಸಿಧಾ-ಸಾಮುಗ್ರಿಗಳನ್ನು ಕೊಡು; ಆದರೆ ನಾನು ಹೀಗೆ ಮಾಡಹೇಳಿದೆ ನೆಂಬದನ್ನು ಮಾತ್ರ ಯಾರ ಮುಂದೂ ಉಸುರಕೂಡದು ನೋಡು. ಇಲ್ಲದಿದ್ದರೆ ನನಗೀ ವ್ರತವನ್ನು ಈ ಕಮಲಾಕಾಂತ ಸಾಧುವು ಹೇಳಿರುತ್ತಾನೆಂದು ಅನ್ನುತ್ತ ಊರ ತುಂಬ ಸುದ್ದೀ ಹರಡಿ ಬಿಟ್ಟೀ."

"ಮಹಾರಾಜರೇ, ಆ ಬಗ್ಗೆ ಕೊಂಚವೂ ಯೋಚನೆ ಬೇಡ. ಈ ನಮ್ಮ ನರ್ಮದಾ ಬಾಯಿಯಿಂದ ಈ ಕಿವಿಯ ಸುದ್ದಿಯು ಆ ಕಿವಿಗೆ ಎಂದಿಗೂ ಮುಟ್ಟಲಾರದೆಂಬ ಬಗ್ಗೆ ನನಗೆ ಖಾತ್ರಿಯಿದೆ." ಎಂದು ನಿರ್ಮಲೆಯು ಅಂದಳು.

"ಯಾಕೆ ನರ್ಮದೆ, ನಿನ್ನಿಂದ ಮಂಗಳವಾರಗಳ ಆ ಒಂದೊತ್ತುಗಳು ಆಗಬಹುದಲ್ಲವೆ? ನೀನು ಅವುಗಳನ್ನು ಮಾಡಿಯಾದರೂ ನೋಡು, ಈ ಕಮಲಾ ಕಾಂತನ ಪ್ರಭಾವವೇನಿರುತ್ತದೆಂಬದನ್ನು."

'ಒಳ್ಳೇದು. ನಾನಿನ್ನು ಹೊರಡುತ್ತೇನೆ' ನರ್ಮದೆಯು ಎದ್ದು ನಿಂತು ನುಡಿದಳು.

"ಒಳ್ಳೇದು. ಹೊರಡು. ನಾನೂ ಇಂದಿನಿಂದ ಮಂತ್ರ ಜಪಿಸಲಿಕ್ಕೆ ಪ್ರಾರಂ ಭಿಸುತ್ತೇನೆ; ಯಾಕಂದರೆ ಸಂತಾನಪ್ರಾಪ್ತಿಯ ವಿಷಯದ ನಿನ್ನ ಹಣೆಯ್ಯ

ಮೇಲಿನ ವಿಧಿಲಿಖಿತವನ್ನು ನಾನು ಬದಲಿಸಬೇಕಾಗಿದೆ. ಅದೇನು ಸಾಮಾನ್ಯವಾದ ಮಾತಲ್ಲ" ಕಮಲಾಕಾಂತನು ಅಂದನು.

"ಸತ್ಯವೇನು? ಅಪ್ಪಯ್ಯಾ! ಅದು ಹೇಗೆ ಆದೀತು? ವಿಧಿಲಿಖಿತವನ್ನು ವಿಧಾತ ನಿಂದಲೂ ಬದಲಿಸಲಾಗುವದಿಲ್ಲೆಂದೆನ್ನುತ್ತಾರಲ್ಲ!" ನಿರ್ಮಲೆಯು ಆಶ್ಚರ್ಯವನ್ನು ಪ್ರದರ್ಶಿಸುತ್ತ ನುಡಿದಳು.

"ನಿರ್ಮಲೆ, ಬ್ರಹ್ಮದೇವನಿಂದಾಗತಕ್ಕದಲ್ಲವೇನೋ ನಿಜ; ಆದರೆ ನಮ್ಮಂತಹ ಹರಿಭಕ್ತರಿಗೆ ಅಶಕ್ಯವಾವುದೂ ಇಲ್ಲ ನಾವು ಇಂದ್ರ ಪದವಿಯನ್ನು ಅಪೇಕ್ಷಿಸಿದರೆ ಅದು ಕಾಲ ಕೆಳಗೆ ಬಂದು ಹೊರಳಾಡಹತ್ತೀತು. ಅಂದ ಬಳಿಕ ಈ ಸೊಟ್ಟ ವಿಧಿಲೇಖವನ್ನು ಅಳಿಸುವದರಲ್ಲೇನು ಚೋಜಿಗ? ನರ್ಮದೆ, ಇನ್ನೊಂದು ವರ್ಷದೊಳಗಾಗಿ ನಿನ್ನ ಕಂಕುಳಲ್ಲಿ ಮಗುವು ಕುಳಿತಿತೆಂದೇ ತಿಳಿ" ಎಂದು ಹೇಳಿದ ಕಮಲಾಕಾಂತನು ನಿರ್ಮಲೆಯ ಕಡೆಗೆ ಹೊರಳಿ 'ನಿರ್ಮಲೇ, ಕೋಣೆಯೊಳಗಿನದೊಂದು ಫಲವನ್ನು ಕೊಡು ನೋಡೋಣ' ಎಂದು ಅನ್ನಲು, ಗುರುಗಳ ಆಜ್ಞೆಯನ್ನು ಮನ್ನಿಸಲಿಕ್ಕೆ ಸದಾ ತತ್ಪರಳಾಗಿದ್ದ ನಿರ್ಮಲೆಯು ತಟ್ಟನೆ ಹೋಗಿ ಕೋಣೆಯೊಳಗಿನದೊಂದು ತೆಂಗಿನಕಾಯಿಯನ್ನು ತಂದು ಮಹಾರಾಜರ ಕೈಗಿತ್ತಳು. ಮಹಾರಾಜರು ಬಾಯಿಂದ ಏನೇನೋ ಪುಟು ಪುಟು ಎಂದು ಅನ್ನುತ್ತ, ಆ ಕಾಯಿಗೆ ಅರಿಸಿನ-ಕುಂಕುಮಗಳನ್ನು ಹಚ್ಚಿ, ನರ್ಮದೆಗೆ ಕುಂಕುಮ ಹಚ್ಚಿಕೊಳ್ಳಲಿಕ್ಕೆ ಹೇಳಿ, ಆ ಫಲವನ್ನು ಆಕೆಯ ಉಡಿಯಲ್ಲಿ ಹಾಕುತ್ತ—"ಹೋಗು, ನಿನ್ನ ಎಲ್ಲ ಕಾಮನೆಗಳೂ ಪೂರ್ಣವಾಗಲಿ" ಎಂದು ಆಶೀರ್ವದಿಸಿ, ದಿನಾಲು ಇಲ್ಲವೆ ದಿನಬಿಟ್ಟು ದಿನ ತಮ್ಮ ದರ್ಶನಕ್ಕೆ ತಪ್ಪದೆ ಬರಬೇಕೆಂದು ಅಪ್ಪಣೆಗೈದರು. ನರ್ಮದೆಯು ಅಲ್ಲಿಂದ ಹೊರಡಲನುವಾಗಲು, ಮಹಾರಾಜರ ಚರಣಗಳ ಮೇಲೆ ಮಸ್ತಕವಿರಿಸಿ ಹೊರಡಬೇಕೆಂದು ನಿರ್ಮಲೆಯು ನರ್ಮದಗೆ ಕಣ್ಣುಸನ್ನೆಯಿಂದ ಸೂಚಿಸಿದಳು. ಆ ಕೂಡಲೆ ನರ್ಮದೆಯು ಕಮಲಾಕಾಂತನ ಕಾಲುಗಳಿಗೆರಗಿದಳು. ಕಮಲಾಕಾಂತನು ನರ್ಮದೆಯನ್ನು ತನ್ನ ಎರಡೂ ಕೈಗಳಿಂದ ಹಿಡಿದೆತ್ತಿ ಅವಳನ್ನು ಪುನಃ ಪುನಃ ಆಶೀರ್ವದಿಸಿದನು!

ಬಳಿಕ ನರ್ಮದೆಯು ಅಲ್ಲಿಂದ ಹೊರಬಿದ್ದಳು. ಹೊರಗೆ ಬಂದ ಕೂಡಲೆ ನಿರ್ಮಲೆಯು:—ನರ್ಮದಕ್ಕಾ, ಈ ಫಲವನ್ನು ಜೋಕೆಯಿಂದ ಇಟ್ಟುಕೊಳ್ಳಿರಿ. ಮಹಾರಾಜರು ಇಂದು ನಿಮ್ಮ ಉಡಿಯಲ್ಲಿ ಈ ಫಲರೂಪೀ ಬಾಲಕನನ್ನೇ ಹಾಕಿರುತ್ತಾರೆ. ನರ್ಮದಕ್ಕಾ, ನೀವಿನ್ನು ಒಬ್ಬರೇ ಮನೆಗೆ ಹೊರಡುವಿರಷ್ಟೆ? ನಾನಿನ್ನು ಮಹಾರಾಜರ ಸೇವೆಗೆ ಹೊರಡುವೆನು"

"ನಿರ್ಮಲಕ್ಕಾ, ನೀವು ಒಳಗೆ ಹೋಗಿರಿ; ನಾನು ಹೋಗುತ್ತೇನೆ." ಎಂದು ಹೇಳಿ, ನರ್ಮದೆಯು ದಾರೀ ಹಿಡಿದಳು. ನರ್ಮದೆಯು ದಾರಿಯ ಒಂದು ಕಡೆಯಿಂದ ಭರಭರನೆ ಸಾಗಿದ್ದರೂ ಅವಳ ಚಿತ್ತವು ಅಲ್ಲಿರಲಿಲ್ಲ. ಇಂದು ತಾನು ಮಾಡಿದ ಕೆಲಸವು ಯೋಗ್ಯವಾಗಲಿಲ್ಲೆಂದು ಆವಳಿಗೆ ಅನಿಸಹತ್ತಿತು. ಕಮಲಾಕಾಂತನ ಮುಖ

ಚರ್ಯೆಯ ಮೇಲಿಂದ, ಸ್ಥಿತಿ-ಗತಿಗಳಿಂದ, ಆಚರಣೆಯಿಂದ, ಮಾತು-ಕತೆಗಳಿಂದ ಆತನು ಯೋಗ್ಯ ಮನುಷ್ಯನಲ್ಲೆಂದು ಆಕೆಯು ಭಾವನೆಯಾಯಿತು. ಅವನು ತನ್ನ ಕೈಹಿಡಿದದ್ದೂ, ತನ್ನ ಕೈಗಳಿಂದ ತನ್ನನ್ನು ಹಿಡಿದೆತ್ತಿದ್ದೂ ಮುಂತಾದ ಸಂಗತಿಗಳು ಅವಳಿಗೆ ಕೊಂಚವೂ ರುಚಿಸಲಿಲ್ಲ. ಇಂದು ತನ ಕೈಯಿಂದ ಇದೊಂದು ಪಾಪಕರ ಸಂಗತಿಯೇ ಘಟಿಸಿತೆಂದು ಮನಸ್ಸಿನಲ್ಲಿ ಕುದಿಯುತ್ತ ಮನೆಯನ್ನು ಪ್ರವೇಶಿಸಿದಳು. ಸಾಧುವಿನ ಅಪ್ಪಣೆಯ ಮೇರೆಗೆ ನರ್ಮದೆಯು ಮುಂದೆ ದಿನಾಲು ಅವನೆಡೆಗೆ ಹೋಗ ಹತ್ತಿದಳು. ಮುಂದೊಂದು ದಿನ ನರ್ಮದೆಯು ಕಮಲಾಕಾಂತನ ವಾಸ್ತವ್ಯಸ್ಥಳದಿಂದ ಮನೆಗೆ ಹಿಂತಿರುಗುವಷ್ಟರಲ್ಲಿ ಕುಮುದಿನಿಯು ತನ್ನ ತವರೂರಿಂದ ಅಲ್ಲಿಗೆ ಬಂದಿದ್ದು, ಅವಳು ಮನೆಯೊಳಗಿನ ಅಕ್ಕಿ-ಬೇಳೆಗಳನ್ನು ಹಸನಮಾಡುತ್ತಿದ್ದಳು. ಕುಮುದಿನಿಯನ್ನು ಕಂಡೊಡನೆಯೇ ನರ್ಮದೆಯ ಮುಖವು ತೇಜೋವಿಹೀನವಾಯಿತು. ಅವಳು ಹಾಗೆಯೇ ಚಟಕ್ಕನೆ ಅಟ್ಟದ ಮೇಲಿನ ತನ್ನ ಕೋಣೆಗೆ ಹೋದಳು. ಕುಮುದಿನಿಯು ತಲೆ ಕೆಳಗೆ ಹಾಕಿಕೊಂಡು ಅಕ್ಕಿಯನ್ನು ಹಸನಮಾಡುತ್ತಿದ್ದುದರಿಂದ ಆ ಸಂಗತಿಯು ಅವಳ ಲಕ್ಷ್ಯಕ್ಕೆ ಬರಲಿಲ್ಲ. ನೆಘೆಣ್ಣಿಯ ಯಾವ ಉಸಾಬರಿಗೂ ಹೋಗದೆ ಅವಳು ಸಂಜೆಯ ಅಡಿಗೆಗೆ ಪ್ರಾರಂಭಿಸಿದಳು. ನರ್ಮದೆಯು ಅಟ್ಟವನ್ನೇರಿ ತನ್ನ ಕೋಣೆಯನ್ನು ಹೊಕ್ಕು ಒಳಚಿಲಕ ಹಾಕಿಕೊಂಡು ಕುಳಿತವಳು. ಅಂದು ರಾತ್ರಿಯ ಊಟಕ್ಕೆ ಕೂಡ ಹೊರಹೊರಡಲಿಲ್ಲ. 'ದಿನಾಲು ಸಾಯುವವರಿಗೆ ಅಳುವವರಾರು?' ಎಂಬಂತೆ ಶಂಕರರಾಯನು ಆಕೆಯ ಬಗ್ಗೆ ಹೆಚ್ಚು ಪೃಚ್ಛಾಪೃಚ್ಛೆ ಮಾಡಲಿಲ್ಲ. ಊಟ ಮಾಡಿ ಅವನು ತನ್ನ ಕೋಣೆಯಲ್ಲಿ ವೃತ್ತಪತ್ರಗಳನ್ನೋದುತ್ತ ಕುಳಿತನು. ಕುಮುದಿನಿಯು ಅಡಿಗೆಯ ಮನೆಯ ಕೆಲಸಗಳನ್ನೆಲ್ಲ ತೀರಿಸಿಕೊಂಡು ಯೋಗ್ಯ ಗಂಡನೋದುತ್ತಿದ್ದ ವರ್ತಮಾನಪತ್ರದ ಕಡೆಗೆ ನೋಡುತ್ತ ಕುಳಿತಳು. ಕುಮುದಿನಿಯು ಹತ್ತರ ಬಂದು ಕೂಡ್ರುತ್ತಲೆ ಶಂಕರರಾಯನು ಅವಳನ್ನು ತಬ್ಬಿಕೊಂಡು: "ಎಲ್ಲ ಕೆಲಸವೂ ಆಯಿತೆ!" ಎಂದನು.

"ಆಯಿತು; ಆದರೆ ಈ ವರ್ತಮಾನ ಪತ್ರದಲ್ಲಿ ಹೊಸಸುದ್ದಿಗಳೇನಿವೆ? ನೋಡೋಣ" ಎಂದು ಪತ್ರವನ್ನು ಓದಹತ್ತಲು, ಶಂಕರರಾಯನು ಆಕೆಯನ್ನು ತಡೆದು: "ಕುಮುದಿನೀ, ಇದರಲ್ಲೇನಿದೆ? ಅಲ್ಲಿ ಹಿಂದೂ-ಮುಸಲ್ಮಾನರಲ್ಲಿ ದೊಂಬಿಯಾಯಿತು. ಇಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರಲ್ಲಿ ವಿತುಷ್ಟವುಂಟಾಯಿತು. ಆ ಚಳವಳಿಗಾರನಿಗೆ ಶಿಕ್ಷೆಯಾಯಿತು. ಮುಂತಾದ ಸಂಗತಿಗಳೇ ತುಂಬಿವೆ. ಇದರಿಂದ ನಮ್ಮ ಮನಸ್ಸಿಗೆ ಸಮಾಧಾನವೇನಾಗಬೇಕು?"

"ಹಾಗಾದರೆ ನಿಮಗೆ ಏತರಿಂದ ಸಮಾಧಾನವಾಗುವದು?"

"ಕಮುದಿನೀ, ಈಗಿನ ನಮ್ಮ ಮನೆಯ ಸ್ಥಿತಿಯನ್ನೇ ನೋಡು. ನಮ್ಮ ಮನೆಯಲ್ಲಿ ಈಗ ಎಂಕ, ನಣ, ಶೀನರಂತೆ ನಾವು ಮೂವರೇ ಇರುತ್ತೇವೆ. ಅಣ್ಣನು ಹೈದ್ರಾಬಾದಿಗೆ ಹೋಗಿ ಎಂಟು ದಿನಗಳಾದರೂ ಒಂದೂ ಪತ್ರ ಬರಲಿಲ್ಲ. ಮನೆ

ಯಲ್ಲಿ ಯಾತಕ್ಕೂ ಕೊರತೆಯಿರದಿದ್ದರೂ ಅತ್ತಿಗೆಯ ವಿಚಿತ್ರ ಸ್ವಭಾವದ ಮೂಲಕ ಮನೆಯಲ್ಲಿ ಯಾರಿಗೂ ಸಮಾಧಾನವಿಲ್ಲ. ಪ್ರತಿನಿತ್ಯ ಯಾವುದೊಂದು ಹೊಸ ಗೊಂದಲವು ಇದ್ದೇ ಇದೆ. ಅಂಮಬಳಿಕ ನಮ್ಮಂತಹ ಮೂರು-ನಾಲ್ಕು ಜನರ ಮನೆ ಯಲ್ಲೇ ಇಷ್ಟು ಅಶಾಂತಿ-ಅಸಡ್ಡೆಗಳು ನೆಲೆಸಿರಲು, ಅವು ಇಡೀ ದೇಶದಲ್ಲಿ ಎಷ್ಟು ನೆಲಿಸಿರಬೇಕು? ಹಾಗೆ ಅಶಾಂತಿಯಿದ್ದಲ್ಲಿ ದೊಂಬಿ, ವಿಕೃತ ತೆಗಳುಂಟಾಗುವದು ಅಸ್ವಾಭಾವಿಕ ಇಲ್ಲವೆ ಆಶ್ಚರ್ಯದ ಸಂಗತಿಗಳೇನು?"

"ಅಂತೆಯೇ ಎಲ್ಲ ಚಿಕ್ಕ ಹುಡುಗರಿಗೆ ಸ್ಕೂಲು-ಕಾಲೇಜುಗಳಲ್ಲಿಯೂ ಮನೆ-ಮಠಗಳಲ್ಲಿಯೂ ಐಕ್ಯಶಿಕ್ಷಣದ ಗುಟ್ಟಿಯನ್ನು ಹಾಕಬೇಕು."

"ಆದರೆ ಇತ್ತೀಚೆಗೆ ಮನೆಮನೆಗೂ ಅದಕ್ಕೆ ವಿಪರೀತ ಸ್ಥಿತಿಯೇ ದೃಗ್ಗೋಚರ ವಾಗುತ್ತಿದೆ. ಈ ಭಾಗಾದಿತನದ ಮಹಾಮಾಯೆಯು ನಮ್ಮ ದೇಶದಲ್ಲಿ ಕಾಯಮ ವಾಗಿ ನೆಲಿಸಿರುವದರಿಂದ ಹುಡುಗರ ಎಳೆಮನಸ್ಸಿನ ಮೇಲೆ ಸುಪರಿಣಾಮದ ಬದಲು ಭಾಗಾದಿತನದ ದುಷ್ಪರಿಣಾಮವನ್ನೇ ಉಂಟು ಮಾಡುತ್ತದೆ; ಹಾಗು ಅವು ದೊಡ್ಡ ವಾದ ಹಾಗೆ ಅವುಗಳಲ್ಲಿಯ ಆ ಗುಣವೂ ವಿಸ್ತಾರಗೊಳ್ಳುತ್ತಿರುತ್ತದೆ."

"ಅಂತೆಯೇ 'ಕಂಡೂ ಕಾಣದ' 'ತಿಳಿದೂ ತಿಳಿಯದ' ಸ್ಥಿತಿಯು ಬಲ್ಲವರಿಗೆ ಕೂಡ ಪ್ರಾಪ್ತವಾಗುತ್ತದೆ ಇತ್ತೀಚೆಗೇಕೆ ಮೊದಲಿನಿಂದಲೂ ಪ್ರತಿಯೊಂದು ಸಮಾಜ ದೊಳಗಿನ ಕೆಲವೊಂದು ವಿಶಿಷ್ಟ ವರ್ಗವು ಇಂಥ ನಿಂದ್ಯಗುಣಗಳ ಧಾರಣ ಪೋಷಣ ಪ್ರಸರಣಗೊಳಿಸುತ್ತಿರುತ್ತದೆ ಆ ವರ್ಗದಲ್ಲಿ ಗಂಡಸರಂತೆ ಹೆಂಗಸರೂ ಮುಖಂಡ ರಾಗಿರುತ್ತಾರೆ. ಆ ವರ್ಗದವರು ಮನುಷ್ಯರ ಪ್ರಜ್ಞೆ=ತಿಳುವಳಿಕೆಯನ್ನು ಸಂಹರಿಸಿ ಬಿಡುತ್ತಿರುತ್ತಾರೆ. ನಮ್ಮ ಅಕ್ಕ ನರ್ಮದಾಬಾಯಿಯವರ ಬಳಿಗೆ ಬರುತ್ತಿರುವ ಆ ನಿರ್ಮಲಾ ಶರಣಮ್ಮನು ಅದೇ ವರ್ಗದವಳಾಗಿ ತೋರುತ್ತಾಳೆ. ಅವಳ ಸಹವಾಸ ವಾದಂದಿನಿಂದಲೇ ನಮ್ಮ ನರ್ಮದಕ್ಕನು ಈ ಬಗೆಯ ಹುಚ್ಚುಚ್ಚಾಗಿ ವರ್ತಿಸಹತ್ತಿರು ತ್ತಾಳೆ. ಆ ನಿರ್ಮಲಮ್ಮನೂ ಇವರೂ ಮಾತಾಡುತ್ತಿರುವಾಗ ನಾನೊಂದು ದಿನ ಮರೆಗೆ ನಿಂತು ಕೇಳಲು, ನನಗೆ ಆ ಬಗ್ಗೆ ಹಲವು ವಿಷಯಗಳು ತಿಳಿದಿರುತ್ತವೆ."

"ಕುಮುದಿನೀ, ನೀನು ಕೇಳಿ ತಿಳಿದ ಸಂಗತಿಗಳಾವವು? ಮರೆಮಾಜದೆ ತಿಳಿಸು." ಎಂದು ಶಂಕರರಾಯನು ಕೇಳಲು,

"ಆ ನಿರ್ಮಲೆಯು ನಮ್ಮ ನರ್ಮದಕ್ಕನನ್ನು ತಮ್ಮ ಗುರುಗಳ ವನಿತಾ ಭಾಂಡಾರದಲ್ಲಿ ಸೇರಿಸಿಕೊಂಡಿರುವಳಂತೆ! ಆ ಗುರುಗಳ ಪ್ರಸಾದದಿಂದ ನಮ್ಮ ನರ್ಮ ದಕ್ಕನಿಗೆ ಬೇಗನೆ ಪುತ್ರರತ್ನವಾಗುವದಂತೆ. ಇತ್ಯಾದಿ ಇತ್ಯಾದಿ"

"ಗುರುಗಳ ವನಿತಾಭಾಂಡಾರವೆಂದರೇನು? ಅದನ್ನೊಮ್ಮೆ ಕಣ್ಮುಟ್ಟ ನೋಡಿ ಪರೀಕ್ಷಿಸಲೇಬೇಕು" ಎಂದು ಶಂಕರರಾಯನು ತನ್ನಷ್ಟಕ್ಕೆ ತಾನೇ ಅಂದುಕೊಂಡನು.

———

# ಕಮಲಾಕಾಂತನ ಪೂರ್ವವೃತ್ತ.

ಇತ್ತೀಚೆಗೆ ವಿಜಾಪುರಕ್ಕೆ ಯಾವನೋ ಒಬ್ಬ ಸುಪ್ರಸಿದ್ಧ ಪುರಾಣಿಕನ ಆಗಮನ ವಾಗಿತ್ತು. ಆತನ ಪುರಾಣದ ಜೀವಂತ ನೋಟೀಸುಗಳು ಮನೆಮನೆಗೂ ಹೆಚ್ಚ ಹತ್ತಿದ್ದವು ಮನೆಗೆಲಸಗಳನ್ನು ದುರ್ಲಕ್ಷಿಸಿ ಒಳ್ಳೇ ಆಸ್ಥೆಯಿಂದ ಆ ಪುರಾಣಕ್ಕೆ ದಿನವಹಿ ಹೋಗುತ್ತಿದ್ದ ಬಹುಜನ ವಿಧವೆಯರೂ ಕೆಲಜನ ಸಧವೆಯರೂ ಆ ಪುರಾಣಿಕರ ಜೀವಂತ ನೋಟೀಸುಗಳು. ಲಕ್ಷಾವಧಿ ಶುಭ್ರ ಕಾಗದದ ಮೇಲೆ ಮುದ್ರಿಸಿದ ಹಸ್ತಪತ್ರಿಕೆಗಳಿಂದಾಗದ ಕೀರ್ತನ-ಪುರಾಣಿಕರ ಪ್ರಚಾರ ಕಾರ್ಯವು ನಾಲ್ಕೆಂಟು ಜನ ರಕ್ತವಸ್ತ್ರ ಧರಿಸಿನ ಸ್ತ್ರೀಯರಿಂದ ಸಹಜವಾಗಿ ಆಗುತ್ತಿರುತ್ತದೆಂಬದು ಅನುಭವ ಸಿದ್ಧವಾದ ಸಂಗತಿಯು. ವಿಜಾಪುರದ ಶ್ರೀ ವೆಂಕಟರಮಣನ ಗುಡಿಯಲ್ಲಿ ಇಂದು ಹೆಚ್ಚು ಜನ ಹೆಂಗಳೆಯರು ಆ ಪುರಾಣಿಕರ ಬಾಯಿಪುರಾಣ ಕೇಳಲಿಕ್ಕೆ ಕಲೆತಿದ್ದರು. ಭವಾನರಾಯನ ಹೆಂಡತಿಯಾದ ಸರಸಿಯೂ ಇಂದು ತನ್ನ ಓಣಿಯ ಕೆಲ ಜನ ಹೆಂಗಸರೊಡನೆ ಅಲ್ಲಿಗೆ ಬಂದಿದ್ದಳು. ಪುರಾಣಿಕರು ೨೫-೩೦ ವಯಸ್ಸಿನ ತರುಣರು. ವ್ಯುತ್ಪನ್ನರು. ಮಧುರವಾದ ಕಂಠ ಪುರಾಣ ಹೇಳುವ ಶೈಲಿಯು ಚೆನ್ನಾಗಿತ್ತು. ಪುರಾಣ ಹೇಳುವಾಗ ಓಘದಿಂದ ಮಾಡುತ್ತಿದ್ದ ಹಾವಭಾವ, ನೇತ್ರಸ್ಫುರಣ ಮುಂತಾದವುಗಳಿಂದ ಅವರು ಸ್ತ್ರೀಶ್ರೋತೃವರ್ಗಕ್ಕೆ ಒಳ್ಳೇ ಮೆಚ್ಚಿನವರಾಗಿದ್ದರು. ಪುರಾಣದ ವಿಷಯ ಹರಿಲೀಲಾಮೃತ ಅಂದಬಳಿಕ ಕೇಳುವದೇನು? ಎಂಥ ವೃದ್ಧ ಪುರಾಣಿಕನಿಗಾದರೂ ಅದನ್ನು ಸ್ತ್ರೀ ಸಮೂಹದ ಮುಂದೆ ಹೇಳಲಿಕ್ಕೆ ಸ್ಫುರಣವುಂಟಾಗುತ್ತಿರಲು, ನಮ್ಮ ಆ ತರುಣ ಪುರಾಣಿಕರಿಗೆಷ್ಟು ಹುರುಪು ಉಂಟಾಗಿದ್ದೀತು?

ಆ ಪುರಾಣಿಕನು ಪುರಾಣದ ವಿಷಯದಲ್ಲಿ ಉಪಕಥೆಯೆಂದು ಕೆಲ ಜನ ಸಾಧು-ಸತ್ಪುರುಷರ ವರ್ಣನಪರ ಸಂಗತಿಗಳನ್ನು ಹೇಳುತ್ತಿದ್ದನು ಅಂದಿನ ಆತನ ಆ ಉಪಕಥೆಯು ಕಮಲಾಕಾಂತ ಸಾಧುವಿಗೆ ಸಂಬಂಧಿಸಿದ್ದಿತ್ತು, ಆ ಸಾಧುವಿನ ಲೌಕಿಕ-ಪಾರಮಾರ್ಥಿಕ ಯೋಗ್ಯತೆಯನ್ನು ಹೊಗಳುವಂತಹದಾಗಿತ್ತು. ಆ ಸಾಧುವಿನ ಬ್ರಹ್ಮನಿಷ್ಠತೆ, ನಿರ್ಲೋಭತ್ವ, ಅದಾಂಭಿಕತ್ವ ಮುಂತಾದ ಸಂಗತಿಗಳನ್ನು ಪ್ರಕಟಿಸಿ ಆತನು ಜನರನ್ನು ದಂಗು ಬಡಿಸಿದನು. ಹೇಳ ಹೇಳುತ್ತ ಆತನು ಕಮಲಾಕಾಂತನ ಪೂರ್ವವೃತ್ತವನ್ನೂ ಹೇಳಿದನು. ಅದು ಬಹು ಸ್ವಾರಸ್ಯವಾಗಿರುವದರಿಂದ ನಮ್ಮ ವಾಚಕರಿಗಾಗಿ ಅದನ್ನು ಇಲ್ಲಿ ಅವತರಿಸಿಕೊಳ್ಳುತ್ತೇವೆ:—

"ಈ ಕಮಲಾಕಾಂತ ಸಾಧುಗಳ ಅಜ್ಜ-ಮುತ್ತಜ್ಜಂದಿರು ಯಾರು ಇದ್ದರೋ ತಿಳಿಯದು. ಅವರ ತಂದೆಯು ಮಾತ್ರ ಹೀನಕುಲೋತ್ಪನ್ನನಾದ ಬ್ರಾಹ್ಮಣವರ್ಗಕ್ಕೆ ಸೇರಿದವನು. ಈ ಸಾಧುವು ಭೂಮಿಗೆ ಅವತರಿಸಿ ಬರುವದಕ್ಕಿಂತ ಕೆಲವು ತಿಂಗಳು

ಮುಂಚೆಯೇ ಆತನು ಅಗಲಿಕೊಂಡದ್ದರಿಂದ ತಾಯಿಯೇ ಇವರ ಸಂರಕ್ಷಣೆಯ ಭಾರವನ್ನೆಲ್ಲ ವಹಿಸಬೇಕಾಯಿತು. ಇವರು ಬೃಹಸ್ಪತಿಯಂತೆ ಹುಟ್ಟಾ ಮಹಾ ಬುದ್ಧಿವಂತರು; ಆದರೆ ಜನಸಂದರ್ಶನಕ್ಕಾಗಿ ಇವರು ಪೆದ್ದರಂತೆ ವರ್ತಿಸುತ್ತಿದ್ದರು. ಇವರು ೮-೧೦ ವರ್ಷದವರಾದರೂ ಇವರಿಗೆ ಸ್ವಚ್ಛತೆ ಏನೆಂಬುದು ತಿಳಿಯುತ್ತಿರಲಿಲ್ಲ. ಕುಳಿತಾಗ, ನಿಂತಾಗ, ಓಡಾಡುವಾಗ ಕೂಡ ಇವರು ಯಾವ ಬಗೆಯ ಸಂಕೋಚವನ್ನೂ ತಾಳದೆ ಮಲ-ಮೂತ್ರಗಳನ್ನು ಬೇಕಾದಲ್ಲಿ ವಿಸರ್ಜಿಸುತ್ತಿದ್ದರು. ಇವರು ಪರಬ್ರಹ್ಮಸ್ವರೂಪರಾದ್ದರಿಂದ ಹೊಟ್ಟೆ ಹಸಿವೆಂಬುದರ ಜ್ಞಾನವೇ ಇವರಿಗಾಗುತ್ತಿದ್ದಿಲ್ಲ. ಅದರಿಂದ ಇವರು ಚಿಕ್ಕಂದಿನಲ್ಲಿ ಪಙ್ಕ್ತಿಗೆ ಕುಳಿತು ಉಂಡದ್ದನ್ನು ನೋಡಿದವರೇ ವಿರಳವೆನ್ನಬಹುದು. ಹಸಿವೆಯಾದಾಗ ಯಾವುದೊಂದು ಗಿಡದ ತೊಪ್ಪಲು, ಕಾಯಿ-ಹಣ್ಣುಗಳನ್ನು ಇವರು ಒಮ್ಮೊಮ್ಮೆ ತಿಂದರೆ, ಹಲವು ಸಾರೆ ತಮ್ಮ ಮನೆಯಲ್ಲಾಗಲಿ ಓಣಿಯೊಳಗಿನ ಬೇಕಾದ ಜಾತಿಯವರ ಮನೆಯಲ್ಲಾಗಲಿ ಹೊಕ್ಕು ಮುಚ್ಚಿಟ್ಟ ಅನ್ನ, ರೊಟ್ಟಿ, ಹೋಳಿಗೆ, ಉಂಡಿಗಳನ್ನಷ್ಟೇ ಅಲ್ಲ, ಎಷ್ಟೋ ಅಖಾದ್ಯ ಪದಾರ್ಥಗಳನ್ನು ಕೂಡ ಹೆರವರಿಗೆ ಸುಳುವು ಹತ್ತದ ಹಾಗೆ ಇವರು ತಿಂದು ಹೋಗುತ್ತಿದ್ದರು. ಈ ಮಹನೀಯರನ್ನು ಸಾಲೆಗೆ ಕಳಿಸಬೇಕೆಂದು ಇವರ ತಾಯಿಯೂ ಹಿತಚಿಂತಕರೂ ಬೇಕಾದಷ್ಟು ಪ್ರಯತ್ನಪಟ್ಟರೂ ಇವರು ತಮ್ಮ ೧೫ ವಯಸ್ಸಿನ ವರೆಗೆ ಸಾಲೆಯ ಕಡೆಗೆ ಹಣಿಕಿ ಹಾಕಲಿಲ್ಲ. ಆ ಮೇಲೆ ಯಾವಾಗಾದರೊಮ್ಮೆ ಸಾಲೆಗೆ ಹೋದರೂ ಓದು ಬರಹದ ಕಡೆಗೆ ಇವರ ಲಕ್ಷ್ಯವೇ ಇರಲಿಲ್ಲ. ಬೇರೆ ಹುಡುಗರ ಪಾಟಿ-ಪುಸ್ತಕಗಳನ್ನು ಕಳುವು ಮಾಡುವುದೂ, ಮಾಸ್ತರರ ಕಣ್ಣು ತಪ್ಪಿಸಿ ಸಾಲೆಯೊಳಗಿನ ಬೆಲೆಯುಳ್ಳ ಪದಾರ್ಥಗಳನ್ನು ಎತ್ತಿ ಹಾಕುವುದೂ ಕೆಡಿಸುವುದೂ ಮುರಿಯುವದೂ ಹರಿಯುವುದೂ ಇವೇ ಇವರ ಅಗಾಧ ವಿದ್ಯಾರ್ಜನಗಳಾಗಿದ್ದವು. ಈ ಕಿಡಿಗೇಡಿತನದ ಮೂಲಕ ಇವರನ್ನು ಬೇರೆ ಹುಡುಗರೂ ಉಪಾಧ್ಯಾಯರೂ ವೈ ಮುರಿ ಥಳಿಸಿದರೂ ಇವರಿಗೆ ಅದರ ಎಗ್ಗು ಇರುತ್ತಿರಲಿಲ್ಲ.

ಹೀಗೆ ಇವರು ಪ್ರಸಿದ್ಧ ಉಡಾಳರಾಗಿ ತಮ್ಮ ವಯಸ್ಸಿನ ಇಪ್ಪತ್ತು ಇಪ್ಪತ್ತೈರ ಮನೆಗೆ ತಲುಪಿದರು. ಇವರು ಹುಟ್ಟಾ ಅವತಾರಿಕಪುರುಷರಾದುದರಿಂದ ಇವರ ಮೋರೆಯ ಮೇಲಿನ ತೇಜವು ವಿಶೇಷ ಪ್ರಕಾರದ್ದಾಗಿತ್ತು. ಅದರಿಂದ ಇವರನ್ನು ಕಂಡು ಮೋಹಗೊಳ್ಳದ ಹೆಂಗಸರಿರಲಿಲ್ಲವೆಂದರೆ ಅತಿಶಯೋಕ್ತಿಯೆನಿಸದು. ಹೀಗೆ ಇವರು ವಿದ್ಯೆ-ಬುದ್ಧಿಗಳಿಲ್ಲದವರಂತೆ ಸದಾ ಕಿಡಿಕೇಡಿತನದಲ್ಲಿಯೂ ಹೆಂಗಸರ ಸಹವಾಸದಲ್ಲಿಯೂ ಕಾಲಹರಣ ಮಾಡುತ್ತಿರುವುದನ್ನು ಕಂಡು ಜನರು ಇವರನ್ನು ಹಲವು ಬಗೆಯಿಂದ ಆಡಿಕೊಳ್ಳಲಾರಂಭಿಸಿದರು. ಆಗ ಜನರು ಇವರನ್ನು ಆಡಿಕೊಳ್ಳುವದನ್ನು ನೆನಿಸಿದರೆ, ಎಂಥವನಾದವರೂ ಸುಜ್ಞನಾಗಿ ತಕ್ಕಮಾರ್ಗದಿಂದ ನಡೆಯಬಹುದಾಗಿತ್ತು; ಆದರೆ ಈ ಅವತಾರಿಕ ಮಹಾಪುರುಷರಿಗೆ ಜನರ ಆ ಆಡಿಕೊಳ್ಳುವುದರಿಂದೇನು ಆಗಬೇಕಾಗಿತ್ತು?

ಶ್ರೋತೃಗಳೇ, ಸಾಧುಗಳು, ಸತ್ಪುರುಷರು, ಅವತಾರಿಕರು ಮೊದಲಾದವರು ತಾವಾಗಿಯೇ ಪ್ರಸಿದ್ಧರಾಗುವದು ಕೇವಲ ವಿರಳ. ನಿಜವಾದ ಸತ್ಪುರಷರೂ ಅವ ತಾರಿಕರೂ ಜನಸಮ್ಮರ್ದದಿಂದ ಶಕ್ಯವಾದಷ್ಟು ದೂರವಾಗಿದ್ದು, ಜಗತ್ಕಲ್ಯಾಣ ಕರ್ತೃವಾದ ಭಗವಂತನ ಧ್ಯಾನಾಸಕ್ತರಾಗಿರುತ್ತಾರೆ. ಶ್ರೀ ಶಿವಛತ್ರಪತಿಯ ಕಾಲದ ಒಬ್ಬ ಮರಾಠಾ ಯೋಧನು ಉಪರತಿ ಹೊಂದಿ ಹಿಮಾಲಯದಲ್ಲಿ ತಪಸ್ಸನ್ನಾಚರಿ ಸುತ್ತಿದ್ದು, ಆತನು ಮೊನ್ನೆ ಮೊನ್ನೆ ಯಾವನೋ ಒಬ್ಬ ಪ್ರವಾಸಿಗನಿಗೆ ಹಿಮಾಲಯ ದಲ್ಲಿ ಆಕಸ್ಮಿಕವಾಗಿ ಭೇಟಿಯಾಗಿ ತನ್ನ ಕಾಲದ (೩೦೦ ವರ್ಷಗಳ ಪೂರ್ವದ) ಯುದ್ಧ ಮುಂತಾದವುಗಳ ಸಂಗತಿ ತಿಳಿಸಿದ್ದನ್ನು ವಾಚಕರು ವೃತ್ತಪತ್ರಗಳ ಮೂ-ಲಕ ತಿಳಿದಿರಬಹುದಾಗಿದೆ. ಅಂಥ ಎಷ್ಟೋ ಮಹಾಪುರುಷರು ಗವಿ-ಗಹ್ವರಗಳನ್ನು ಸೇರಿ ಜಗತ್ಕಲ್ಯಾಣಕ್ಕಾಗಿ ಶ್ರೀ ಜಗದೀಶನನ್ನು ಕುರಿತು ಆರಾಧಿಸುತ್ತಿರುತ್ತಾರೆ. ಉಚ್ಚ ತರಗತಿಯ ಸತ್ಪುರುಷರು ಲೋಕದ ಜನರೊಡನೆ ಕೂಡಿ ಚಿರಕಾಲವಿರುವದು ಅಶಕ್ಯ-ಅಸಂಭವ ಸಂಗತಿಯೇ ಆಗಿರುತ್ತದೆ. ಅಂಥವರಿಗೆ ಲೋಕದವರ ಆದರೋಪ ಚಾರಗಳಾಗಲಿ, ದೊಡ್ಡಸ್ತಿಕೆಯಾಗಲಿ ಬೇಕಾಗಿರುವದಿಲ್ಲ. ದೊಡ್ಡಸ್ತಿಕೆಯನ್ನೂ ಪ್ರೌಢಿಮೆಯನ್ನೂ ಬಯಸಿ ನಮ್ಮಗಳ ಜೊತೆಗೆ ವಾಸಿಸುತ್ತಿರುವ ಸತ್ಪುರುಷರ ತರ ಗತಿಯು ನಿಜವಾದ ಸತ್ಪುರುಷರ ತರಗತಿಗಿಂತ ಕಡಿಮೆ ವರ್ಗದ್ದೆಂದು ಧಾರಾಳವಾಗಿ ಹೇಳಬಹುದು.

ಯಾರೊಬ್ಬ ಸಾಧು-ಸತ್ಪುರುಷರು, ಅವತಾರಿಕರು ತಪ್ಪಿತಪ್ಪಿ ಜನರಲ್ಲಿ ಕಲೆ ತಾಗ ಆವರ ನಿಜವಾದ ಪ್ರಭಾವವು ಬಹು ಬೇಗನೆ ಜನನಿದರ್ಶನಕ್ಕೆ ಬರುತ್ತದೆ. ಹಾಗು ಆದರಿಂದ ಮೋಹಿತರಾದ ಜನರು ತಂಡತಂಡವಾಗಿ ಅವರ ಸಹವಾಸದಲ್ಲಿರ ಲಿಕ್ಕೆ ನುಗ್ಗುತ್ತಿರುತ್ತಾರೆ. ಉಚ್ಚತರಗತಿಯ ಸಾಧು-ಸತ್ಪುರುಷರಾಗಲಿ ಅವತಾರಿಕ ರಾಗಲಿ ಜನಸಮ್ಮರ್ದವು ಹೆಚ್ಚಾಗಹತ್ತಿದ ಕೂಡಲೆ ಅಲ್ಲಿಂದ ಯಾವದೊಂದು ಬಗೆ ಯಿಂದ ಕಾಲ್ತೆಗೆದು ಮಾಯವಾಗಿ ಬಿಡುತ್ತಿರುತ್ತಾರೆ; ಆದರೆ 'ಕಚ್ಚಾ' ಅವತಾರಿಕರು ಅಥವಾ ಸಾಧು-ಸತ್ಪುರುಷರು ತಮಗಾಗಿ ಜನರು ತೋರಿಸುವ ಆದರೋಪಚಾರ ಗಳಿಗೆ ಮನಸೋತು ಅಲ್ಲಿಯೇ ಉಳಿದು ಬಿಡುತ್ತಾರೆ.

ಲೋಕದ ತ್ರಿಗುಣಾತ್ಮಕ ಜನರಲ್ಲಿ ಸಾಧು-ಸತ್ಪುರುಷರು, ಅವತಾರಿಕರು ಇಂತಹರನ್ನು ಬೆಳಕಿಗೆ ತರುವ ಒಂದು ವರ್ಗದ ಜನರಿರುತ್ತಾರೆ. ಖನಿಗಳೊಳಗಿನ ಲೋಹ ತುಂಡುಗಳೊಳಗಿಂದ ಬಂಗಾರ, ವಜ್ರ, ರತ್ನಗಳನ್ನು ಪರೀಕ್ಷಿಸಿ ತೆಗೆಯುವ 'ಒರೆಗಲ್ಲು' ಎಂಬ ಕಲ್ಲು ಇರುವಂತೆ ಈ ಜನರು ಸಾಧು-ಸತ್ಪುರುಷರು, ಅವತಾರಿಕರು ಇವರನ್ನು ಆರಿಸಿ ತೆಗೆಯುವ ಒರೆಗಲ್ಲಂತಿರುತ್ತಾರೆ. ಈ ಒರೆಗಲ್ಲಿನ ವರ್ಗದ ಜನರು ಸಾಮಾನ್ಯ ಜನರಿಗಿಂತ ಯಾವದೊಂದು ಅಥವಾ ಹಲವು ಬಗೆಯಿಂದ ಚುರುಕು ಬುದ್ಧಿಯವರಾಗಿರುತ್ತಾರೆ. ಅವರು ಶಾಸ್ತ್ರ, ಧರ್ಮ, ವೇದ, ವೇದಾಂತಗಳಲ್ಲಿಯು ಸತ್ಪುರುಷರ, ಅವತಾರಿಕರ ನಿಜಲಕ್ಷಣಗಳನ್ನು ಬಲ್ಲವರಾಗಿರುತ್ತಾರೆ. ಸ್ವತಃ ಆ

ಒರೆಗಲ್ಲ ಸ್ವರೂಪದ ಜನರಲ್ಲ 'ಉಪರತಿ' ಎಂಬ ಸಾಧು-ಸತ್ಪುರುಷರಲ್ಲಿ ಅತ್ಯಗತ್ಯವಾದ ಸದ್ಗುಣವು ಮಾತ್ರ ಇರುತ್ತಿರುವದಿಲ್ಲ. ಅದರಿಂದ ಅವರ ಲೌಕಿಕ ಆಶೆಯು ಮಿಕ್ಕ ಜನರಿಗಿಂತ ಮಿತಿಮೀರಿರುತ್ತದೆ. ಆಶೆ-ಲೋಭ ಮುಂತಾದವುಗಳ ಹೆಚ್ಚಳದ ಮೂಲಕ ಅವರಿಗೆ ಪರಮಾರ್ಥದ ಬಗ್ಗೆ ಮನಸಾ ತಿರಸ್ಕಾರವುಂಟಾಗಿರುತ್ತದೆ; ಆದರೆ ತಮ್ಮ ಲೌಕಿಕ, ಆಶೆ, ಲೋಭ, ಮೋಹಗಳ ಹೆಚ್ಚಳವನ್ನುಂಟುಮಾಡಿಕೊಳ್ಳುವದಕ್ಕಾಗಿಯೇ ಅವರು ಸಾಧು-ಸತ್ಪುರುಷರು ಅಥವಾ ಅವತಾರಿಕರನ್ನು ತಮ್ಮ ಕೈಗೊಂಬೆಯನ್ನಾಗಿ ಮಾಡಿಕೊಳ್ಳುತ್ತಾರೆ; ಹಾಗು ತಮ್ಮ ಬುದ್ಧಿಪ್ರಭಾವದಿಂದ ಆ ಸಾಧು-ಸತ್ಪುರುಷ ಅಥವಾ ಅವತಾರಿಕರ ಪುಚ್ಛಗಳನ್ನು ಬಲಿಸಿ, ಸಮಾಜದವರಲ್ಲಿ ಅವರ ವಿಷಯದ ನಾನಾ ಬಗೆಯ ಅಲೌಕಿಕ ಹುಲುಬುಗಳನ್ನು ಹುಲುಬತೊಡಗುತ್ತಾರೆ. ಅಂಥ ಅಪ್ರತಿಮ ಬುದ್ಧಿಶಾಲಿಗಳಾದ ಆ 'ಒರೆಗಲ್ಲ' ಮಹಾಶಯರೇ ಸ್ವತಃ ಆ ಸಾಧು-ಸತ್ಪುರುಷರ ಸೇವಕರಂತೆ ವರ್ತಿಸಿ, ಅವರ ಕೀರ್ತಿಯನ್ನು ಸ್ವಮುಖದಿಂದ ಹೊಗಳ ಹತ್ತಿದ ಬಳಿಕ ಮಿಕ್ಕ ಅಜ್ಞಾನಿಗಳಾದ ಸಾಮಾನ್ಯ ಜನತೆಯ ಪಾಡೇನು? ಅವರೆಲ್ಲರೂ ದೀಪದ ಹುಳಗಳಂತೆ ಆಕರ್ಷಿಸಲ್ಪಟ್ಟು ಪಟಪಟನೆ ಆ ಜಾಲದಲ್ಲ ಬಿದ್ದು ಬಿಡುತ್ತಿರುತ್ತಾರೆ.

ಹೀಗೆ ಸಾಧು-ಸತ್ಪುರುಷ ಅಥವಾ ಅವತಾರಿಕನೆಂದೆನಿಸಿಕೊಳ್ಳುವ ಆ ಅನಾಮಧೇಯ ವ್ಯಕ್ತಿಗೆ ಮೊದಮೊದಲು ಆ ಒರೆಗಲ್ಲನ ಜನರೂ ಬೇರೆ ಜನರೂ ತನ್ನನ್ನು ಹಾಗೆ ಸುಮ್ಮಸುಮ್ಮನೆ ಹೊಗಳುವುದೂ ಆರಾಧಿಸುವದೂ ಸೇರುವದಿಲ್ಲ. ಅದರಿಂದ ಆತನು ಸ್ವಾಭಾವಿಕವಾಗಿಯೇ:—"ಮಹಾರಾಜಾ, ನಾನೇನು ಒಂದು ಬಂಡೆಗಲ್ಲು. ನನ್ನನ್ನೇಕೆ ಇಷ್ಟು ಹೊಗಳುತ್ತಿರುವಿರಿ? ನನ್ನಿಂದ ನಿಮ್ಮಗಳ ಕಲ್ಯಾಣವೇನಾಗಬೇಕಾಗಿದೆ? ನಾನೂ ನಿಮ್ಮಂತೆಯೇ ಇರುವ ಒಬ್ಬ ಸಾಮಾನ್ಯ ಮಾನವನು. ನೀವು ನನ್ನ ಆರಾಧನೆಗೆ ತೊಡಗಿ ನಿಮ್ಮ ಸಮಯವನ್ನು ವ್ಯರ್ಥವಾಗಿ ಮಾಡಿಕೊಳ್ಳುವದಕ್ಕಿಂತ ಜಗದೀಶನಾದ ಆ ಚಿನ್ಮಯಾತ್ಮ ಪರಮಾತ್ಮನನ್ನು ಪ್ರಾರ್ಥಿಸಿ ನಿಮ್ಮ ಮನ-ಕಾಮನೆಗಳನ್ನು ಪೂರೈಸಿಕೊಳ್ಳಬೇಕು" ಎಂದು ಹೇಳುತ್ತಿರುತ್ತಾನೆ; ಆದರೆ ಆತನನ್ನು ತಮ್ಮ ಕೈವಶಪಡಿಸಿಕೊಂಡಿದ್ದ ಆ ಬುದ್ಧಿಶಾಲಿ 'ಒರೆಗಲ್ಲ' ಜನರು ಆಗ ನೆರೆದ ಬೇರೆ ಸಾಮಾನ್ಯ ಜನರನ್ನು ಕುರಿತು:—"ನೋಡಿದಿರಾ, ನಮ್ಮ ಸಾಧು ಮಹಾರಾಜರ ಉಪರತಿಯನ್ನು! ನಿಜವಾದ ಸಾಧು-ಸತ್ಪುರುಷರೆಂಬುವವರು ತಮ್ಮನ್ನು ಹೊಗಳಿರಿ, ತಮ್ಮನ್ನು ಆರಾಧಿಸಿರಿ, ತಾವು ಜನಗಳ ಮನ-ಕಾಮನೆಗಳನ್ನು ಪೂರೈಸುವವರು ಎಂದು ಯಾವಾಗಲೂ ಹೇಳುತ್ತಿರುವದಿಲ್ಲ. ಕಾರಣ ಮಹನೀಯರಾದ ಜನಸಾಮಾನ್ಯರೇ, ನಾವೀಗ ಇವರ ಈ ಹೊರದಾರಿಯ ಮಾತುಗಳನ್ನು ನಂಬಕೂಡದು. ಈ ಅವತಾರಿಕರು ನಮ್ಮಗಳನ್ನುದ್ಧರಿಸುವದಕ್ಕಾಗಿಯೇ ಇಲ್ಲಿಗೆ ಹೀಗೆ ಆಕಸ್ಮಿಕವಾಗಿ ಆಗಮಿಸಿರುತ್ತಾರೆ. ನಾವು ಈಗ ಇವರ ನುಡಿಗಳನ್ನು ಕೇಳಿ ಇವರನ್ನು ಆರಾಧಿಸುವದನ್ನು ಬಿಟ್ಟರೆ, ಕೈಗೆ ಸಿಕ್ಕ ರತ್ನವನ್ನು ತಿಪ್ಪೆಗುಂಡಿ

ಯಲ್ಲಿ ಚೆಲ್ಲಿಕೊಡುವ ಅಭಾಗಿಗಳಂತಾಗುವೆವು. ವೇದ, ಶಾಸ್ತ್ರಗಳಲ್ಲಿ ಹೇಳಿರುವ ಸಾಧು-ಸತ್ಪುರುಷರ ಎಲ್ಲ ಲಕ್ಷಣಗಳೂ ಇವರಲ್ಲಿರುತ್ತವೆ. ಕಾರಣ ನಾವುಗಳೆಲ್ಲರೂ ಈ ಮಹಾನುಭಾವರನ್ನು ತನು-ಮನ-ಧನಗಳಿಂದ ಆರಾಧಿಸಿ ಮುಕ್ತಿಯನ್ನು ಪಡೆಯಬೇಕು" ಎಂದು ಎದೆ ತಟ್ಟಿ ಹೇಳುವರು.

ಆ ಬಳಿಕ ಕೇಳುವದೇನು? ಹೀಗೆ ಯಾವನೊಬ್ಬ ತಮ್ಮಣಶಾಸ್ತ್ರಿ ಇಲ್ಲವೆ ದಿವಾಕರ ದೀಕ್ಷಿತನಂತಹ ಒರೆಗಲ್ಲ ಜನರು ಆ ಸತ್ಪುರುಷನ ಪ್ರಶಂಸಾವಳಿಯಲ್ಲಿ ಸೇರಿಬಿಟ್ಟರೆಂದರೆ ತೀರಿತು. ಮಿಕ್ಕ ಜನಸಮ್ಮರ್ದಕ್ಕೆ ಕೊರತೆಯಾದೀತೆ?

ಯಾವನೊಬ್ಬ ಶಾಸ್ತ್ರೀ, ದೀಕ್ಷಿತ ಅಥವಾ ಇನ್ನಾವನೋ ಒಬ್ಬ ಚುರುಕುಬುದ್ಧಿಯವನು ಮನಸ್ಸು ಮಾಡಿದರೆ ಯಾವನೊಬ್ಬ ಕಡುಮೂರ್ಖ ಇಲ್ಲವೆ ಕೆಲಸಕ್ಕೆ ಬಾರದ ಮನುಷ್ಯನನ್ನು ಕೂಡ ಸಾಧು-ಸತ್ಪುರುಷರ ಮೆಟ್ಟಿಲಿಗೆ ಸಹಜವಾಗಿ ಮುಟ್ಟಿಸಬಲ್ಲರು. ಹಾಗು ಆ ಸಾಧು-ಸತ್ಪುರುಷ ವ್ಯಕ್ತಿಯ ನೆರವಿನಿಂದ ತಮ್ಮ ಆಶಾಪಿಪಾಸೆಯನ್ನು ಬೇಕಾದ ಹಾಗೆ ಪೂರಯಿಸಿಕೊಳ್ಳಬಹುದು.

ಹಾಗೆ ಸಾಧು-ಸತ್ಪುರುಷ ಇಲ್ಲವೆ ಅವತಾರಿಕನೆಂದು ಆವಾಹಿಸಲ್ಪಡುವ ಆ ಅನಾಮಧೇಯ ವ್ಯಕ್ತಿಗೆ ಮೊದ ಮೊದಲು ಆ ಒರೆಗಲ್ಲ ಜನರು ತನ್ನನ್ನು ಹೀಗೆ ಆಡಿಸುವದು ಸರಿಯಲ್ಲವೆಂದು ಅನಿಸಿದರೂ, ಬರಬರುತ್ತ ಆತನ ಬುದ್ಧಿಯೂ ವಿಕಾರಕ್ಕೆ ಒಳಪಡುವದು. ಇಂಥ ಇಂಥ ದೊಡ್ಡ ದೊಡ್ಡ ಶಾಸ್ತ್ರೀ-ದೀಕ್ಷಿತ-ಪುರಾಣಿಕರೇ ತನ್ನನ್ನು ಈ ಪರಿಯಾಗಿ ಹೊಗಳಿ ಜನರಲ್ಲಿ ತನ್ನ ಅವತಾರವನ್ನು ಹುಲುಬುತ್ತಿರುವದರಿಂದ ತನ್ನಲ್ಲಿ ನಿಜವಾಗಿಯೂ ಸಾಧು-ಸತ್ಪುರುಷರ ಇಲ್ಲವೆ ಅವತಾರಿಕರ ಲಕ್ಷಣಗಳಿರಲೇ ಬೇಕೆಂದು ಆತನಿಗೆ ಭ್ರಾಂತಿಯುಂಟಾಗುತ್ತದೆ. ಆ ಭ್ರಮೆಯ ಮೂಲಕ ಆತನು ಮುಂದೆ ಮುಂದೆ ತಾನೊಬ್ಬ ಸತ್ಪುರುಷನೇ ಎಂದು ಭಾವಿಸಿಕೊಳ್ಳುತ್ತಾನೆ; ಹಾಗು ಆ ಪದವಿಯ ಪುಷ್ಟ್ಯರ್ಥವಾಗಿ ನಟನೆ ಮಾಡತೊಡಗುತ್ತಾನೆ. ಹೀಗೆ ಒತ್ತಾಯದಿಂದ ಸಾಧು-ಸತ್ಪುರುಷ ಇಲ್ಲವ ಅವತಾರಿಕನನ್ನಾಗ ಮಾಡಿದ್ದ ವ್ಯಕ್ತಿಯು ತುಸ ನರಿಬುದ್ಧಿಯವನಿದ್ದರಂತೂ ತೀರಿಯೇ ಹೋಯಿತು; ಆ ಬಂಗಾರಕ್ಕೆ ಕುಂದಣ ಹಾಕಿದಂತಾಗಿ ಆ ವೇಷದಾಟವು ಬೇಗನೆ ರಂಗಿಗೆ ಬರುತ್ತದೆ.

ಹೊಸದಾಗಿ ಸತ್ಪುರುಷನಾಗಬೇಕೆನ್ನುವವನು ಈ ಕೆಳಗಿನ ಕೆಲವು ನಿಯಮಗಳನ್ನು ತನ್ನ ಪ್ರಸಿದ್ಧಿಯಾಗುವ ವರೆಗೆ ತಪ್ಪದೆ ಪಾಲಿಸಬೇಕು:—

(೧) ಮಾತಾಡುವದನ್ನು ಬಿಟ್ಟುಬಿಡಬೇಕು. (೨) ಜನರು ಏನೆಂದರೂ ಹೇಗೆ ವರ್ತಿಸಿದರೂ ಬಹಿರಂಗದಲ್ಲಿ ಕೋಪಗೊಳ್ಳದೆ ನಿರ್ಲಜ್ಜತನದಿಂದ ನಗೆಮೊಗದಿಂದಾಗಲಿ ಅಥವಾ ವಿಪರೀತ ಭಾವದ ಮುಖದಿಂದಾಗಲಿ ಮುಗುಳು ನಗೆ ನಗುತ್ತಿರಬೇಕು. (೩) ಕೆಲ ದಿನಗಳ ವರೆಗೆ ತನಗೆ ಯಾವುದರಲ್ಲಿಯೂ ಆಸಕ್ತಿಯಿಲ್ಲೆಂದು ನಟಿಸುತ್ತಿರಬೇಕು. (೪) ಊಟ-ಉಪಚಾರಗಳಲ್ಲಿಯೂ ಅನಾಸಕ್ತನಾಗಿರಬೇಕು. (೫) ಮಾತು ಆಡುವ ಪ್ರಸಂಗವೇ ಪ್ರಾಪ್ತವಾದರೆ, ದ್ವಂದ್ವಾರ್ಥದ ಕೆಲ ವಾಕ್ಯಗಳನ್ನು

ಪಾಠ ಮಾಡಿಕೊಂಡಿದ್ದು ಅವುಗಳಲ್ಲಿಯ ಯಾವುದೊಂದು ಬಾಯಿಗೆ ಬಂದ ವಾಕ್ಯವನ್ನು ನುಡಿದು ಮುಗುಳು ನಗೆ ನಕ್ಕುಬಿಟ್ಟರೆ ತೀರಿತು. (೬) ಸಾಧು-ಸತ್ಪುರುಷ ಅಥವಾ ಅವತಾರಿಕನಾಗ ಬಯಸುವವನು ಲೆಕ್ಕಣಿಕೆಗೆ ಎಂದೂ ಕೈ ಹಚ್ಚಬಾರದು. ಅಂದರೆ ಬರೆಯುವ ಓದುವ ಗೊಡವೆಗೆ ಸರ್ವಥಾ ಬೀಳಬಾರದು. ಹೀಗೆ ವರ್ತಿಸುವದರಿಂದ ಆತನ ಭೂಮಿಕೆಯು ಚೆನ್ನಾಗಿ ಬಿಂಬಿಸುವದು.''

ಪುರಾಣಿಕನ ಆ ನುಡಿಗಳ ಯಥಾರ್ಥಜ್ಞಾನವು ಅಲ್ಲಿ ಕಲೆತಿದ್ದ ಶ್ರದ್ಧಾಳುಗಳಾದ ಪೆನ್‌ಶನ್ದಾರರವರಿಗೂ ಭೋಳೇ ಭಾವಿಕರಾದ ವಿಧವೆ-ಸಧವೆಯರಿಗೂ ಸರಿಯಾಗಿ ಆಗಲಿಲ್ಲ; ಆದರೆ ಆ ಪುರಾಣಿಕನು ಮಾತ್ರ ತನ್ನ ಲೋಕಜಾಗ್ರತಿಯ ಕೆಲಸವನ್ನು ಚೆನ್ನಾಗಿ ಮಾಡಿದನು. ಇರಲಿ.

ಅಂದಿನ ಪುರಾಣಕ್ಕೆ ಹೋಗಿದ್ದ ಸರಸಿಯು ನೂತನ ವಿಧವೆಯು. ಆಕೆಯ ಗಂಡನಾದ ಭವಾನರಾಯನು ಗತಿಸಿ ೧-೨ ತಿಂಗಳುಗಳಿಗಿಂತ ಹೆಚ್ಚು ಅವಧಿಯಾಗಿರಲಿಲ್ಲ. ಸರಸಿಯು ತನ್ನ ಸಖಿಯಾದ ನಿರ್ಮಲಾ ಶರಣಮ್ಮಳ ಬಾಯಿಂದ ಕಮಲಾಕಾಂತ ಸಾಧುವಿನ ಪ್ರಖ್ಯಾತಿಯನ್ನು ಈ ಮೊದಲೇ ಕೇಳಿಕೊಂಡಿದ್ದಳು. ಅದೇ ಸಂಗತಿಯನ್ನು ಇಂದು ಆ ಪುರಾಣಿಕನೂ ಬಣ್ಣಿಸಿ ಹೇಳಿದ್ದನ್ನು ಕೇಳಿ ತಾನು ಸ್ವಂತವಾಗಿ ಹೋಗಿ ಒಮ್ಮೆ ಮಹಾನುಭಾವರಾದ ಆ ಸಾಧುಗಳನ್ನು ಸಂದರ್ಶಿಸಬೇಕೆಂದು ಆಕೆಗೆ ಅನಿಸಿತು. ಅದರಿಂದ ಅವಳು ಕಮಲಾಕಾಂತರ ಕಡೆಗೆ ಬೇಗನೆ ಹೊರಡುವ ಉದ್ಯೋಗಕ್ಕೆ ಹತ್ತಿದಳು.

ಭವಾನರಾಯನು ತೀರಿಕೊಂಡ ನಂತರ ಸರಸಿಯು ಇನ್ನು ಹೇಗೂ ತಮ್ಮ ಗುರುಗಳ ಆಶ್ರಮವನ್ನು ಸೇರತಕ್ಕವಳೇ ಎಂದು ನಿರ್ಮಲೆಯು ಭಾವಿಸಿಕೊಂಡಿದ್ದರೂ ಅವಳು ತಾನಾಗಿ ಆಕೆಯನ್ನು ಅಲ್ಲಿಗೆ ಕರೆದೊಯ್ಯುವ ಹವ್ಯಾಸಕ್ಕೆ ತೊಡಗಲಿಲ್ಲ. ಯಾಕಂದರೆ ಈ ನಿರಾಶ್ರಿತಳನ್ನೇನು ಬೇಕಾದಾಗ ತಮ್ಮ ಡಾವಣಿಯಲ್ಲಿ ಸೇರಿಸಿಕೊಳ್ಳಲಿಕ್ಕೆ ಬರುತ್ತದೆ; ಆದರೆ ಕುಮುದಿನಿಯಂತಹ ಬಿಂಕದ ಸುಶಿಕ್ಷಿತ ತರುಣಿಯನ್ನು ತಾನು ಎಷ್ಟು ಬೇಗನೆ ಅವಳ ಮನೆಯಿಂದ ಹೊರಹೊರಡಿಸಿ ತನ್ನ ಗುರುವಿಗೆ ಕಾಣಿಕೆಯನ್ನರ್ಪಿಸುವೆನೋ ಅಷ್ಟು ಬೇಗನೆ ತನ್ನ ಇಷ್ಟಾರ್ಥವು ಕೈಗೂಡಿ ಅವಳಿಗೆ ಹೆಚ್ಚು ಸುಖ-ಸಮಾಧಾನವಾಗುವಂತಿತ್ತು. ಆ ಕೃತ್ಯದಿಂದ ನಿರ್ಮಲೆಗೆ ನರ್ಮದೆಯಿಂದ ಸಾಕಷ್ಟು ಪಾರಿತೋಷಕ ದೊರೆಯುವದಿದ್ದಿತಲ್ಲದೆ, ಕುಮುದಿನಿಯ ಬಳಿಯಲ್ಲಿದ್ದ ಭಾರೀ ಬೆಲೆಯ ಆಭರಣಗಳ ಡಬ್ಬಿಯೂ ಅವಳ ಹಸ್ತಗತವಾಗುವಂತಿತ್ತು. ಈ ಎಲ್ಲ ಕಾರಣಗಳ ಮೂಲಕ ಅವಳು ಸರಸಿಯ ಹೊಯಿಲು ಬೇರೆ ಕಡೆಗೆ ಹೊರಳಬಾರದೆಂದು ನೋಡಿಕೊಳ್ಳಲಿಕ್ಕೆ ಗುಂಡನೆಂಬ ಲಫಂಗನನ್ನು ಆಕೆಯ ಮೇಲೆ ಪಾಳತಿಗಾಗಿ ಇಟ್ಟಿದ್ದಳು.

ಗುಂಡನು ವಾರವನಿತೆಯರ ಅಡ್ಡೆಯ ಏಜಂಟನೆಂಬದು ಪಾಪ! ನಮ್ಮ ಸರಸಕ್ಕನಿಗೇನು ಗೊತ್ತು? ಅವನು ತನ್ನ ಅಣ್ಣನ ಕೂಡ ಜಗಳಕಾದಿ ಹೈರಾಣಾಗಿರು

ವದರಿಂದ ನಿರ್ಮಲಾ ಶರಣಮ್ಮನ ಅಜ್ಞೆಯ ಮೇರೆಗೆ ಆ ಗುಂಡನು ಕೆಲ ದಿನ ತನ್ನ ಆಶ್ರಯದಲ್ಲಿರುತ್ತಾನೆಂದು ಆಕೆಯು ತಿಳಿದುಕೊಂಡಿದ್ದಳು. ಅದರಿಂದ ತಾನು ಕಮಲಾಕಾಂತ ಸಾಧುಗಳ ದರ್ಶನಕ್ಕೆ ಹೊರಡಬೇಕೆಂದಿನ್ದ ಸಂಗತಿಯನ್ನು ಅವಳು ಆ ಗುಂಡನಿಗೆ ಸಹಜವಾಗಿ ತಿಳಿಸಿದಳು. ಅದನ್ನು ಕೇಳಿ ಆ ಲಫಂಗನು ಮನಸ್ಸಿನಲ್ಲಿ ಹಿಗ್ಗಿದ್ದರೂ ಹಾಗೆಂದು ಆಡಿತೋರಿಸದೆ, "ಸರಸಕ್ಕಾ, ಸಾಧು-ಸತ್ಪುರುಷರೆಂದರೇನು? ಅವರೂ ನಮ್ಮ-ನಿಮ್ಮಂತೆ ಚರ್ಮಧಾರಿಗಳಾದ ಮಾನವರೇ. ಅವರ ಕೀರ್ತಿಯು ಕೇಳುವುದರಲ್ಲಿಯೇ ರಂಜನವಾಗಿರುವದಲ್ಲದೆ ಪ್ರತ್ಯಕ್ಷವಾಗಿ ನೋಡ ಹೋದರೆ ಅಲ್ಲಿ ಸ್ವಾರಸ್ಯವೇನೂ ತೋರುವದಿಲ್ಲ. ಕಾರಣ ನೀವು ಇಲ್ಲದ ಆ ಉಸಾಬರಿಗೆ ಹೋಗದೆ ಮನೆಯಲ್ಲೇ 'ಹರಿ' 'ಹರಿ' ಎನ್ನುತ್ತ ಸ್ವಸ್ಥವಾಗಿರ್ರಿ" ಎಂದು ಬೋಧಿಸಿದನು.

ಗುಂಡನ ಆ ವಿಪರೀತ ಭಾಷಣದಿಂದತೂ ಸರಸಿಯು ಸಾಧುಸಂದರ್ಶನದ ಲಾಲಸೆಯು ಮತ್ತಿಷ್ಟು ಹೆಚ್ಚಿತು. ಆಗ ಅವಳು ಗುಂಡನನ್ನು ಕುರಿತು:--"ಗುಂಡಾ, ಕಮಲಾಕಾಂತ ಸಾಧುಗಳೆಂದರೇನು ಸಾಮಾನ್ಯರೆಂದು ತಿಳಿದಿರುತ್ತೀಯೇನು? ನಾನು ಇದುವರೆಗೆ ಅವರನ್ನು ಪ್ರತ್ಯಕ್ಷವಾಗಿ ಕಾಣದಿದ್ದರೂ ಅವರ ಆಖ್ಯಾಯಿಕೆ ಗಳನ್ನು ನಿರ್ಮಲಕ್ಕನಿಂದಲೂ ಬೇರೆ ಹಲಕೆಲವರಿಂದಲೂ ಕೇಳಿ ತಿಳಿದಿರುತ್ತೇನೆ. ಈ ಸಾಧುಗಳು ಒಮ್ಮೆ ತಮ್ಮ ಶಿಷ್ಯಪರಿವಾರದೊಡನೆ ಗೋಕರ್ಣ ಕ್ಷೇತ್ರಕ್ಕೆ ಹೋ- ದಾಗ 'ಕಮಲಾ' ಎಂಬ ಹೆಸರಿನ ವಾರವನಿತೆಯನ್ನು ದೇಹಸಹಿತವಾಗಿ ಸ್ವರ್ಗಕ್ಕೆ ಕಳಿಸಿದರಂತೆ. ಗುಂಡಾ, ಇದೇನು ಸಾಮಾನ್ಯ ಮಹಿಮೆಯೇ?"

"ಸರಸಕ್ಕಾ, ಕಮಲಾಕಾಂತ ಸಾಧುವನ್ನು ನೀವು ನೋಡಿರದಿದ್ದರೂ ನಾನು ಚೆನ್ನಾಗಿ ಬಲ್ಲೆನು. ಅವನು ಗೋಕರ್ಣಕ್ಕೆ ತನ್ನ ಗೆಳೆಯರೊಂದಿಗೆ ಹೋದಾಗ ಗೆಳೆಯರ ಕಣ್ಣು ತಪ್ಪಿಸಿ ಆ ಕಮಲಾ ವಾರವನಿತೆಯ ಸಹವಾಸ ಮಾಡಿದನು. ಆತನ ಮಿತ್ರರಿಗೆ ಆ ಸಂಗತಿ ತಿಳಿಯಲು, ಅವರು ಅವಳನ್ನು ಎಲ್ಲಿಯೋ ಓಡಿಸಿ ಬಿಟ್ಟು ಈತ ನಿಗೆ ಅಂದಿನಿಂದ 'ಕಮಲಾಕಾಂತಸಾಧು'ವೆಂದು ಅನ್ನಹತ್ತಿದರು. ಅದೇ ಹೆಸರು ಜನರೂಢಿಯಾಗಿ ಹೋಯಿತು ಆ ಕಮಲಾ ಸೂಳೆಯು ಮೊನ್ನೆ ಮೊನ್ನೆಯ ವರೆಗೂ ಮೇಹರೋಗದಿಂದ ಬಳಲಿ ತುಸ ದಿನಗಳ ಹಿಂದೆ ಕಾಲವಾದಳು. ಜನರೇನು? ಬಾ ಯಿಗೆ ಬಂದದ್ದನ್ನು ಅಂದು ಸ್ತುತಿಸಹತ್ತಿದರೆ ಎಂತಹನಾದರೂ ಸಾಧು-ಸತ್ಪುರುಷ ನಾಗಬಲ್ಲನು."

"ಛೀ! ಛೀ! ಗುಂಡಾ, ನಿನ್ನ ಈ ನಾಸ್ತಿಕಪರ ಭಾಷಣವನ್ನು ನಾನು ಕೇಳ ಲಾರೆನು. ಹೇಗಿದ್ದರೂ ನಾನೊಮ್ಮೆ ಆ ಸಾಧುಗಳ ದರ್ಶನ ಮಾಡಲೇ ಬೇಕು. ಬೇಕಾದರೆ ನೀನು ನನ್ನ ಸಂಗಡ ಬಾ. ಬೇಡವಾದರೆ ಬಿಡು. ನಾನಂತೂ ನಾಳೆ ಹೊರಡುವವಳೇ?

ಸರಸಿಯ ಆ ನುಡಿಗಳನ್ನು ಕೇಳಿ ಗುಂಡನಿಗೆ ಹೇಗೆ ಹೇಗೋ ಅನಿಸಿತು. ಗುಂಡನು ಸ್ವತಃ ನೀಚವೃತ್ತಿಯುವನಾಗಿದ್ದರೂ ಆತನು ಕೆಲ ದಿನಗಳ ವರೆಗೆ ಆಕೆಯ

ಮನೆಯ ಅನ್ನವನ್ನುಂಡವನಾಗಿದ್ದನು. ಆದರಿಂದ ತನ್ನ ಅನ್ನದಾತ್ರಿಯು ಆ ನೀಚ ಕಮಲಾಕಾಂತನ ಕೈ ಸೇರಬಾರದೆಂದು ಅವನು ಬೇರೆಯೇ ಒಂದು ಜಾಲವನ್ನು ಒಡ್ಡಿದನು.

ಮರುದಿನ ಸರಸಿಯು ಗುಂಡನೊಡನೆ ಕಮಲಾಕಾಂತ ಸಾಧುಗಳ ದರ್ಶನಕ್ಕೆಂದು ಹೊರಟಳು; ಆದರೆ ಗುಂಡನು ಅವಳನ್ನು ನೆಟ್ಟಗೆ ಅಲ್ಲಿಗೆ ಕರೆದೊಯ್ಯದೆ, ತನ್ನ ಅನುಚರರ ಮೂಲಕ ಆಕೆಯನ್ನಪಹರಿಸಿ, ತನ್ನ ವೃತ್ತಿಯ ಭಾಗಿದಾರಳಾದ ಚಂದ್ರಿಯ ವಶಪಡಿಸಿ ತಾನು ಮಾಯವಾದನು.

---

## ಯೋಗಸಾಧನವೋ-ಭಕ್ಷ್ಯಸಾಧನವೊ?

ಕುಮುದಿನಿಯು ಪ್ರಭಾಕರಪಂತನೊಡನೆ ವಿಜಾಪುರಕ್ಕೆ (ತನ್ನೂರಿಗೆ) ಬಂದ ಸುದ್ದಿಯ ಲವಲೇಶವೂ ಸರಸಿಗೆ ಗೊತ್ತಿರಲಿಲ್ಲ. ಆದರಿಂದ ಅವಳು ವಲ್ಲಭರಾಯನಿಂದ ಬಂದಿದ್ದ "ಕುಮುದಿನಿಯನ್ನು ಬೇಗನೆ ಮರಳಿ ಕಳಿಸಿರಿ. ಈ ಪತ್ರವನ್ನು ಅರ್ಜಂಟ ಟೆಲಿಗ್ರಾಮ್ ಎಂದು ತಿಳಿಸಿರಿ" ಎಂಬ ಪತ್ರವನ್ನು ಓದಿ ಪರಮ ವಿಸ್ಮಯಗೊಂಡಳು. ಸರಸಿಯು ಓದು-ಬರಹವನ್ನರಿಯದ ಕೇವಲ-ಶುದ್ಧ-ಮೂರ್ಖಳು. ಆದರಿಂದ ತಮ್ಮ ಆಶ್ರಿತನಾದ ಗುಂಡನು ಓದಿ ತೋರಿಸಿದ್ದೇ ಅವಳಿಗೆ ಸರ್ವಮಾನ್ಯವು. ಆಕೆಯು ವಲ್ಲಭರಾಯನ ಪತ್ರಕ್ಕೆ ಉತ್ತರ ಬರೆಯಿಸುವುದಾದರೆ ಆತನಿಂದಲೇ. "ಕುಮುದಿನಿಯು ತನ್ನಲ್ಲಿಗೆ ಬಂದಿಲ್ಲವೆಂದೂ, ಆಕೆಯು ಮೊದಲಿನಿಂದಲೂ ಹೊರಚಾಳಿಯವಳಿರುವಳೆಂದೂ" ಗುಂಡನು ಸರಸಿಯ ಹೆಸರಿನಲ್ಲಿ ವಲ್ಲಭರಾಯನಿಗೆ ಉತ್ತರ ಬರೆದುಬಿಟ್ಟನು! ಆ ಉತ್ತರವನ್ನು ಕಂಡು ವಲ್ಲಭರಾಯನ ಪಿತ್ಥವು ತಲೆಗೇರಿತು. ತಮ್ಮ ಮನೆತನದ ಮರ್ಯಾದೆಯು ಕುಮುದಿನಿಯ ಕೆಟ್ಟ ಹೆಸರಿನಿಂದ ಹೋಗಿಬಿಟ್ಟಿತೆಂದು ಆತನಿಗೆ ಅನಿಸಿದ್ದರೆ ತಪ್ಪೇನು? ವಲ್ಲಭರಾಯನು ಹುಟ್ಟಾ ಸಹನಶಕ್ತಿಯವನು. ವಿಚಾರಿಯು. ವಿವೇಕಿಯು; ಆದರೂ ಸರಸಿಯಿಂದ ಬಂದ ಕುಮುದಿನಿಯ ವಿಷಯದ ಉತ್ತರವನ್ನು ಓದಿ ಆತನಲ್ಲಿಯ ವಿವೇಕವೆಲ್ಲ ಮಾಯವಾಯಿತು. ಇನ್ನು ಏನು ಮಾಡಬೇಕೆಂಬದು ಕೂಡ ಆತನಿಗೆ ತಿಳಿಯದಾಯಿತು. "ಸಂಕಟಕಾಲದಲ್ಲಿ ವೇಂಕಟರಮಣನನ್ನು ನೆನೆಸು" ಎಂಬ ನಾಣ್ಣುಡಿಯಂತೆ ಆತನು ಆಗ ನೆಟ್ಟಗೆ ಕಮಲಾಕಾಂತ ಸಾಧುವಿನೆಡೆಗೆ ನಡೆದನು. ಹೆಂಡತಿಯ ಹಾಗು ನಿರ್ಮಲಾ ಶರಣಮ್ಮನ ಬೋಧದಿಂದ ಪ್ರಜ್ಞಾಹತನಾದ ವಲ್ಲಭರಾಯನು ಇತ್ತೀಚೆಗೆ ಆಗಾಗ್ಗೆ ಕಮಲಾಕಾಂತ ಸಾಧುವಿನ ಬಳಿಗೆ ಎಡತಾಕಲಾರಂಭಿಸಿದ್ದನು. ಸಂಕಟ ಪ್ರಸಂಗದಲ್ಲಿ ಗುರುಮಹಾರಾಜರು ಯಾವದೊಂದು ಯೋಗ್ಯ ಮಾರ್ಗವನ್ನು ತೋರಬಹುದೆಂದು ಊಹಿಸಿ ಆತನು ಅಂದು ಅಲ್ಲಿಗೆ ಹೊರಟಿದ್ದನು.

ಕ್ರೋಧ-ಸಂತಾಪಗಳಿಂದ ಆವರಿಸಲ್ಪಟ್ಟ ವಲ್ಲಭರಾಯನು ಅಕಾಲದಲ್ಲಿ ತಮ್ಮಲ್ಲಿಗೆ ಬಂದುದನ್ನು ಕಂಡು ಕಮಲಾಕಾಂತ ಸಾಧುವಿಗೆ ಆಶ್ಚರ್ಯವೆನಿಸಿತು. ಇಂದಿನ ಪ್ರಸಂಗವೇ ಬೇರೆಯಿದೆಯೆಂಬದನ್ನು ಆತನು ತಟ್ಟನೆ ತಿಳಿದುಕೊಂಡನು. ಇಂದು ಕಮಲಾಕಾಂತನ ಮಠದಲ್ಲಿ ಏನೋ ವಿಶಿಷ್ಟ ವ್ಯವಸ್ಥೆಯಿದ್ದಿತು; ಮತ್ತು ಅದಕ್ಕಾಗಿ ಇಂದು ಸಾಯಂಕಾಲದ ವರೆಗೂ ಮಠಕ್ಕೆ ಯಾವ ಶಿಷ್ಯರೂ ಬರಕೂಡದೆಂದು ಕಟ್ಟಪ್ಪಣೆ ಮಾಡಿ, ನಿರ್ಮಲೆಯು ಮಹಾರಾಜರ ಖಾಸ ಸ್ವಾರಿಯ ಉಪಯೋಗಕ್ಕೆಂದು ಕೆಲ ವಿಶೇಷ ಬಗೆಯ ಸಾಮಾನುಗಳ ಖರೀದಿಗಾಗಿ ಸ್ವತಃ ಪೇಟೆಗೆ ಹೋಗಿದ್ದಳು. ಅವಳು ಬಂದ ಕೂಡಲೆ ಬೀದಿಯ ಬಾಗಿಲಿಗೆ ಹೊರಗಿನಿಂದ ಕೀಲೀ ಹಾಕಿಸಿ, ಅವಳನ್ನು ಹಿತ್ತಲ ಬಾಗಿಲಿನಿಂದ ಬರಮಾಡಿಕೊಳ್ಳಬೇಕೆಂದು ಕಮಲಾಕಾಂತನು ತನ್ನ ಮನಸ್ಸಿನಲ್ಲಿ ನಿಶ್ಚಯಿಸುತ್ತಿರುವಾಗಲೇ ವಲ್ಲಭರಾಯನು ಅಲ್ಲಿಗೆ ಅನಪೇಕ್ಷಿತವಾಗಿ ಬಂದುಬಿಟ್ಟನು! ಆತನನ್ನು ಕಂಡಕೂಡಲೆ ಸಾಧುವು ವಿಮನಸ್ಕನಾದನು; ಯಾಕಂದರೆ ಇಂದಿನ ಆ ಸಾಧುವಿನ ಊಟ-ಉಪಚಾರಗಳ ತರಹವೇ ಚಿತ್ರ-ವಿಚಿತ್ರ ಬಣ್ಣದ್ದಾಗಿತ್ತು! ಶ್ರೀಮಂತರ ಅಂತಃಪುರಗಳ ಕಡೆಗೆ ಕಣ್ಣಿದ್ದೂ ಹೇಗೆ ನೋಡಬಾರದೋ ಕಿವಿಗಳಿದ್ದೂ ಅತ್ತಕಡೆಯ ಗಂಧವಾರ್ತೆಗಳನ್ನು ಹೇಗೆ ಕೇಳಬಾರದೋ ಅದರಂತೆಯೇ ಸಾಧು-ಸತ್ಪುರುಷ-ಅವತಾರಿಕರ ನಿಂದೆಯನ್ನು ನಾಲಿಗೆಯಿಂದ ಮಾಡಬಾರದು. ಹಾಗೆ ಮಾಡುವದರಿಂದ ಮಹಾ ಪಾಪ ಉಂಟಾಗುತ್ತದೆ. ಪಾಪ! ಇರಲಿ. ಕಮಲಾಕಾಂತನು ಆಗ ಅಂತರಂಗದಲ್ಲಿ ಎಷ್ಟು ಚಡಪಡಿಸಿದರೂ ತಾನು ಧರಿಸಿದ್ದ ಸಾಧು ವೇಷವನ್ನು ಎಥಾಸಾಂಗವಾಗಿ ತೋರಲೇಬೇಕಾಗಿದ್ದಿತು. ಆದರಿಂದ ಆ ಸಾಧುವು ಆಗ 'ಹ್ಹ-ಹ್ಹ-ಹ್ಹ' ಎಂದು ಹಲ್ಲು ಕಿರಿಯುತ್ತ: "ಏನು ವಲ್ಲಭರಾಯರೇ, ಇಂದು ಇಲ್ಲಿಗೆ ಹೀಗೆ ಆಕಸ್ಮಿಕವಾಗಿ ಬಂದು ಬಿಟ್ಟಿರಲ್ಲ! ಈ ಸಾಧುವಿನ ಮಠದ ಹೊರತು ತಮಗೆ ಬೇರೆಡೆಯಲ್ಲಿರಲು ಮನಸ್ಸೇ ಒಪ್ಪಲಾರದಾಗಿದೆಯಲ್ಲವೇ? ರಾಯರೇ, ಭಕ್ತಿಯ ಮಹಿಮೆಯೇ ಅಂತಹದಾಗಿದೆ. ಭಗವಂತನ ನಾಮೋಚ್ಚಾರದ ಹಾಗು ಸಾಧು-ಸತ್ಪುರುಷರ ಸಹವಾಸದ ಬಗ್ಗೆ ಒಮ್ಮೆ ಹುಚ್ಚು ಹಿಡಿಯಿತೆಂದರೆ ಈ ಸಂಸಾರದ ಮಾಯಾಜಾಲದಲ್ಲಿ ಒಂದು ಕ್ಷಣವಿರಲಿಕ್ಕೆ ಕೂಡ ಮನಸ್ಸು ಒಪ್ಪದಾಗುತ್ತದೆ. ಆತ್ಮವು ಬ್ರಹ್ಮಾನಂದರಸವನ್ನು ಸ್ವಾದಿಸುತ್ತ ಸ್ವಾನಂದ ಸಾಮ್ರಾಜ್ಯದಲ್ಲಿ ಲೀನವಾಗಿ ಬಿಡುತ್ತದೆ. ರಾಯರೇ, ನಮ್ಮ ಪೂರ್ವಜನ್ಮದ ಮಹಾನ್ ಮಹಾನ್ ಋಷಿಗಳು ತಪಗಟ್ಲೆ ಸಮಾಧಿ ಸ್ಥಿತಿಯಲ್ಲಿರುತ್ತಿದ್ದುದು ಸುಮ್ಮನೆ ಅಲ್ಲ. ನನ್ನ ಅನುಭವವನ್ನೇ ನೋಡಿರಿ; ನಾನು ಯಾವ ಯಾವಾಗ ಸಮಾಧಿಹೊಂದುವೆನೋ, ಆಗ ಆರಾರು ತಿಂಗಳುಗಳ ವರೆಗೆ ನನಗೆ ದೇಹಭಾನವೇ ಇರುತ್ತಿರುವದಿಲ್ಲ."

ಕಮಲಾಕಾಂತನು ಈ ಬಗೆಯಾಗಿ ಒಂದೇ ಸವನೆ ಬಡಬಡಿಸುತ್ತಿದ್ದರೂ ವಲ್ಲಭರಾಯನಿಗೆ ಆಗ ದೇಹಭಾನವಿರಲಿಲ್ಲ. ಗುರುಮಹಾರಾಜರ ಆ ಬೋಧದ ಒಂದು ಅಕ್ಕರವಾದರೂ ವಲ್ಲಭರಾಯನ ಅಂತಃಕರಣಕ್ಕೆ ಸೋಂಕಿದ್ದರೆ ಆ ಗುರುವಿ

ನಾಣೆ! ತನ್ನ ಮಾತಿಗೆ ವಲ್ಲಭರಾಯನು ಏನೂ ಉತ್ತರ ಕೊಡದ್ದನ್ನು ಕಂಡು ಸಾಧುವು ವಲ್ಲಭರಾಯನ ದೃಷ್ಟಿಗೆ ದೃಷ್ಟಿ ಹಚ್ಚಿ:—"ವಲ್ಲಭರಾಯರೇ, ಇಂದು ನೀವು ಇಷ್ಟೇಕೆ ಗುಂಗಾಗಿರುತ್ತೀರಿ? ಮನೆಯಲ್ಲಿ ವಿಶೇಷ ಪ್ರಸಂಗವೇನಾದರೂ ಜರುಗಿರುವದೇನು?"

"ಗುರುಮಹಾರಾಜರೇ, ನಾನಿಂದು ಒಂದು ಮಹಾವಿಪತ್ತಿಗೀಡಾಗಿರುತ್ತೇನೆ."

"ಈ ವಿಪತ್ತಿ-ಆಪತ್ತಿಗಳು ಸಂಸಾರದಲ್ಲಿ ಆಸಕ್ತರಾಗಿರುವವರನ್ನು ತಲ್ಲಣಗೊಳಿಸಿ ಬಿಡುತ್ತವೆ; ಆದರೆ ನಿಮ್ಮಂತಹ ಗುರುಭಕ್ತರಿಗೆ ಆ ವಿಪತ್ತುಗಳೇನು ಮಾಡಲಾಪವು? ರಾಮನಾಮದ ಜಪದಿಂದ ಮಹಾ ಮಹಾ ಸಂಕಟಗಳುಕೂಡ ಸುಟ್ಟು ಭಸ್ಮವಾಗುತ್ತವೆ. ವಲ್ಲಭರಾಯರೇ, ರಾಮನಾಮದಿಂದ ಆಗದ ಕೆಲಸಗಳಾವಿವೆ? ಲಂಕೆಯ ಸೇತುವು ಕೂಡ ರಾಮನಾಮದಿಂದ ಸಮುದ್ರ ಪೃಷ್ಠದ ಮೇಲೆ ಪ್ರತಿಷ್ಠಾಪಿತವಾಗಲಿಲ್ಲವೆ?"

"ಗುರುಗಳೇ, ರಾಮನಾಮದಿಂದ ದೊಡ್ಡ ದೊಡ್ಡ ಕಲ್ಲುಗಳು ತೇಲಿದವು; ಆದರೆ ಈ ವಲ್ಲಭರಾಯನನ್ನು ಈ ಭವಸಾಗರದಿಂದ ತೇಲಿಸಲಿಕ್ಕೆ ತಮ್ಮ ಚರಣಗಳ ಹೊರತು ಮತ್ತಾವುದೂ ಸಮರ್ಥವಾಗಲಾರದು. "ಹೀಗೆಂದು ನುಡಿದು ವಲ್ಲಭರಾಯನು ತನ್ನ ಜೇಬಿನೊಳಗಿಂದೊಂದು ಪತ್ರವನ್ನು ತೆಗೆದು ಮಹಾರಾಜರ ಮುಂದಿಟ್ಟು: "ಮಹಾರಾಜರೇ, ನಾನು ತಮ್ಮೆದುರಿಗೆ ಈ ಹೊಲಸನ್ನು ತೋಡುವದೆಂದರೆ, ಮಹಾ ಪಾಪಕರವಿರುತ್ತದೆ; ಆದರೆ ಸಾಗರವು ಒಳಿತು-ಕೆಡಕುಗಳನ್ನೆಲ್ಲ ಹೇಗೆ ತನ್ನ ಹೊಟ್ಟೆಯಲ್ಲಿ ಸೇರಿಸಿಕೊಳ್ಳುವುದೋ ಅದರಂತೆಯೇ ತಮ್ಮಂತಹ ಸಾಧು-ಸತ್ಪುರುಷರು ಜಗತ್ತಿನ ಕಲ್ಯಾಣಕ್ಕಾಗಿ ಕೆಸರಿನಲ್ಲಿದ್ದರೂ ಕಮಲಪತ್ರದಂತೆ ನಿರ್ಲಿಪ್ತರಾಗಿರುತಾರೆ; ಹಾಗು ನಮ್ಮಂತಹ ಪಾಪಿ-ಚಾಂಡಾಲರನ್ನು ಉದ್ಧರಿಸಿ ಸನ್ಮಾರ್ಗಕ್ಕೆ ಹಚ್ಚುತ್ತಾರೆ. ಮಹಾರಾಜರೇ, ನಮ್ಮ ಆ ನಾದಿನಿಯು ನಮ್ಮ ಮನೆತನಕ್ಕೆ ಕಲಂಕವನ್ನು ಹಚ್ಚಿದಳು. ಅದರಿಂದ ನಾನು ಈಗ ಏನು ಮಾಡಲಿ? ಏನು ಬಿಡಲಿ, ಎಂದು ಕಾತರಗೊಂಡಿರುತ್ತೇನೆ. ಈ ಪ್ರಸಂಗದಲ್ಲಿ ನನ್ನನ್ನು ಉದ್ಧರಿಸುವವರು ತಮ್ಮ ಹೊರತು ಅನ್ಯರಾರೂ ಇರುವದಿಲ್ಲ."

ಕಮಲಾಕಾಂತನು ಆ ಪತ್ರವನ್ನು ಓದುತ್ತ: "ರಾಯರೇ, ಪ್ರಸಂಗವು ಎಂಥ ಬಿಕ್ಕಟ್ಟಿನದಾಗಿದ್ದರೂ ನಿಮ್ಮಂತಹ ಖಂಬೀರರು ಹೀಗೆ ಅವಸಾನಗೆಡಕೂಡದು; ಆದರೆ ರಾಯರೇ, ನೀವು ಇಷ್ಟು ಹತಾಶರಾಗಲಿಕ್ಕೆ ಈ ಪತ್ರದಲ್ಲಿ ಇದೆಯಾದರೂ ಏನು?"

"ಮಹಾರಾಜರೇ, ಅದನ್ನು ತಾವು ಪೂರಾ ಓದಿಕೊಂಡರೆ ತಮಗೆ ಎಲ್ಲವೂ ತಿಳಿಯುವದು. ಹೀಗೆಂದು ವಲ್ಲಭರಾಯನು ಹೇಳಿ, ಸ್ವಲ್ಪದರಲ್ಲಿಯೇ ಕುಮುದಿನಿಯ ಚಾರಿತ್ರ್ಯವನ್ನು ಕಮಲಾಕಾಂತನ ಕಿವಿಯ ಮೇಲೆ ಹಾಕಿದನು.

ಕಮಲಾಕಾಂತನು ಆ ಪತ್ರವನ್ನೋದಿ ಗಂಭೀರ ಮೊಗದಿಂದ:-"ಈ ಪ್ರಣಯಿ ಕೀಟಕಗಳಿಂದ ಈ ಲೋಕವು ತುಂಬಿರುವುದರಿಂದಲೇ ನಮ್ಮಂತಹ ವಿರಕ್ತರು

ಜಗತ್ತಿನ ಸಂಸರ್ಗದಿಂದ ಅಲಿಪ್ತರಾಗಿರುವ ಇಚ್ಛೆ ತಾಳಿರುತ್ತೇವೆ; ಆದರೆ ನಿಮ್ಮಂತಹ ಸದ್ಭಕ್ತರ ಉದ್ಧಾರಕ್ಕಾಗಿ ನಾವುಗಳು ಪಾಪಿಪ್ರಾಣಿಗಳ ಸಹವಾಸವನ್ನು ಸಹಿಸಬೇಕಾಗುತ್ತದೆ."

"ಮಹಾರಾಜರೇ, ಇನ್ನು ನಾನೇನು ಮಾಡಬೇಕೆಂಬದನ್ನು ತಾವೇ ಹೇಳಿರಿ."

ಸಾಧುವು ಕೆಲ ಕ್ಷಣಗಳ ವರೆಗೆ ಗಹನವಾದ ಯೋಚನೆಯಲ್ಲಿ ಮಗ್ನನಾಗಿ ಬಳಿಕ:—"ವಲ್ಲಭರಾಯರೇ, ನಿಮ್ಮ ಕುಮುದಿನಿಯ ವಯಸ್ಸೆಷ್ಟಿರಬಹುದು?"

"ಆಕೆಗೇನು ಇನ್ನೂ ಇಪ್ಪತ್ತು ಕೂಡ ಪೂರಯಿಸಿಲ್ಲ."

"ಎಲಲ! ಇಂಥ ಎಳೆ ಹುಡುಗಿಯನ್ನು ವಾಮಮಾರ್ಗಕ್ಕೆಳಿಸುವ ಆ ದುರಾತ್ಮರಿಗೇನೆನಬೇಕು?"

"ಪರಮೇಶ್ವರನಾದರೂ ಅಂತಹ ನೀಚರನ್ನು ಜೀವಂತವಾಗಿ ಏಕಿರಿಸುತ್ತಾನೆ?"

"ಅಪ್ಪಗಳಿರಾ, ಪರಮಾತ್ಮನ ಆ ಮಾಯೆಯು ನನ್ನ-ನಿಮ್ಮುಗಳಿಗೆಂತು ತಿಳಿಯಬೇಕು? ಸಂಸಾರದೊಳಗೆ ಲಿಪ್ತವಾಗಿರುವ ನಿಮ್ಮ ಜೀವವು ಅಲಿಪ್ತವಾಗಲೆಂದೇ ದೇವರು ನಿಮ್ಮ ಮೇಲೆ ಇಂದು ಈ ವಿಪರೀತ ಪ್ರಸಂಗವನ್ನು ತಂದಿರುತ್ತಾನೆ. ವಲ್ಲಭರಾಯರೇ, ನಿಜವಾಗಿ ಹೇಳುವುದೆಂದರೆ, ನಿಮ್ಮ ಉದ್ಧಾರಕ್ಕೆಂದೇ ನಿಮ್ಮ ಆ ನಾದಿನಿಯು ಜನ್ಮವೆತ್ತಿರುತ್ತಾಳೆ."

"ಏನೆನ್ನುವಿರಿ? ಹೊರಚಾಳಿಗೆ ಹತ್ತಿರುವ ಆ ನನ್ನ ನಾದಿನಿಯೇ ನನ್ನನ್ನುದ್ಧರಿಸುವಳೆ!" ವಲ್ಲಭರಾಯನು ಅತ್ಯಾಶ್ಚರ್ಯದಿಂದ ಕೇಳಿದನು.

"ಅದಕ್ಕೆ ಸಂಶಯವೇಕೆ?"

"ಗುರುಮಹಾರಾಜರೇ, ತಾವು ಇಂದು ನನ್ನನ್ನು ಈ ಬಗೆಯ ಗೊಂದಲದಲ್ಲೇಕೆ ನೂಕುವಿರಿ? ನಾನು ತಮ್ಮ ಚರಣಗಳ ಬಡ ಕಿಂಕರನಾಗಿರುತ್ತೇನೆ. ದಯವಿಟ್ಟು ನನ್ನ ಮನಸ್ಸನ್ನು ಸಮಾಧಾನ ಪಡಿಸಿರಿ; ಹಾಗು ನಮ್ಮ ಮನೆತನಕ್ಕೆ ತೊಡೆಯಬಹುದಾಗಿರುವ ಈ ಕಲಂಕವು ನಷ್ಟವಾಗುವ ಉಪಾಯವನ್ನು ತೋರಿಸಿರಿ." ಎಂದು ಅನ್ನುತ್ತ ವಲ್ಲಭರಾಯನು ಕಮಲಾಕಾಂತನ ಪಾದಗಳನ್ನು ಹಿಡಿದನು.

"ವಲ್ಲಭರಾಯರೇ, ಎದ್ದೇಳಿರಿ ಹೀಗೆ ಹತಾಶರಾಗಬೇಡಿರಿ. ನೀವು ನನ್ನ ಮಠಕ್ಕೆ ದೀಕ್ಷಾಬದ್ಧರಾಗಿರುತ್ತೀರಿ ನನ್ನಲ್ಲಿ ನಿಮ್ಮ ದೃಢಭಾವವಿರುತ್ತದೆ. ನೀವು ನನ್ನನ್ನು ನಿಮ್ಮ ಪರಮ ಗುರುವೆಂದು ತಿಳಿದಿರುತ್ತೀರಿ. ಅಂದಬಳಿಕ ನಿಮಗೊದಗಿರುವ ಪ್ರತಿಯೊಂದು ಬಗೆಯ ಸಂಕಟವನ್ನು ನಿವಾರಿಸುವದು ನನ್ನ ಕರ್ತವ್ಯವಾಗಿರುತ್ತದೆ. ನೀವಿನ್ನು ಯಾವ ಬಗೆಗೂ ಚಿಂತಬೇಡಿರಿ. ಅದಿರಲಿ; ಆದರೆ ರಾಯರೇ, ನಿಮ್ಮ ಕುಮುದಿನಿಯು ಸದ್ಯಕ್ಕೆ ಎಲ್ಲಿರುತ್ತಾಳೆ?"

"ಅಂದು ವಿಜಾಪುರಕ್ಕೆ ತವರೂರಿಗೆ ಹೋಗುತ್ತೇನೆಂದು ಆ ಗೃಹಸ್ಥನೊಡನೆ ಹೊರಟು ಹೋಗಿರುತ್ತಾಳೆ; ಆದರೆ ಆಕೆಯು ಮಲತಾಯಿಯು ಪತ್ರದಲ್ಲಿ...."

"ತಿಳಿಯಿತು-ತಿಳಿಯಿತು" ಕಮಲಾಕಾಂತನು ನಡುವೇ ಬಾಯಿ ಹಾಕಿ:—

"ಅಂದು ನಿಮ್ಮಲ್ಲಿಗೆ ಆಕೆಯನ್ನು ಕರೆಯು ಬಂದ ಗೃಹಸ್ಥನ ಬಗ್ಗೆಯೇ ನಿಮಗೆ ಸಂದೇಹವಿದೆಯಲ್ಲವೇ?"

"ಅಹುದು. ತಾನು ಭವಾನರಾಯನ ಸ್ನೇಹಿತನೆಂದು ಆತನು ಅಂದನು; ಆದರೆ ಗುರುಗಳೇ, ಆತನ ಮುಖಚರ್ಯೆ ಮನೋಭಾವಗಳ ಮೇಲಿಂದ ಆತನ ಬಗ್ಗೆ ಸಂಶಯ ಪಡಲಿಕ್ಕೆ ಕೊಂಚವೂ ಆಸ್ಪದವಿರಲಿಲ್ಲ. ಅಂತೆಯೇ ನಾನು ಕುಮುದಿನಿಯನ್ನು ಆತನೊಡನೆ ಕಳಿಸಿ ಕೊಟ್ಟೆನು; ಆದರೆ ಗುರುಗಳೇ, ಈ ಪತ್ರದಿಂದ ಏನು ಅರ್ಥವಾಗುತ್ತದೆಂಬದನ್ನು ನೀವೇ ನೋಡಿರಿ."

"ವಲ್ಲಭರಾಯರೇ, ನೀವಿನ್ನು ಸ್ವಲ್ಪವೂ ಚಿಂತಿಸಬೇಡಿರಿ. ಈ ಪತ್ರವಾಚನದಿಂದ ನಿಮ್ಮ ಕುಮುದಿನಿಯು ಹೊರಚಾಳಿಗೆ ಹತ್ತಿರುತ್ತಾಳೆಂಬದು ತಿಳಿಯುತ್ತಿದ್ದರೂ ನೀವು ಆ ಸಂಗತಿಯನ್ನು ಇಷ್ಟರಲ್ಲೇ ಪಟ್ಕನಿರ್ಣಯನ್ನಾಗ ಮಾಡಬೇಡಿರಿ. ನಿಮ್ಮ ಕುಮುದಿನಿಯು ಮುಂದಿನ ವಾರದಲ್ಲಿ ಖಂಡಿತವಾಗಿಯೂ ಹಿಂದಿರುಗಿ ಬರುವಳೆಂಬದು ನನ್ನ ಅಂತರಾತ್ಮಕ್ಕೆ ಗೊತ್ತಾಗಿದೆ. ಅವಳು ನಿಮ್ಮ ಮನೆಗೆ ಮರಳಿ ಬಂದಳೆಂದರೆ, ಅವಳ ವಿಷಯದ ಈ ಪತ್ರವು ನಿಮ್ಮ ಕೈಸೇರಿದ ಮುಂತಾದ ಯಾವ ಸಂಶಯವೂ ಅವಳಿಗುಂಟಾಗದಂತೆ ಮುತವರ್ಜಿ ವಹಿಸಿರಿ; ಹಾಗು ಅವಳನ್ನು ನಮ್ಮ ನಿರ್ಮಲೆಯೊಡನೆ ನನ್ನ ಕಡೆಗೊಮ್ಮೆ ಸಹಜವಾಗಿ ಕಳಿಸಿಕೊಡಿರಿ. ನೀವು ನಿಮ್ಮ ಹೆಂಡತಿಗೂ ನಿಮ್ಮ ತಮ್ಮನಿಗೂ ಈ ಪತ್ರದ ಒಂದು ಅಕ್ಕರವನ್ನು ಕೂಡ ತಿಳಿಸಬೇಡಿರಿ. ಈ ಬಗ್ಗೆ ಮುಂದೇನು ಮಾಡಬೇಕೆಂಬದನ್ನು ನಾನು ಆ ಮೇಲೆ ನಿಮಗೆ ತಿಳಿಸುತ್ತೇನೆ"

"ಗುರುಮಹಾರಾಜರೇ, ಈ ವಿಷಯದ ಎಲ್ಲ ಭಾರವನ್ನು ನಾನು ನಿಮ್ಮ ಮೇಲೆಯೇ ಹಾಕಿರುತ್ತೇನೆ. ನನ್ನ ಮನೆತನದ ಹೆಸರನ್ನುಳಿಸುವ ಭಾರವು ನಿಮ್ಮನ್ನೇ ಕೂಡಿದೆ!" ವಲ್ಲಭರಾಯನು ದೀನವಮುಖದಿಂದ ಹೇಳಿದನು.

"ವಲ್ಲಭರಾಯರೇ, ನಾನು ನಿಮಗೆ ಮತ್ತೆ ಮತ್ತೆ ಒತ್ತಿ ತಿಳಿಸುವದೇನಂದರೆ, ವಿಷಯವೆಂಬದು ಮಹಾ ವಿಷಕರವು. ಜನಕರಾಜನಂತಹ ಮಹಾ ಮಹಾ ಮನೋನಿಗ್ರಹೀ ಪುರುಷರಿಗೆ ಕೂಡ ಇಂಥ ಪ್ರಸಂಗದಲ್ಲ ಮನಸ್ಸು ಬಿಗಿಹಿಡಿಯುವದು ಮಹಾ ಕಠಿಣವಾಗಿರುತ್ತದೆ. ಕಾರಣ ನೀವು ಬಹು ಎಚ್ಚರಿಕೆಯಿಂದಿರ್ರಿ. ಸಿಟ್ಟಿಗೆದ್ದು ಏನಾದರೊಂದು ಮಾಡಹೋಗಿ ಎಲ್ಲ ಕೆಲಸವನ್ನೂ ಕೆಡಿಸಿ ಬಿಟ್ಟೀರಿ; ಹಾಗು :ಆ ಮೇಲೆ ಮತ್ತೆ ಈ ಕನುಲಾಕಾಂತನ ಕಡೆಗೆ ಓಡಿ ಬಂದೀರಿ; ಆದರೆ ಆ ಮೇಲೆ ಮಾತ್ರ ನನ್ನಿಂದಾಗದು ನೋಡಿರಿ. ಎಚ್ಚರಿಕೆ!"

"ಮಹಾರಾಜರೇ, ತಾವು ಹೀಗೆ ಅಭಯ ಕೊಡುತ್ತಿರಲು, ನಾನು ನನ್ನ ಕಾಲ ಮೇಲೇಕೆ ಕಲ್ಲು ಹಾಕಿಕೊಳ್ಳಲಿ? ನಾನು ಅಂತಿಂಥವನಲ್ಲ; ನನಗೆ ತಮ್ಮ ಸಾಧುವೃತ್ತಿಯ ಅನುಭವ ಬಂದಿರುವದೆಂದೇ ನಾನು ತಮ್ಮ ಭಜನೆಗೆ ತೊಡಗಿರುತ್ತೇನೆ."

"ನನ್ನಂತಹ ಪಾಮರನ ಭಜನವೆಂದರೇನು? ಆ ಸರ್ವಸಾಕ್ಷಿ ಭೂತನಾದ ಹರಿ

ಸರ್ವೋತ್ತಮನ ಭಜನ-ಪೂಜನಗಳಿಗೆ ಹತ್ತಿರಿ. ಅಂದರೆ ಆತನು ನಿಮ್ಮ ಅಖಂಡ ಕಲ್ಯಾಣ ಮಾಡುವನು. ಅದಿರಲಿ. ವಲ್ಲಭರಾಯರೇ, ನೀವಿನ್ನು ಸ್ವಸ್ಥಚಿತ್ತದಿಂದ ಹೋಗಿರಿ. ಇನ್ನು ಮೇಲೆ ನಿಮ್ಮ ಕುಮುದಿನಿಗೆ ಉಪರತಿಯುಂಟಾಯಿತೆಂದೇ ತಿಳಿಯಿರಿ."

"ಆದರೆ ಮಹಾರಾಜರೇ, ಅವಳಿನ್ನು ನನ್ನ ಮನೆಯಲ್ಲಿ ಬೇಡ."

"ನೀವು ಹುಚ್ಚರಿರುತ್ತೀರಿ ವಲ್ಲಭರಾಯರೇ! ಏನಿರೀ ರಾಯರೇ, ಜಗತ್ತಿನಲ್ಲಿ ಮುಚ್ಚುಮರೆಯಲ್ಲಿ ಇಂಥ ಕೃತಿಗಳು ಬೇಕಾದಷ್ಟು ನಡೆದಿರುತ್ತವೆ; ಆದರೆ ಅವುಗಳನ್ನೆಲ್ಲಾದರೂ ಬೈಲಿಗೆ ತರುವುದುಂಟೇ? ಹಾಗೆ ಮಾಡಿದರೆ ತನ್ನ ಮೂಗನ್ನು ತಾನೇ ಕೊಯ್ದುಕೊಂಡು ಮಂದಿಗೆ ಅಪಶಕುನ ಮಾಡಿದಂತಾಗುವದು. ವಲ್ಲಭರಾಯರೇ, ಕುಮುದಿನಿಯನ್ನೊಮ್ಮೆ ನನ್ನೀ ಆಶ್ರಮಕ್ಕೆ ಕಳಿಸಿ ನೋಡಿರಿ; ಅಂದರೆ ಅವಳ ಮನೋವೃತ್ತಿಯಲ್ಲೆಷ್ಟು ಬದಲಾವಣೆ ಮಾಡಿ ಬಿಡುತ್ತೇನೆಂಬದು ನಿಮಗೆ ಆ ಮೇಲೆ ತಿಳಿದು ಬಂದೀತು. ಅವಳು ಪುನಃ ಆ ವಿಷಯಲಾಲಸೆಯ ಕಡೆಗೆ ಇಣಿಕಿ ಕೂಡ ನೋಡಲಾರಳು."

"ಒಳ್ಳೇದು; ನಾನಿನ್ನು ಹೊರಡಲಾ?"

"ಹೊರಡಿ-ಹೊರಡಿ. ಶಾಂತಮನಸ್ಸಿನಿಂದ ಹೊರಟು ಹೋಗಿರಿ." ಹೀಗೆಂದು ಸಾಧುಮಹಾರಾಜರು ಅಪ್ಪಣೆಯನ್ನಿತ್ತ ಕೂಡಲೆ ವಲ್ಲಭರಾಯನು ಭಾವಿಕತನದಿಂದ ಅವರನ್ನು ನಮಿಸಿ ಹೊರಟನು.

ಅಷ್ಟರಲ್ಲಿ ಸಾಧುಗಳು ಏನನ್ನೋ ಜ್ಞಾಪಿಸಿಕೊಂಡಂತೆ ನಟಿಸಿ:—"ವಲ್ಲಭರಾಯರೇ, ನೀವು ಚಿನಿವಾಲರಿದ್ದು ನಿಮ್ಮ ಅರಿವೆಯ ಅಂಗಡಿಯೂ ಇದೆಯಲ್ಲವೇ?"

ವಲ್ಲಭರಾಯನು ಮುಂದೆ ಹೋಗದೆ ನಿಂತಲ್ಲಿಯೇ ನಿಂತು:-"ಅಹುದು ಮಹಾರಾಜ!"

"ನಾವು ಕೆಲವು ಬಟ್ಟೆ-ಬರೆಗಳನ್ನು ಒಂದು ಅನಾಥಾಲಯಕ್ಕೆ ದಾನವೆಂದು ಕಳಿಸಬೇಕಾಗಿದೆ. ಅವುಗಳನ್ನು ನಿಮ್ಮ ಮುಖಾಂತರವಾಗಿ ತರಿಸಿದರೆ ತುಸ ಸುಲಭ ಬೆಲೆಗೆ ದೊರೆಯಬಹುದಲ್ಲವೇ?"

"ತಮಗೆ ಯಾವ ನಮೂನೆಯ ಅರಿವೆ-ಅಂಚಡಿ ಬೇಕೆಂಬದನ್ನು ತಿಳಿಸಿರಿ. ಈಗಿಂದೀಗಲೇ ಕಳಿಸಿಕೊಡುತ್ತೇನೆ."

"ಛೇ, ಛೇ ಅಷ್ಟೇನೂ ಅವಸರವಿಲ್ಲ; ನಿಮ್ಮ ಅನುಕೂಲತೆಯ ಮೇರೆಗೆ ಕಳಿಸಿ ಕೊಡಿರಿ. ಉಚ್ಚತರಗತಿಯ ೫-೬ ರಗ್ಗು, ೪-೬ ಒಳ್ಳೇ ಮಲಮಲ್ಲಿನ ಥಾನುಗಳು ಹಾಗು ೨-೩ ಅತ್ಯುತ್ತಮ ಕಾಶ್ಮಿರೀ ಶಾಲು ಇವಿಷ್ಟೇ ಸದ್ಯಕ್ಕೆ ಸಾಕು. ರಾಯರೇ, ಆ ಜಿನಸುಗಳ ಜೊತೆಗೆ ಅವುಗಳ ಪಟ್ಟಿಯನ್ನೂ ಕಳಿಸಿ ಬಿಡಿರಿ. ಅಂದರೆ ಆ ಕೂಡಲೆ ಹಣ ಕಳಿಸಿ ಕೊಡಲಿಕ್ಕೆ ವಿಹಿತವಾಗುತ್ತದೆ."

"ಮಹಾರಾಜರೇ, ತಾವು ನಮ್ಮಗಳ ಸಲುವಾಗಿ ಇಂತಿಷ್ಟು ಕಷ್ಟವಹಿಸುತ್ತಿ

ರಲು, ನಾನು ಅವುಗಳ ಬೆಲೆಯ ೩-೪ ನೂರು ರೂಪಾಯಿಗಳನ್ನು ತಮ್ಮಿಂದ ಪಡೆದರೆ ನನ್ನ ಗುರುಭಕ್ತಿಯು ಅಪೂರ್ವವಾದದ್ದೇ ಸರಿ! ಮಹಾರಾಜರೇ, ತಮ್ಮ ಕೃಪಾಪ್ರಸಾದಗಳಿಗಾಗಿ ಹತ್ತೆಂಟುಸಾವಿರ ಖರ್ಚು ಮಾಡಲಿಕ್ಕೆ ಕೂಡ ಈ ವಲ್ಲಭನಿಗೆ ದೇವರು ಕಡಿಮೆ ಮಾಡಿಲ್ಲ."

"ಛೇ, ಛೇ! ವಲ್ಲಭರಾಯರೇ, ಆ ಮಾತನ್ನು ಮಾತ್ರ ನನ್ನೆದುರು ಎಂದೂ ಎತ್ತಬೇಡಿರಿ. ನಾವು ಬೇರೆಯವರ ವಿತ್ತವನ್ನು ವಮನವೆಂದು ತಿಳಿಯುತ್ತಿರುತ್ತೇವೆ. ರಾಯರೇ, ನಮ್ಮ ಹರಿನಾಮದ ಭಾಂಡಾರವು ತುಂಬಿ ತುಳುಕುತ್ತಿರಲು, ನಾವು ಪರಾರ್ಥದ ಕಡೆಗೆ ದೃಷ್ಟಿ ಹೊರಳಿಸಲಿಕ್ಕೆ ಕಾರಣವೇನು? ನನ್ನೀ ಮಠಕ್ಕೆ ನೂರುಗಟ್ಲೆ ಭಕ್ತಜನರು ಬರುತ್ತಿರುತ್ತಾರೆ; ಆದರೆ ನಾನು ಎಂದೂ ಯಾರ ಕೈಯ ಒಂದು ಅಡಿಕೆಯ ಹೋಳಿಗೂ ಕೈ ಹಚ್ಚುತ್ತಿರುವದಿಲ್ಲ. ಅಪ್ಪಾ, ವಲ್ಲಭರಾಯಾ, ನಾವು ಹರಿಭಕ್ತರು. ನಮಗೆ ಯಾವ ಇಚ್ಛೆಯೂ ಇರುತ್ತಿರುವದಿಲ್ಲ. ನಾವು ದೇವರ ನಾಮದ ಅಂಗಡಿಯನ್ನಿಟ್ಟುಕೊಂಡಿದ್ದರೆ, ಇಂದಿಗೆ ನಮ್ಮೀ ಆಶ್ರಮದಲ್ಲಿ ಹಣಕಾಸಿನ ರಾಶಿಗಳು ಅಲ್ಲಲ್ಲಿ ಬಿದ್ದು ಬಿಡುತ್ತಿದ್ದವು; ಆದರೆ ಎಲ್ಲ ವೈಭವಗಳ ಪ್ರತ್ಯಕ್ಷ ಅಕ್ಷಯ್ಯವಾದ ಭಾಂಡಾರವನ್ನೇ ನಾವು ವಶಪಡಿಸಿಕೊಂಡಿರುವಾಗ, ಅಪ್ಪಾ, ನಮಗಾ ಚಂಚಲ ವೈಭವದ ಆಶೆಯೇಕುಂಟಾಗುವದು? ಆದ್ದರಿಂದ ರಾಯರೇ, ನಮಗೆ ನಿಮ್ಮ ಒಂದು ಕವಡಿಯೂ ಬೇಡ. ನೀವು ನಮ್ಮ ಬಳಿಯಿಂದ ನಿಮ್ಮ ಜೀನಸುಗಳ ಬೆಲೆ ತಕ್ಕೊಳ್ಳದಿದ್ದರೆ ನಾವು ಆ ಹಣವನ್ನು ದೇವರ ಹೆಸರಿನಿಂದ ಬಡಬಗ್ಗರಿಗೆ ಹಂಚಿಬಿಡತಕ್ಕವರು; ಆದರೆ ಆ ಕಾರ್ಯದಿಂದ ಬರತಕ್ಕ ಪುಣ್ಯಕ್ಕೆ ಮಾತ್ರ ನೀವೇ ಭಾಗಿದಾರರು ತಿಳಿಯಿತೇ. ನಾವೇನೂ ಕೆರೆಯ ನೀರು ತೆಗೆದು ಬಾವಿಗೆ ಹಾಕಿ ಪುಣ್ಯ ಪಡೆಯುವವರಲ್ಲ!!" ಹೀಗೆ ಕಮಲಾಕಾಂತನು ನುಡಿಯಲು, ವಲ್ಲಭರಾಯನು ಆ ಬಗ್ಗೆ ಹೆಚ್ಚು ಪೃಚ್ಛಾಪೃಚ್ಛ ಮಾಡುತ್ತ ನಿಲ್ಲದೆ "ಒಳ್ಳೇದು; ಆ ಬಗ್ಗೆ ಆ ಮೇಲೆ ನೋಡೋಣ" ಎಂದು ಹೇಳಿ, ಮನಸ್ಸಿನಲ್ಲಿ ತಮ್ಮ ಗುರುಗಳ ನಿರಿಚ್ಛವೃತ್ತಿಯನ್ನು ಕೊಂಡಾಡುತ್ತ ಅಲ್ಲಿಂದ ಹೊರಟು ಹೋದನು.

ಇತ್ತ ವಲ್ಲಭರಾಯನು ಕಮಲಾಕಾಂತನ ಬಳಿಯಲ್ಲಿ ಕುಳಿತಾಗಲೇ ನಿರ್ಮಲೆಯು ಪೇಟೆಯೊಳಗಿಂದ ಬಂದಳು. ಅವಳು ತರತಕ್ಕ ಎಲ್ಲ ಖಾಸಗೀ ಸಾಮಾನುಗಳನ್ನು ಕೊಂಡು ಒಬ್ಬ ಹಮಾಲನ ತಲೆಯಮೇಲೆ ಹೊರಸಿಕೊಂಡು ಬಂದಳು; ಆದರೆ ತಲೆಬಾಗಿಲದೊಳಗಿಂದ ವಲ್ಲಭರಾಯನನ್ನು ಕಾಣುತ್ತಲೆ ಅವಳು ಮುಂದಕ್ಕೆ ಬರದೆ, ಆ ಹಮಾಲನೊಡನೆ ಹಿಂಬದಿಯ ಬಾಗಿಲಿಗೆ ಹೋದಳು; ಹಾಗು ತಾನು ಬಂದ ಸುಳಿವು ಕಮಲಾಕಾಂತ ವಲ್ಲಭರಾಯ ಇವರಾರಿಗೂ ಹತ್ತದ ಹಾಗೆ ಮೆಲ್ಲನೆ ಸಾಮಾನನ್ನಿಳಿಸಿಕೊಂಡು, ಹಮಾಲನಿಗೆ ಕೊಡತಕ್ಕ ಕೂಲಿಯ ಚವಲಿಯ ಬದಲು ಪಾವಲಿಯನ್ನು ಆತನ ಕೈ ಮೇಲಿಟ್ಟಳು. ಕೂಡಲೆ ಆತನು ನಿರ್ಮಲೆಯನ್ನು ಕೊಂಡಾಡತೊಡಗಲು, ನಿರ್ಮಲೆಯು ತನ್ನ ಅನಾಮಿಕೆಯನ್ನು ಮೂಗಿನ ಮೇಲಿಟ್ಟು

ಕೊಂಡು ಆತನನ್ನು ಮಾತಾಡಗೊಡದೆ, ಅಲ್ಲಿಂದ ಸುಮ್ಮನೆ ಹೊರಟು ಹೋಗಲಿಕ್ಕೆ ಸಂಜ್ಞೆ ಮಾಡಿದಳು. ಹಮಾಲನು ಹೊರಟು ಹೋದ ಮೇಲೆ ನಿರ್ಮಲಾ ಶರಣಮ್ಮನು ಕಮಲಾಕಾಂತನ ಬೈಠಕ ಖಾನೆಯ ಪಕ್ಕದ ಗುಪ್ತ ಖಾಸ ಕೋಣೆಗೆ ಆ ಸಾಮಾನುಗಳೊಡನೆ ಬಂದಳು. ಆ ಗುಪ್ತ ಕೋಣೆಯಲ್ಲಿ ನಿರ್ಮಲೆಯ ಹೊರತು ಇನ್ನಾರಿಗೂ ಎಂದೂ ಪ್ರವೇಶವಿರಲಿಲ್ಲ. ಅವಳು ಅಲ್ಲಿಗೆ ಹೋಗಿ ಕಿಂಡಿಯೊಳಗಿಂದ ಸಾಧು-ಭಕ್ತರ ಮುಖಚರ್ಯೆಗಳನ್ನು ನೋಡುತ್ತ, ಅವರ ಸಂಭಾಷಣ ಕೇಳುತ್ತ ನಿಂತುಕೊಂಡಳು. ಆದರಿಂದ ಸಾಧುವು ವಲ್ಲಭರಾಯನ ಕೂಡ ನಡೆದ ಸಂಭಾಷಣವನ್ನು ಹೇಳದಿದ್ದರೂ ಅದು ಅವಳಿಗೆ ತಿಳಿದಿತ್ತು; ಆದರೆ ಕಮಲಾಕಾಂತನು ನಿರ್ಮಲೆಯ ಕೇವಲ ಹಸ್ತಕನಾದುದರಿಂದ ಅವಳಿಂದ ಯಾವುದನ್ನೂ ಬಚ್ಚಿಡುವಂತಿರಲಿಲ್ಲ.

ವಲ್ಲಭರಾಯನು ಹೊರಟು ಹೋದಕೂಡಲೆ ನಿರ್ಮಲೆಯು ಆ ಗುಪ್ತ ಕೋಣೆಯಿಂದ ಹೊರಬಿದ್ದು ಬಂದು ಹಿಂದಿನಿಂದ ಕಮಲಾಕಾಂತನ ಕಣ್ಣುಗಳನ್ನು ಮುಚ್ಚಿದಳು! ಕಮಲಾಕಾಂತ ಸಾಧುಗಳು ಒಳ್ಳೇ ಠಕ್ಕ ಪರಮ ಹಂಸರೇನೋ ನಿಜ; ಆದರೂ ಆಗ ಅವರು ಒಮ್ಮೆಲೆ ಮೆಟ್ಟಿ ಬಿದ್ದರು! ಕೂಡಲೆ ನಿರ್ಮಲೆಯು 'ಹ್ಹಿ-ಹ್ಹಿ-ಹ್ಹಿ' ಎಂದು ಹಲ್ಲು ಕಿರಿಯುತ್ತ: ಶಾಬಾಸ! ಸಾಧುಮಹಾರಾಜರೇ, ಶಾಬಾಸ! ತಾವು ತಮ್ಮ ಸಲುವಾಗಿ ರಗ್ಗು, ಮಲಮಲ್ಲು, ಶಾಲುಗಳನ್ನು ಕಳಿಸ ಹೇಳಿದಿರಿ; ಆದರೆ ಈ ನಿಮ್ಮ ನಿರ್ಮಲಾ ಮುಂಡೆಗಾಗಿ ಒಂದೆರಡು ಒರಟುಒರಟಾದ ಪತ್ತಲುಗಳನ್ನಾದರೂ ಕಳಿಸ ಹೇಳುವ ಬುದ್ಧಿಯು ನಿಮಗುಂಟಾಗಲಿಲ್ಲವಲ್ಲವೆ? ನಾನು ನಿಮಗೆ ಇಂಥ ಭಕ್ತವೃಂದವನ್ನು ದೊರಕಿಸಿ ಕೊಟ್ಟದ್ದರ ಇನಾಮಲ್ಲವೇ ಇದು?"

"ಎಲೆ ನಿರ್ಮಲೇ, ನೀನಂತು ಈ ಕಮಲಾಕಾಂತನ ದೇಹ, ವಸ್ತ್ರ-ಒಡವೆ, ಮನೆ-ಮಠ ಮುಂತಾದವುಗಳಿಗೆಲ್ಲ ಏಕಮಾತ್ರ ಒಡೆಯಳೇ ಆಗಿರುತ್ತೀ. ಎಲೆ ಹುಚ್ಚೀ, ನಾನು ಜನರನ್ನು ನೋಡಿ ವರ್ತಿಸಬೇಡವೇ? ಹಾಗೆ ಮಾಡದಿದ್ದರೆ ಇತ್ತ ನಾನು ಅಗಸ್ತ್ಯ ಋಷಿಯ ಅವತಾರ ತಾಳುವದು; ಹಾಗು ಅತ್ತ ಸೀರೆ-ಕುಪ್ಪುಸಗಳ ಸಾಮಾನಳಿ ಹೇಳುವದು ಅಂದರೆ ನನ್ನ ಕರ್ಮದ ಒಪ್ಪಿಗೆಯನ್ನು ನಾನೇ ಕೊಟ್ಟಂತಾಗುವದಿಲ್ಲವೆ? ನಿರ್ಮಲೆ, ನಾನು ಇತ್ತ ಈ ಮೂರ್ಖನಿಂದ ಇಂಥ ಹಲವು ಪದಾರ್ಥಗಳನ್ನು ಎತ್ತುತ್ತಿರುತ್ತೇನೆ. ನೀನು ಅತ್ತ ಆ ನರ್ಮದೆಯಿಂದ ಬೆಳ್ಳಿ-ಬಂಗಾರ, ಮುತ್ತು-ರತ್ನಗಳ ವಸ್ತ್ರ-ಒಡವೆಗಳನ್ನೆತ್ತಿಹಾಕುವ ಕಾರ್ಯ ನಡಿಸು; ಅಂದರೆ ವರ್ಷಾರು ತಿಂಗಳಲ್ಲಿ ನಾವು ಅವರನ್ನು ಸಂಪೂರ್ಣವಾಗಿ ಸುಲಿದುಕೊಂಡು ಬಿಡೋಣ. ಆ ಮೇಲೆ ನಮಗೆ ಈ ನಮ್ಮ ಹಾಳು ಮಠ-ಆಶ್ರಮಗಳು ಬೇಡ; ಈ ಸಾಧು-ಶರಣಮ್ಮರೂ ಬೇಡ. ಆ ಮೇಲೆ ನನ್ನ ನಿರ್ಮಲೆ ಮತ್ತು ನಾನು ಕೂಡಿ ಎಲ್ಲಿಯಾದರೂ ಹೋಗಿ, ಯಾವದೊಂದು ತೀರ್ಥ-ಕ್ಷೇತ್ರದಲ್ಲಿದ್ದುಕೊಂಡು ಸುಖವಿಲಾಸಗಳಲ್ಲಿ ಕಾಲ ಕಳೆಯೋಣ." ಹೀಗೆಂದು ಹೇಳಿ, ಕಮಲಾಕಾಂತನು ನಿರ್ಮಲೆಯ ಹೃದಯದ ಮೇಲೆ

ಕೈಯಿರಿಸಿ ಆಕೆಯ ಕಪೋಲಗಳನ್ನು ಪಾವನಗೊಳಿಸಿದನು. ಆ ಮೇಲೆ ಅಲ್ಲಿ ಮತ್ತೆ ಏನೇನು ನಡೆಯಿತೆಂಬದನ್ನು ನಾವು ಹೇಳಲಾರೆವು.

ಆ ಇಡೀ ದಿವಸ ಕಮಲಾಕಾಂತರ ಮಠದ ತಲೆಬಾಗಿಲಿಗೆ ಕೀಲೀ ಹಾಕಿದ್ದು, "ಇಂದು ಗುರುಮಹಾರಾಜರ ಮೌನ-ಧ್ಯಾನ-ಸಮಾಧಿಗಳ ದಿನವಾದ್ದರಿಂದ ಯಾವ ಭಕ್ತರಿಗೂ ಒಳಗೆ ಪ್ರವೇಶಿಸಲಿಕ್ಕೆ ಆಸ್ಪದವಿಲ್ಲ." ಎಂಬರ್ಥದ ಬೋರ್ಡು ತೂಗ ಗಟ್ಟಿದ್ದಿತು.

ಆ ದಿವಸ ಕಮಲಾಕಾಂತನು ಒಳ್ಳೇ ಖುಷಿಮೋಜಿನಲ್ಲಿದ್ದನು. ಅವನು ನಿರ್ಮಲೆಯನ್ನು ತನ್ನ ಅಂಕದಲ್ಲಿ ಕೂರಿಸಿಕೊಂಡು ಅವಳಿಗೆ ವಲ್ಲಭರಾಯನಿಂದ ತಾನು ಕೇಳಿ ತಿಳಿದಿದ್ದ ಕುಮುದಿನಿಯ ವಿಷಯದ ಸಂಗತಿಯನ್ನು ತಿಳಿಸಿದನು. ಅದನ್ನು ಕೇಳಿ ಅವಳು ಥೈ, ಥೈ ಎಂದು ಕುಣಿಯಹತ್ತಿದಳು. ಯಾಕಂದರೆ, ಈ ಮೊದಲು ಆಕೆಗೆ ಹೇಳಿದ್ದ ಸರಸಿಯ ಮಾತುಗಳೆಲ್ಲವೂ ಮನಗಂಡವು. ಇನ್ನು ತಾನು ಬೇಗನೆ ಬೇಗೆ ಎಬ್ಬಿಸಿದರೆ, ತನ್ನ ಕೈಗಳು ಚೆನ್ನಾಗಿ ಬೆಚ್ಚಗಾಗುವವೆಂದು ಕಲ್ಪಿಸುತ್ತ ನಿರ್ಮಲೆಯು ಸಾಧುಗಳ ಮಗ್ಗುಲಲ್ಲೇ ಅಡ್ಡಾದಳು. ಅವರಿಬ್ಬರೂ ಆ ದಿನ ಮನಸೋಕ್ತ ಮದ್ಯ-ಮಾಂಸಗಳನ್ನು ಸೇವಿಸಿದ್ದರಿಂದ ಅವರಿಗೆ ಯಾವಾಗ ಸಮಾಧಿ ಹತ್ತಿತೋ ತಿಳಿಯಲಿಲ್ಲ!

ಮರುದಿನ ಮುಂಜಾನೆ ಒಬ್ಬ ಕಾರಕೂನನು ಆಳಿನ ತಲೆಯ ಮೇಲೆ ಒಂದು ಭಾರೀ ಗಂಟು ಹೊರಿಸಿಕೊಂಡು ಕಮಲಾಕಾಂತರ ಮಠಕ್ಕೆ ಬಂದನು. ಇಷ್ಟರೊಳಗೆ ಸಾಧುಗಳು ತಮ್ಮ ಪೂರ್ವರಾತ್ರಿಯ ಕರ್ಮಗಳನ್ನೆಲ್ಲ ಸ್ನಾನದಿಂದ ತೊಳೆದು, ಭಕ್ತಗಣಕ್ಕೆ ದರ್ಶನ ಕೊಡುವ ಸಲುವಾಗಿ ಬೈಠಕಿಗೆ ಬಂದಿದ್ದರು. ಆಗ ಆ ಕಾರಕೂನನು ಆ ಗಂಟನ್ನು ಸಾಧುಗಳ ಮುಂದಿರಿಸಿ, "ಇದನ್ನು ವಲ್ಲಭರಾಯರು ತಮಗಾಗಿ ಕಳಿಸಿರುತ್ತಾರೆ; ಸ್ವೀಕರಿಸಬೇಕು" ಎಂದು ಹೇಳಿ ಹೊರಡಲನುವಾದನು.

"ರಾಯರು ಬೆಲೆಯ ಪಟ್ಟಿಯನ್ನು ಕಳಿಸಲಿಲ್ಲವೇ?" ಎಂಬ ಕಮಲಾಕಾಂತನ ಪ್ರಶ್ನೆಗೆ, "ಇಲ್ಲ"ವೆಂದು ಕಾರಕೂನನಂದನು. ಹಾಗಾದರೆ ವಲ್ಲಭರಾಯರನ್ನೇ ದರ್ಶನಕ್ಕೆ ಕಳಿಸಿಕೊಡು" ಎಂದು ಆಜ್ಞೆಯಾಗಲು, ಕಾರಕೂನ-ಜವಾನರು ಸಾಧುಗಳಿಗೆ ಪೊಡಮಟ್ಟು ಹೊರಟು ಹೋದರು.

ಆ ಸುಪ್ರಭಾತ ಸಮಯದಲ್ಲಿ ಕಮಲಾಕಾಂತನ ದರ್ಶನಕ್ಕೆ ಭಕ್ತಜನರಿಗಿಂತ ಭಕ್ತಿಣಿ-ಶಿಷ್ಯಿಣಿಯರ ಸಮೂಹವೇ ಹೆಚ್ಚಾಗಿ ಬರುತ್ತಿತ್ತು; ಯಾಕಂದರೆ ಆಗ ಆ ನವತರುಣಿಯರು ಮಹಾರಾಜರಿಗೆ ಆರುತಿ ಬೆಳಗುತ್ತಿದ್ದರು. ಭಕ್ತಿಣಿಯರೆಲ್ಲರೂ ಆ ಭಾರೀ ಬೆಲೆಯ ಬಟ್ಟೆ-ಬರೆಗಳ ಕಡೆಗೆ ಟಕಮಕವೆಂದು ನೋಡಲು, ಮಹಾರಾಜರು ಮುಗುಳು ನಗೆಯಿಂದ:—"ನೋಡಿದಿರಾ, ನಮಗುಂಟಾದ ನಿಮ್ಮ ಶಿಷ್ಯಗಣದ ಈ ತೊಂದರೆಯನ್ನು? ಒಂದು ಅನಾಥಾಲಯಕ್ಕೆ ನಾನು ಕೆಲ ಬಟ್ಟೆಗಳನ್ನು ಕಳಿಸಬೇಕಾಗಿದೆಯೆಂದು ನಾನು ನನ್ನೊಬ್ಬ ಶಿಷ್ಯನ ಮುಂದೆ ಅಂದು ನನಗೊಬ್ಬ ಒಳ್ಳೇ ಅಂಗಡಿಕಾರನ ಭೆಟ್ಟಿ ಮಾಡಿಸಲು ಹೇಳಲು, ಆತನು ಆ ಕೂಡಲೆ ಈ ೫-೬

ನೂರು ರೂಪಾಯಿ ಬೆಲೆಯ ಜೀನಸುಗಳನ್ನು ತಾನೇ ಕಳಿಸಿಕೊಟ್ಟಿರುತ್ತಾನೆ. ನಾ-ನಿನ್ನು ಏನು ಹೇಳಿದರೂ ಆತನು ನನ್ನಿಂದ ಇವುಗಳ ಬೆಲೆಯಲ್ಲಿಯ ಒಂದು ಕಾಸು ಕೂಡ ತಕ್ಕೊಳ್ಳುವವನಲ್ಲ. ನಾನಂತೂ ಯಾರಿಂದಲೂ ಒಂದು ಪೈಯ ದೇಣಗಿ-ದೇಕಾರಗಳನ್ನು ಸ್ವೀಕರಿಸಬಾರದೆಂದು ಸಂಕಲ್ಪ ಮಾಡಿರುತ್ತೇನೆ. ಆದುದರಿಂದ ಇನ್ನು ಮೇಲೆ ನಾನು ಇಂಥ ಯಾವ ಜೀನಸಿಗಾಗಿಯೂ 'ಬ್ರ' ಎಂದು ಉಚ್ಚರಿಸ ಲಾರೆನು ಈ ನನ್ನ ಕೃತಿಯು ಯೋಗ್ಯವಾಗಬಹುದಲ್ಲವೆ ನಿರ್ಮಲವ್ವಾ?'' ಎಂದು ಬಳಿಯಲ್ಲೇ ನಿಂತಿದ್ದ ತಮ್ಮ ಪ್ರೀತಿಪಾತ್ರಳಾದ ನಿರ್ಮಲೆಯ ಕಡೆಗೆ ನೋಡುತ್ತ ನುಡಿದರು.

''ಅಹುದರೀ-ಅಹುದು! ಯಾರೆದುರಿಗೂ ಏನೂ ಹೇಳುದ ಹಾಗಾಗಿದೆ. ನಾಳಿಗೆ ೮-೧೦ ಒಳ್ಳೇ ರೇಶ್ಮಿಯ ಸೀರೆಗಳು ಬೇಕಾಗಿದ್ದವು; ೧೦-೨೦ ಉತ್ತಮ ಕುಪ್ಪುಸದ ಖಣಗಳೂ ಬೇಕಾಗಿದ್ದವು; ಆದರೆ ಮಹಾರಾಜರೇ, ನಾವಿನ್ನು ಆ ಬಗ್ಗೆ ಯಾರ ಮುಂದೂ 'ಚ'ಕಾರ ತೆಗೆಯುವಂತಿಲ್ಲ''

''ಎಂಥ ಸೀರೆಗಳು ಬೇಕು? ಇಳಕಲ್ಲಿನವೋ-ಧರ್ಮಾವರದ್ದೋ?'' ಎಂದು ನೆರೆದ ಭಕ್ತರಲ್ಲಿಯ ಒಬ್ಬ ಸಿರಿವಂತಳು ಕೇಳಲು,

''ಕುಪ್ಪುಸದ ಖಣಗಳು ಯಾವ ನಮೂನೆಯವಿರಬೇಕು?'' ಎಂದು ಇನ್ನೊಬ್ಬಳು ಕೇಳಿದಳು.

''ಏಕೆ, ನೀವೂ ಆ ನಮ್ಮ ಶಿಷ್ಯನ ಕಾಪಿಯನ್ನೇ ತೀಡಬೇಕೆಂದಿರುವಿರಾ? ಆದರೆ ಇನ್ನು ಯಾರು ಏನು ಕಳಿಸಿದರೂ ನಾನು ಅವುಗಳಿಗೆ ಕೈ ಕೂಡ ಹಚ್ಚದೆ, ಹಾಗೆಯೇ ಹಿಂದಿರುಗಿ ಕಳಿಸಿಬಿಟ್ಟೇನು'' ಮಹಾರಾಜರು ಒಳ್ಳೇ ಆಥ್ಯತೆಯಿಂದ ಹೇಳಿದರು.

''ಗುರುಮಹಾರಾಜರೇ, ನಮ್ಮ ಭಕ್ತ ಜನರ ಅಳಲೀ ಭಕ್ತಿಯನ್ನು ತಾವು ದೊಡ್ಡ ಮನಸ್ಸಿನಿಂದ ಸ್ವೀಕರಿಸದಿದ್ದರೆ, ನಮ್ಮಗಳಿಗೆ ಹೇಗೆ ಸುಖ ಸಮಾಧಾನವೆನಿಸ ಬೇಕು? ಗುರುದೇವಾ, ದೇವರಿಗೆ ನಾನಾ ಶೃಂಗಾರಗಳನ್ನೂ, ಪಂಚ ಪಕ್ವಾನ್ನಗಳ ನೈವೇದ್ಯವನ್ನೂ ಮಾಡುತ್ತಾರಲ್ಲ, ಅದು ಆ ದೇವರಿಗೆ ಬಿಕ್ಕೆ ಹತ್ತಿದೆಯೆಂದೂ ಕೂಳಿಗೆ ಗತಿಯಿಲ್ಲೆಂದೂ ಮಾಡುತ್ತಿರುವರೇನು?'' ಎಂದು ಆ ಶ್ರೀಮಂತ ಶಿಷ್ಯಳು ಕೇಳಲು;

''ಗುರುಮಹಾರಾಜರೇ, ಈ ನಮ್ಮ ರಿಂದಮ್ಮನವರ ಮನಸ್ಸು ಮುರಿಯ ಬೇಡಿರಪ್ಪಾ! ನೀವು ಇವರ ಆ ಅಲ್ಪ 'ಪತ್ರಂ ಪುಷ್ಪಂ ಫಲಂ ತೋಯಂ'ಗಳನ್ನು ಸ್ವೀಕರಿಸಿ, ಇವರನ್ನು ಉದ್ಧರಿಸಿರಿ'' ಎಂದು ನಿರ್ಮಲಾ ಶರಣಮ್ಮನು ಒಳ್ಳೇ ಕಳಕಳಿಯಿಂದ ನಡುವೇ ಮಾತನಾಡಿದಳು. ಆಗ ಕಮಲಾಕಾಂತನು ನಿರ್ಮಲೆಯ ಕಡೆಗೆ ಅರ್ಥಪೂರ್ಣದೃಷ್ಟಿಯಿಂದ ನೋಡುತ್ತ:—''ಒಳ್ಳೇದು ಇದೊಂದು ಸಲ ಈ ಭಕ್ತಳ ಇಚ್ಛೆಯನ್ನು ಪೂರೈಸುವೆನು.'' ಎಂದು ಅಭಯವನ್ನಿತ್ತನು.

ಆ ಮೇಲೆ ಅಲ್ಲಿ ಕಲೆತಿದ್ದ ಆ ನವತರುಣಿಯರಲ್ಲಿಯ ಕೆಲವರು ಮಹಾರಾಜರಿಗೆ ತಮ್ಮ ಕೈಗಳನ್ನು ತೋರಿದರು; ಕೆಲವರು ತಮ್ಮ ಕಾಮಿತ ಪ್ರಶ್ನಗಳನ್ನು ಕೇಳಿದರು; ಕೆಲವರು ತಮಗೆ ಸಂತತಿಯಾಗಬೇಕೆಂದು ಕೋರಿದರು. ಹೀಗೆ ಪ್ರತಿಯೊಬ್ಬರೂ ತಮಗಿಷ್ಟವಾದ ವಿಷಯವನ್ನು ಗುರುಚರಣದಲ್ಲಿ ನಿವೇದಿಸಿದರು; ಹಾಗು ಪ್ರತಿಯೊಬ್ಬರೂ ಕಮಲಾಕಾಂತನ ಚರಣಗಳ ಮೇಲೆ ಮಸ್ತಕವಿರಿಸಿ ನಮಿಸಿದರು. ಸಾಧುವು ಅವರನ್ನೆಲ್ಲ ಹಿಡಿದೆತ್ತಿ ಅವರ ತಲೆಯ ಮೇಲೆ ಕೈಯಾಡಿಸಿ ಕಳಿಸಿಕೊಟ್ಟನು.

ಕಮಲಾಕಾಂತನು ಹೀಗೆ ಅಲ್ಲಿ ತನ್ನ ಅನಂತವಾದ ಲೀಲೆಗಳನ್ನು ತೋರಿಸುತ್ತ, ಯೋಗಸಾಧನ-ಭಕ್ಷ್ಯಸಾಧನಗಳನ್ನು ಸಾಧಿಸುತ್ತಿದ್ದರೂ ಆತನಿಂದ ಪ್ರಜ್ಞಾಹತರಾದ ಭಕ್ತವೃಂದಕ್ಕೆ ಆತನ ನಿಜರೂಪವು ಎಷ್ಟೋ ದಿವಸಗಳ ವರೆಗೆ ಕಾಣಲೇ ಇಲ್ಲ.

---

## ಗುರುಗಳ ಮಠದಲ್ಲಿ.

ಈ ಮೊದಲು ಪಿಶಾಚನೃತ್ಯ ಪ್ರಕರ್ಣದಲ್ಲಿ ಹೇಳಿದಂತೆ ವಲ್ಲಭರಾಯನು ಶಂಕರರಾಯನಿಗೆ ವಿಜಾಪುರದಿಂದ ಬಂದ ಸರಸಿಯ ಪತ್ರದೊಳಗಿನ ಸಂಪೂರ್ಣ ಸಂಗತಿಯನ್ನು ತಿಳಿಸಿರಲಿಲ್ಲ. ಕುಮುದಿನಿಯು ಪ್ರಭಾಕರನೊಡನೆ ವಿಜಾಪುರಕ್ಕೆ ಹೋಗಿದ್ದರೂ ಇನ್ನೂ ಆಕೆಯು ತನ್ನ ಮಲತಾಯಿಗೆ ಭೆಟ್ಟಿಯಾಗಿಲ್ಲವೆಂಬದಿಷ್ಟೇ ಮಾತನ್ನು ಆತನು ತಮ್ಮನಿಗೆ ಹೇಳಿದ್ದನು. ಆದರಿಂದ ಶಂಕರರಾಯನು ಕುಮುದಿನಿಯ ಮೇಲೆ ಒಂದು ಬಗೆಯ ಸಿಟ್ಟಾಗಿ ಅಂದು ಹೆಚ್ಚಾಗಿ ಚಡಪಡಿಸಿದನು; ಆದರೆ ಮುಂದೆ ವಲ್ಲಭರಾಯನು ಹೈದ್ರಾಬಾದಿಗೆ ಹೋದಾಗ ಹಾಗು ನರ್ಮದೆಯು ನಿರ್ಮಲೆಯೊಡನೆ ಕಮಲಾಕಾಂತನ ವನಿತಾ ಭಾಂಡಾರವನ್ನು ಪ್ರವೇಶಿಸಿದ ದಿವಸ ಕುಮುದಿನಿಯು ತಾನಾಗಿ ಪ್ರಭಾಕರನೊಡನೆ ಬಳ್ಳಾರಿಗೆ ಹಿಂದಿರುಗಲು, ಮತ್ತು ವಿಜಾಪುರದಲ್ಲಿ ನಡೆದ ಸಮಸ್ತ ಸಂಗತಿಯನ್ನು ತನ್ನ ಗಂಡನಿಗೆ ತಿಳಿಸಲು ಶಂಕರರಾಯನ ಮನಸ್ಸಿನಲ್ಲುಂಟಾಗಿದ್ದ ಆಕೆಯ ವಿಷಯದ ದುಷ್ಪರಿಣಾಮವು ಕ್ಷಣಹೊತ್ತಿನಲ್ಲೇ ಅಳಿಸಿ ಹೋಯಿತು. ಹೈದ್ರಾಬಾದಿಗೆ ಹೋಗಿದ್ದ ವಲ್ಲಭರಾಯನು ಮುಂದೆ ೨-೩ ದಿನಗಳಲ್ಲಿ ಮರಳಿ ಬರಲು, ಕಮಲಾಕಾಂತ ಸಾಧುಗಳ ಬೋಧದ ಮೇರೆಗೆ ಆತನೂ ಕುಮುದಿನಿಯ ಸುದ್ದಿ ತೆಗೆಯಲಿಲ್ಲ.

ನೆಗೆಣ್ಣಿಯು ಇದುವರೆಗೆ ಆಕೆಯೊಡನೆ ಅಸಹಕಾರತನದಿಂದಲೂ ವಿರುದ್ಧವಾಗಿಯೂ ವರ್ತಿಸುತ್ತಿದ್ದರೂ ಕುಮುದಿನಿಯ ಭಾವನು ಅವಳನ್ನು ಬಹು ಪ್ರೀತಿಯಿಂದ ನಡಿಸಿಕೊಳ್ಳುತ್ತಿದ್ದನು; ಆದರೆ ಈ ಸಾರೆ ಕುಮುದಿಯು ವಿಜಾಪುರದಿಂದ ತಿರುಗಿ ಬಂದ ಮೇಲೆ ವಲ್ಲಭರಾಯನು ಎಂದಿನಂತೆ ಆಕೆಯನ್ನು ಕುರಿತು "ಯಾವಾಗ ಬಂದೆ? ಅಲ್ಲಿ ಎಲ್ಲರೂ ಕ್ಷೇಮವೇ?" ಮುಂತಾದ ಔಪಚಾರಿಕ ಪ್ರಶ್ನೆ ಕೂಡ

ಮಾಡಲಿಲ್ಲ. ಇದರಿಂದ ತಾನಿಲ್ಲವಾಗ ತಮ್ಮ ಮನೆಯಲ್ಲಿ ತನ್ನ ವಿಷಯವಾಗಿ ಏನೇನೋ ವಿಪರೀತ ಚೇತು ನಡೆದಿರಬೇಕೆಂದು ಆ ಚತುರಳು ಕೂಡಲೆ ಕಂಡು ಹಿಡಿದಳು; ಹಾಗು ಆ ಬಗ್ಗೆ ಯೋಚನೆಗೊಳಗಾದಳು. ಅಂದು ರಾತ್ರಿ ಅವಳು ತನ್ನ ಗಂಡನಾದ ಶಂಕರರಾಯನನ್ನು ಕುರಿತು ಆ ವಿಷಯವಾಗಿ ಕೇಳಲು,

ಶಂಕರ:—ಕುಮುದಿನೀ, ನೀನೇನು ಅತಿಥಿ-ಅಭ್ಯಾಗತಳೆಂದು ಅಣ್ಣಾನವರು ನಿನ್ನನ್ನು ಹಾಗೆಂದು ಕೇಳಬೇಕೆಂದಿರುವೆಯಾ? ನೀನು ಇಲ್ಲಿಗೆ ಬಂದು ೨-೩ ದಿನಗಳಾದ್ದರಿಂದ ಅಣ್ಣಾನು ಆ ಬಗ್ಗೆ ನಿನ್ನನ್ನು ಏನೂ ಕೇಳಿರಲಿಕ್ಕಿಲ್ಲವಷ್ಟೇ? ಅದಿರಲಿ. ಕುಮುದಿನೀ, ಇತ್ತೀಚೆಗೆ ನಮ್ಮ ಅತ್ತಿಗೆಯು ಬೇರೆ ಮಾರ್ಗವನ್ನೇ ಹಿಡಿದಿರುವಳು.

ಕುಮು:—ಹಾಗಂದರೇನು?

ಆಗ ಶಂಕರರಾಯನು ತನ್ನ ಅಣ್ಣನೂ ಅತ್ತಿಗೆಯೂ ಕೂಡಿಯೇ ಆ ಕಮಲಾಕಾಂತ ಸಾಧುವಿನ ಗುರುದೀಕ್ಷೆಪಡೆದಿರುತ್ತಾರೆಂಬದನ್ನು ತಿಳಿಸಿದನು. ಅದನ್ನು ಕೇಳಿ ಕುಮುದಿನಿಯು:—"ನಾಥರೇ, ನಾವುಗಳು ಕೂಡ ಆ ಸಾಧುಗಳ ದರ್ಶನಕ್ಕೊಮ್ಮೆ ಹೋಗೋಣವೇ? ಈ ಸಂಸಾರಪಾಶದಲ್ಲಿ ಸಿಲುಕಿರುವ ಆತ್ಮನನ್ನುದ್ಧರಿಸಲಿಕ್ಕೆ ಗುರುಮಹಾರಾಜರ ಹೊರತು ಬೇರೆ ಗತಿಯೇ ಇರುವುದಿಲ್ಲವಂತೆ!"

"ಅಂದರೆ, ನಿನ್ನೊಡನೆ ನಾನೂ ಜಪಮಾಲೆ ಹಿಡಿಯಬೇಕೆಂದಿರುತ್ತೀಯೇನು?" ಹೀಗೆಂದು ಶಂಕರರಾಯನು ವಿನೋದದಿಂದ ನುಡಿಯುತ್ತಿರಲು, ನರ್ಮದೆಯು ಹೊರಗಿನಿಂದ ಅವರ ಕೋಣೆಯ ಬಾಗಿಲ ಬಡಿಯುತ್ತ ಶಂಕರರಾಯನನ್ನು ಕೂಗಿದಳು. ಕೂಡಲೆ ಆತನು ಚಟಕ್ಕನೆ ಎದ್ದು ಬಾಗಿಲು ತೆರೆದು ನರ್ಮದೆಯೊಡನೆ ಮಾತನಾಡುತ್ತ ಬೇರೆ ಕಡೆಗೆ ಹೋದನು. ಕುಮುದಿನಿಯು ಅಟ್ಟದಿಂದ ಕೆಳಗಿಳಿದು ಬಂದು ತನ್ನ ನಿತ್ಯಕ್ರಮಕ್ಕೆ ತೊಡಗಿದಳು.

ಶಂಕರರಾಯನು ನರ್ಮದೆ ಹೇಳಿದ ಯಾವ ಕೆಲಸಕ್ಕೆಂದು ಹೊರಗೆ ಹೋಗಿದ್ದನೋ ಅದನ್ನು ನೆರವೇರಿಸಿ ಬಂದು ಕುಮುದಿನಿಯನ್ನು ಕಂಡನು. ಕಮಲಾಕಾಂತನು ಕುಮುದಿನಿಯ ದುರ್ವರ್ತನದ ಯಾವ ಮಾತನ್ನೂ ಈಗಲೆ ಪಟ್ಟಣಿಗೆಯನ್ನಾಗ ಮಾಡಕೂಡದೆಂದು ವಲ್ಲಭರಾಯನಿಗೆ ಕಟ್ಟಪ್ಪಣೆಗೈದಿದ್ದರೂ, ಆ ಸಂಗತಿಯನ್ನು ಸಾಧುವಿನ ಮುಖದಿಂದ ಕೇಳಿ ತಿಳಿದಿದ್ದ ನಿರ್ಮಲೆಯು ಅದಕ್ಕೆ ಚೆನ್ನಾಗಿ ಉಪ್ಪು-ಕಾರ ಹಚ್ಚಿ ಅದನ್ನು ನರ್ಮದೆಯ ಮುಂದೆ ಹೇಳಿದ ಬಳಿಕ, ಆ ನರ್ಮದಮ್ಮನ ಬಾಯ ಮದ್ದಿನ ಸ್ಫೋಟವಾಗಲಿಕ್ಕೆ ತಡವೇತರದು? ಅವಳು ತನಗೂ ಗುರುಮಹಾರಾಜರಿಗೂ ಕುಮುದಿನಿಯ ವಿಷಯದಲ್ಲಿ ನಡೆದ ಸಂಭಾಷಣದ ಪ್ರತಿಯೊಂದು ಶಬ್ದವನ್ನು ಇದ್ದಕ್ಕಿದ್ದ ಹಾಗೆ ಹೇಳಿದ್ದರಿಂದ ವಲ್ಲಭರಾಯನು ಚಕಿತನಾದನು. ಆ ಕೂಡಲೆ ಆತನು ಅದಾವುದನ್ನೂ ಬೇರೆಯವರ ಮುಂದೆ ಹೇಳಕೂಡದೆಂಬ ಸೂಚನೆಯನ್ನು ಹೆಂಡತಿಗೆ ತಿಳಿಸಿದನು; ಆದರೂ ನಿರ್ಮಲಾಶರಣಮ್ಮಳಂತಹ ಕೊಳ್ಳಿಕೊಡುವವರು ಆ ಬತ್ತಲೆ ಕುಣಿಯಬಹುದಾದ ಸುಪ್ರಸಂಗವನ್ನು ಏನೆಂದು ಕಳೆದುಕೊಳ್ಳುವರು?

ಅಂದು ನರ್ಮದೆಯ ಬಳಿಗೆ ನಿರ್ಮಲೆಯು ಬಂದ ಮೇಲೆ ಅವರೀರ್ವರೊಳಗೆ ಎಷ್ಟೋ ಹೊತ್ತಿನ ವರೆಗೆ ಸಂಭಾಷಣ ನಡೆಯಿತು. ಬಳಿಕ ನರ್ಮದೆಯು ಕುಮು ದಿನಿಗೆ ಕೇಳಿಸುವ ಹಾಗೆ ಪಿಸುಣ ನುಡಿಗಳನ್ನು ನುಡಿಯುತ್ತ ನಿರ್ಮಲೆಯೊಡನೆ ಕಮ ಲಾಕಾಂತನ ಆಶ್ರಮದ ದಾರೀ ಹಿಡಿದಳು. ನರ್ಮದೆಯು ಹೊರಟು ಹೋಗುವಾಗ ಕುಮುದಿನಿ-ಶಂಕರರಾಯರು ತಮ್ಮ ಕೋಣೆಯಲ್ಲಿ ಮಾತನಾಡುತ್ತ ಕುಳಿತಿದ್ದರು. ನರ್ಮದೆಯ ಆ ಬಿರುನುಡಿಗಳು ಶಂಕರರಾಯನಿಗೂ ಕೇಳಿಸಿದವು. ಆಗ ಕುಮುದಿ ನಿಯ ಮುಖವು ಒಮ್ಮೆಲೆ ಬಾಡಿ ಹೋಯಿತು; ಶಂಕರರಾಯನಿಗೂ ಕೆಡಕೆನಿಸಿತು. ಅದಕ್ಕಾಗಿ ಆತನು ಆ ಬಗ್ಗೆ ತನ್ನ ಹೆಂಡತಿಗೆ ಏನೋ ಪ್ರಶ್ನೆ ಮಾಡತಕ್ಕವನು; ಅಷ್ಟ ರಲ್ಲಿ ವಲ್ಲಭರಾಯರು ಅಲ್ಲಿಗೆ ಬಂದರು. ಕೂಡಲೆ ಆತನು ಕೋಣೆಯಿಂದ ಹೊರಬಿದ್ದು ಬಂದನು. ಆಗಿನ ವಲ್ಲಭರಾಯನ ಮುಖಚರ್ಯೆಯಿಂದ ಕುಮುದಿನಿಯು ಈ ಮೊದಲು ಹೇಳಿದ್ದು ನಿಜವೆಂದು ಆತನಿಗೆ ಅನಿಸಿತು. ಬೆಳಗಿನಿಂದ ತಮ್ಮ ಮನೆ ಯಲ್ಲಿ ಯಾರೂ ವಾದಿಸದಿರುವಾಗ, ಜಗಳ-ತಂಟೆಗಳೊಂದೂ ಒದಗದಿರಲಿಕ್ಕೆ ಅಥವಾ ತಮ್ಮ ಅಂಗಡಿಗಳಲ್ಲಿಯೂ ಯಾವ ಬಗೆಯ ಅಕಾರ್ಯ ನಡೆಯದಿರುವಾಗ ತಮ್ಮ ಅಣ್ಣನು ಇಂದು ಹೀಗೆ ಕ್ರೋಧಸಂತಪ್ತನಾಗಿರಲಿಕ್ಕೆ ಕಾರಣವೇನೆಂಬ ಬಗ್ಗೆ ಶಂಕರ ರಾಯನಿಗೂ ಸೋಜಿಗವೆನಿಸಿತು. ಬಳಿಕ ವೃತ್ತಪತ್ರವನ್ನೋದುವ ನೆವದಿಂದ ಆತನು ದಿವಾಣಖಾನೆಯೊಳಗಿನ ಮೇಜಿನ ಬಳಿಯ ಕುರ್ಚಿಯೊಂದರಲ್ಲಿ ಕುಳಿತನು. ಆಗ ವಲ್ಲಭರಾಯನು ಆತನನ್ನುದ್ದೇಶಿಸಿ:--"ಶಂಕರರಾಯಾ, ಇವಳೆತ್ತ ಹೋದಳು?" ಎಂದು ಪ್ರಶ್ನೆ ಮಾಡಿದನು.

"ನಿರ್ಮಲಮ್ಮಳೊಡನೆ ಇದೀಗ ಎಲ್ಲಿಗೋ ಹೊರಟು ಹೋಗಿರುತ್ತಾರೆ."

"ಅದಿರಲಿ. ಇಲ್ಲಿ ಕುಳಿತುಕೊಂಡು ನೀನೇನು ಮಾಡುವೆ?"

"ಏನೂ ಇಲ್ಲ."

"ಶಂಕರಾ, ಉಡುಪನ್ನು ಧರಿಸಿಕೊಂಡು ನನ್ನೊಡನೆ ಬಾ" ಎಂದಂದು ವಲ್ಲಭರಾಯನು ಹೇಳಿದನು. ಶಂಕರರಾಯನು ಪೋಷಾಕು ಧರಿಸಿಕೊಂಡು ಬಂದೊಡನೆಯೇ ವಲ್ಲಭರಾಯನು ಕುಮುದಿನಿಯ ಕಡೆಗೆ ತಿರಸ್ಕಾರ ಸೂಚಕ ದೃಷ್ಟಿ ಯಿಂದ ನೋಡುತ್ತ ಹೊರಹೊರಟನು. ಶಂಕರರಾಯನೂ ಆತನನ್ನು ಹಿಂಬಾಲಿ ಸಿದನು. ವಿಜಾಪುರಕ್ಕೆ ಹೋದಾಗ ಪ್ರಭಾಕರಪಂತ ಹಾಗು ಆತನ ಕುಟುಂಬ ದವರ ಪ್ರೇಮಲ ಸಹವಾಸದಿಂದ ಕುಮುದಿನಿಗೆ ಎಲ್ಲಿ ತುಸ ಶಾಂತಿ-ಸಮಾಧಾನಗಳು ಲಭಿಸಿದ್ದವೋ ಅವುಗಳೆಲ್ಲ ಭಾವ-ನೆಗೆಣ್ಣೆಯರ ಈ ಪ್ರಕಾರದ ತಿರಸ್ಕೃತ ವರ್ತನದಿಂದ ಲೋಪವಾದವು!

ಗಂಡ-ಮೈದುನರು ಮನೆಯಿಂದ ಹೊರಹೊರಡುವ ಪೂರ್ವದಲ್ಲಿಯೇ ನರ್ಮ ದೆಯು ಕಮಲಾಕಾಂತ ಸಾಧುವಿಗೆ ಕುಮುದಿನಿಯು ವಿಜಾಪುರದಿಂದ ಮರಳಿ ಬಂದ ಸಂಗತಿ ಹೇಳಲು ಆತನ ಮಠದ ದಾರೀ ಹಿಡಿದಿದ್ದಳು. ವಲ್ಲಭರಾಯನಿಗೆ ತನ್ನ ಮಠದ

ದೀಕ್ಷೆ ಕೊಟ್ಟಂದಿನಿಂದ ಕಮಲಾಕಾಂತ ಶೃಗಾಲನು ಆತನನ್ನು ಸಂಪೂರ್ಣವಾಗಿ ವಶ ಪಡಿಸಿಕೊಳ್ಳುವ ಸಲುವಾಗಿ ತನ್ನ ನಿತ್ಯದ ಇರವನ್ನು ಒಮ್ಮೆಲೆ ಬಹುಮಟ್ಟಿಗೆ ಬದಲಿಸಿದ್ದನು. ಈ ಮೊದಲಿನ ತನ್ನ ಮಲಮಲ್ಲಿನ ದೋತರ, ಸಿಲ್ಕಿನ ಶರ್ಟು, ಸೆಂಟ್ಸಗಳ ವಾಸನೆಯ ಕರವಸ್ತ್ರಗಳು, ಕೈಯೊಳಗಿನ ವಜ್ರದುಂಗುರ ಮುಂತಾದ ಒಡೆದು ಕಾಣಿಸುವ ಜೀನಸುಗಳನ್ನೆಲ್ಲ ಆತನು ಮುಚ್ಚುಮರೆಮಾಡಿದ್ದನು. ಇತ್ತೀಚಿಗೆ ಆತನು ಕೇವಲ ೫-೬ಮೊಳದ ಲಂಡಪಂಚೆಯನ್ನುಡಹತ್ತಿದ್ದು, ಮೈಯಲ್ಲಿ ಖದ್ದರಿನ ಒರಟಾದ ಅಂಗಿ ಹಾಗು ತಲೆಗೆ ಅಂಥದೇ ಒಂದು ಟೊಪ್ಪಿಗೆ ಇವುಗಳನ್ನಷ್ಟೇ ಧರಿಸಹತ್ತಿದ್ದನು; ಆದರೆ ತನ್ನ ತಿಂಡಿ-ತೀರ್ಥಗಳ ಬಡ್ಜೆಟ್ಟಿನಲ್ಲಿ ಮಾತ್ರ ಆತನು ಕೊಂಚವೂ ಕತ್ತರಿಯಾಡಿಸಿರಲಿಲ್ಲ. ಇಷ್ಟೇ ಅಲ್ಲ; ಆತನ ತಿಂಬುಂಬುವ ಪ್ರಕಾರಗಳು ದಿನಮೇಕ ರೀತಿಯಿಂದ ವರ್ಧಮಾನಸ್ಥಿತಿಯಲ್ಲಿದ್ದವು. ಕಮಲಾಕಾಂತನ ಆ ಮಾನಭಾವೀತನಕ್ಕೆ ವಲ್ಲಭರಾಯನು ತೀರ ಮರುಳಾಗಿದ್ದನು. ಕಮಲಾಕಾಂತನ ಸಾನ್ನಿಧ್ಯದಲ್ಲಿ ಸಂತತವಾಗಿ ಕುಳಿತು ಅವನ ಬಾಯಿಂದ ಹೊರಬೀಳುತ್ತಿದ್ದ ಬೋಧಾಮೃತವಚನಗಳನ್ನು ಪಾನ ಮಾಡುವದರ ಹೊರತು ಆತನು ತನ್ನ ಅಂಗಡಿ ಉದ್ಯೋಗಗಳ ನಿತ್ಯದ ಕಾರ್ಯಕ್ರಮಕ್ಕೆ ಕೂಡ ಲೋಪವನ್ನುಂಟು ಮಾಡಹತ್ತಿದ್ದನು. ನರ್ಮದೆಯಂತೂ ಕಮಲಾಕಾಂತನಲ್ಲಿ ತೀರ ಅನುರಕ್ತಳಾಗಿ ಹೋಗಿದ್ದಳು. ಈ ಬಗೆಯಾಗಿ ಆ ದಂಪತಿಗಳು ಆ ಸಾಧುವಿನ ಸೇವೆಗೆ ಒಮ್ಮನಸಿನಿಂದಲೂ ಏಕೋಭಾವದಿಂದಲೂ ತೊಡಗಿದ್ದರು.

ನರ್ಮದೆಯು ನಿರ್ಮಲಾ ಶರಣಮ್ಮನೊಡನೆ ಸಾಧುವಿನ ಬೈಠಕಖಾನೆಯನ್ನು ಪ್ರವೇಶಿಸಿದಾಗ ಸಾಧುಮಹಾರಾಜರು ದೇಶೀ-ವಿದೇಶೀ ಪದಾರ್ಥಗಳ ಫಲಾಹಾರವನ್ನು ಆಕಂಠವಾಗಿ ಭುಂಜಿಸಿ, ಇಝೀಚೇರಿನ ಮೇಲೆ ಅಡ್ಡಾಗಿ ಚಿರೂಟ ಸೇದ ತೊಡಗಿದ್ದರು. ನಿತ್ಯನಿಯಮದಂತೆ ನರ್ಮದೆಯು ಅಲ್ಲಿಗೆ ಹೋದಕೂಡಲೆ ಅವರ ಪಾದಗಳ ಮೇಲೆ ತಲೆಯನ್ನಿಟ್ಟು ನಮಸ್ಕರಿಸಿದಳು. ಸಾಧುಮಹಾರಾಜರ ಚರಣಗಳಿಗೆ ಪ್ರಿಯ ಭಕ್ತಿಣಿಯರ ಮಸ್ತಕಗಳ ಹಾಗು ಪರ್ಯಾಯದಿಂದ ಅವರುಗಳ ಸುಕೋಮಲ ಗಲ್ಲಗಳ ಸ್ಪರ್ಶವನ್ನು ದೂರೀಕರಿಸಬೇಕೆಂದೆನಿಸುತ್ತಿರಲಿಲ್ಲ. ಅಂದು ನರ್ಮದೆಯು ಕಮಲಾಕಾಂತರ ಚರಣಗಳ ಮೇಲೆ ಮಸ್ತಕವಿರಿಸಲು, ಆ ಸ್ಪರ್ಶದಿಂದ ಆತನು ರೋಮಾಂಚಿತನಾಗಿ ಆ ಭಕ್ತಳ ಸುಂದರವಾದ ಕೇಶಗುಚ್ಛಗಳ ಕಡೆಗೆ ಟಕಮಕವೆಂದು ನೋಡುತ್ತಿದ್ದನು. ಮುಂದೆ ೧-೨ ನಿಮಿಷಗಳಲ್ಲಿ ಅವನು ತನ್ನ ಎರಡೂ ಕೈಗಳಿಂದ ಅವಳ ಮಸ್ತಕವನ್ನು ಹಿಡಿದೆತ್ತಿದನು; ಹಾಗು ಶುಭಾಶೀರ್ವಾದವನ್ನಿತ್ತು ಸಮ್ಮುಖದಲ್ಲಿ ಕೂಡ್ರ ಹೇಳಿದನು. ನರ್ಮದೆಯು ಕೂಡ್ರಲು, ನಿರ್ಮಲೆಯು ಸಾಧುಗಳಿಗೆ ಹೊಂದಿ ಕುಳಿತು ಅವರ ಕಾಲುಗಳನ್ನು ಒತ್ತತೊಡಗಿದಳು. ಅದರಿಂದ ನರ್ಮದೆಗೂ ಗುರುಚರಣಸೇವೆಯ ಮೋಹವು ಆವರಿಸದಾಯಿತು. ಸಾಧುಗಳು ಬಾಯಿಂದ 'ಬೇಡ-ಬೇಡ' ಎಂದೆನ್ನುತ್ತಿದ್ದರೂ ನರ್ಮದೆಯು ಆ ಗುರುದೇವನ ಎರ

ಡನೇ ಕಾಲನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಅದನ್ನು ಭಕ್ತಿಭಾವದಿಂದ ಹಿಚುಕಹತ್ತಿದಳು. ಆಗ ಆ ಸಾಧುಗಳು ಬ್ರಹ್ಮಾನಂದದಲ್ಲಿ ನಿಮಗ್ನರಾಗಿ ಹೋದರು!

ಇತ್ತ ವಲ್ಲಭರಾಯನು ಶಂಕರರಾಯನನ್ನು ಕರೆದುಕೊಂಡು ತಮ್ಮ ಅಂಗಡಿಯೊಳಗಿನ ಖಾಸಗೀ ಕೋಣೆಯನ್ನು ಪ್ರವೇಶಿಸಿದನು; ಹಾಗು ಅಲ್ಲಿ ಆತನಿಗೆ ಕೆಲ ಮಾತುಗಳನ್ನು ಹೇಳಿದನು. ಅವುಗಳನ್ನು ಕೇಳಿ ಆತನು ಅಣ್ಣನ ಕಡೆಗೆ ಭ್ರಮಿಷ್ಟನಂತೆ ನೋಡತೊಡಗಿದನು. ಆಗ ವಲ್ಲಭರಾಯನು: "ಈ ಮಾತನ್ನು ನಿನ್ನೆದುರಿಗೆ ಹೇಳಿ ನಿನ್ನ ಮನಸ್ಸಿಗೆ ಅಸ್ವಸ್ಥತೆಯನ್ನುಂಟು ಮಾಡುವ ಇಚ್ಛೆಯು ನನಗೆ ಕೊಂಚವೂ ಇರಲಿಲ್ಲ; ಆದರೆ ತಮ್ಮಾ, ನೀನಿನ್ನೂ ಚಿಕ್ಕವನಿರುತ್ತೀ. ಲೋಕದ ಸ್ಥಿತಿಗತಿಯ ಜ್ಞಾನವು ನಿನಗಿನ್ನೂ ಚೆನ್ನಾಗಿ ಆಗಿರುವದಿಲ್ಲ. ನಿನಗೆ ನಿನ್ನ ಸರಳ ಸ್ವಭಾವದಂತೆಯೇ ಜಗತ್ತೆಲ್ಲವೂ ಕಾಣುತ್ತದೆ; ಆದುದರಿಂದ ನಿನ್ನ ಹಿರಿಯಣ್ಣನೆಂದು ನಾನು ನಿನ್ನನ್ನು ಜಾಗ್ರತಗೊಳಿಸುವುದು ನನ್ನ ಕರ್ತವ್ಯವಾಗಿರುತ್ತದೆ....."

"ಅಣ್ಣಾ, ಆಕೆಯು ದುರ್ವ್ಯವಹಾರಕ್ಕೆ ತೊಡಗಿದಳೆಂಬದು ನಿಮಗೆ ಹೇಗೆ ಗೊತ್ತಾಯಿತು? ನೀವು ಹಿರಿಯರು; ನನಗೆ ಪಿತೃಸಮಾನರಿರುತ್ತೀರಿ. ಇಂಥ ಬಾಬಿನಲ್ಲಿ ನಾನು ನಿಮಗೆ ಎದುರು ಪ್ರಶ್ನೆ ಮಾಡುವದು ಸರಿಯಲ್ಲ; ಆದರೂ ನನಗೆ ಈ ಬಗ್ಗೆ ಏನೆನಿಸುವದೋ ಅದನ್ನು ತುಸ ಸ್ಪಷ್ಟವಾಗಿ ಕೇಳಿದೆನು. ಆ ಬಗ್ಗೆ ನನ್ನನ್ನು ಕ್ಷಮಿಸಬೇಕು."

"ಶಂಕರಾ, ನಿನಗೆ ಜಗತ್ತಿನ ಅನುಭವವಿರದ್ದರಿಂದ ನಾನು ಹೇಳಿದ ಸಂಗತಿಯ ಬಗ್ಗೆ ನಿನಗೆ ಒಮ್ಮೆಲೆ ವಿಶ್ವಾಸವುಂಟಾಗಲಾರದು; ಆ ಬಗ್ಗೆ ನಾನು ನಿನಗೆ ದೋಷವನ್ನೂ ಕೊಡಲಾರೆನು. ಕೇಳು, ನನಗೆ ಏನೇನು ಕೇಳಬೇಕಾಗಿದೆಯೋ ಅದನ್ನೆಲ್ಲ ಮುಚ್ಚುಮರೆ ಮಾಡದೆ ಕೇಳು."

"ಅಣ್ಣಾ, ನೀವನ್ನುವದು ಯೋಗ್ಯವಿದೆ; ಆದರೆ ನಾನು ತೀರ ಮೋಸಹೋಗುವಂತಹ ಭೋಳೇ ಭಾವಿಕನಿರುವೆನೆಂದು ನನಗನಿಸುವದಿಲ್ಲ. ದೇವರೇ ಬಲ್ಲ! ಅತ್ತಿಗೆಯವರಮನಸ್ಸಿನಲ್ಲಿ ಈಕೆಯ ವಿಷಯವಾಗಿ ಏನು ತಪ್ಪು ತಿಳುವಳಿಕೆಯುಂಟಾಗಿದೆಯೋ ತಿಳಿಯಲಸಾಧ್ಯವು; ಆದರೆ ಅದರಿಂದ ಇತ್ತೀಚೆಗೆ ಅವರಿಗೆ ಈಕೆಯ ಪ್ರತಿಯೊಂದು ಕೃತಿಯು ವಿರುದ್ಧವಾಗಿಯೇ ತೋರುತ್ತದೆ. ಅಣ್ಣಾ, ನಾನು ಅತ್ತಿಗೆಯ ನಿಂದೆಮಾಡುತ್ತೇನೆಂದು ನೀವು ಗ್ರಹಿಸಕೂಡದು. ಅವರು ನನಗೆ ತಾಯಿಯ ಸಮಾನರು; ಆದರೆ ಈಕೆಯಾದರೂ ನನ್ನೊಡನೆ ಖೊಟ್ಟಿ ಪ್ರತಾರಣ ಮಾಡಿಯಾಳೆಂದು ನನಗಂತೂ ಅನಿಸುವದಿಲ್ಲ."

"ಶಂಕರಾ, ನರ್ಮದೆಯು ಎಷ್ಟೇ ಅಶಿಕ್ಷಿತ ಹೆಂಗುಸಾಗಿದ್ದರೂ ಅವಳು ಕುಮುದಿನಿಯನ್ನು ನಿಷ್ಕಾರಣವಾಗಿ ದ್ವೇಷಮಾಡುವಂತಹ ಹಳ್ಳಿಗಾಡಿನವಳಲ್ಲ. ಎಲಾ, ನಮಗೆ ಮಕ್ಕಳಿಲ್ಲ-ಮರಿಯಿಲ್ಲ! ನಮ್ಮಗಳ ಮುದ್ದಿಗೆ ಪಾತ್ರನಾದವನೆಂದರೆ, ನಮ್ಮ ಮನೆಯಲ್ಲಿ ನೀನೊಬ್ಬನೇ. ಅಂಥ ನಿನ್ನ ಹೆಂಡತಿಯ ದ್ವೇಷಾಸೂಯೆ ಮಾಡುವ

ದುರ್ಬುದ್ಧಿಯು ನರ್ಮದೆಗಾಗಲಿ ನನಗಾಗಲಿ ಕನಸಿನಲ್ಲಾದರೂ ಉಂಟಾದೀತೇನು? ಕುಮುದಿನಿಯು ಮೊದಲಿನಿಂದಲೂ ದುರ್ವ್ಯವಹಾರಕ್ಕೆ ಹತ್ತಿದವಳೆಂದು ನಾನು ನಿನಗೆ ಖಂಡಿತವಾಗಿಯೂ ಹೇಳಬಲ್ಲೆನು."

"ಹಾಗಾದರೆ ನಿಮ್ಮ ಮನಸ್ಸು ಆಕೆಯನ್ನು ಕರೆಯ-ಕಳಿಸ ಬಂದ ಆ ಪ್ರಭಾಕರ ಪಂತನ ವಿಷಯಕ್ಕೆ ಶಂಕಿತವಾಗಿರುವದಲ್ಲವೇ?"

"ಶಂಕರಾ, ಪ್ರಭಾಕರನ ಬಹಿರಾಡಂಬರದ ಮೇಲಿಂದ ಆತನಲ್ಲಿ ಯಾವ ಬಗೆಯ ಸಂಶಯ ತಾಳಲಿಕ್ಕೂ ಆಸ್ಪದವಿರುವದಿಲ್ಲ; ಆದರೂ ಆತನ ವಿಷಯದ ಯಾವ ಸಂಗತಿಯೂ ನಮಗೆ ಗೊತ್ತಿರದ್ದರಿಂದ ಆ ಮನುಷ್ಯನ ಬಗ್ಗೆ ಏನನ್ನೂ ಹೇಳಲಿಕ್ಕೆ ಬರುವಂತಿಲ್ಲ. ಕುಮುದಿನಿಯನ್ನು ಅವಳ ಮಲತಾಯಿಯ ಬಳಿಗೇ ಕರೆದೊಯ್ಯುತ್ತೇನೆಂದು ನನ್ನೆದುರಿಗೆ ಸುಳ್ಳು ಹೇಳಿ, ಅವಳನ್ನು ತನ್ನ ಮನೆಗೆ ಕರೆದೊಯ್ದು ಆತನ ಉದ್ದೇಶವೇನಿರಬೇಕೆಂಬದು ತಿಳಿಯದಾಗಿದೆ."

"ಹಾಗಾದರೆ ನೀವು ಕುಮುದಿನಿಯನ್ನು ವ್ಯಭಿಚಾರಿಣಿಯೆಂದೇ ತಿಳಿದಿರುತ್ತೀರೇನು?"

"ಶಂಕರಾ, ನೀನು ಹೀಗೆ ಸುಮ್ಮನೆ ನನಗೆ ಅಡ್ಡ-ತಿಡ್ಡ ಪ್ರಶ್ನೆಗಳನ್ನು ಮಾಡಬೇಡ. ನನಗೊಂದು ಮಾತಿನ ಸಂಶಯ ಬಂದಿದೆ; ಆದರೆ ಆ ಬಗ್ಗೆ ಪ್ರತ್ಯಕ್ಷ ಖಾತ್ರಿ ಮಾಡಿಕೊಳ್ಳದ ಹೊರತು ಸುಮ್ಮನೆ ಗದ್ದಲ ಮಾಡುವದರಲ್ಲಿ ಅರ್ಥವಿಲ್ಲ. ನಾನೇ ಸ್ವತಃ ಕುಮುದಿನಿಗೆ ಈ ಸಂಗತಿಯನ್ನು ಕೇಳಬೇಕೆಂದಿದ್ದೆನು; ಆದರೆ ಸುಮ್ಮನೆ ಅವಸರಪಡುವದರಿಂದೇನು ಪ್ರಯೋಜನ? ನೀನೇ ಸಾವಧಾನದಿಂದ ಆಕೆಯ ಇಂಗಿತವನ್ನು ತಿಳಿದುಕೋ; ಆದರೆ ಆಕೆಯ ಬಗ್ಗೆ ನಮ್ಮಗಳಿಗೆ ಸಂಶಯವುಂಟಾಗಿದೆಯೆಂಬದನ್ನು ಮಾತ್ರ ಅವಳಿಗೆ ಸರ್ವಥಾ ತಿಳಿಯಗೊಡಬೇಡ. ಪ್ರಭಾಕರನೊಡನೆ ಅವಳು ಅಷ್ಟು ದಿವಸ ಅಲ್ಲಿಗೇಕೆ ಹೋದಳೆಂಬದು ತಿಳಿಯದ ಹೊರತು ನನ್ನ ಮನಸ್ಸಿನ ಸಂಶಯವು ತೊಲಗಲಿಕ್ಕಿಲ್ಲ."

"ಅಣ್ಣಾ, ಹಾಗಾದರೆ ನಾನು ಈಗಲೆ ಆ ಮಾತಿನ ಇತ್ಯರ್ಥ ಮಾಡುತ್ತೇನೆ."

"ಥೂ! ಹಾಗೆ ರೇಗಿಗೆದ್ದರೆ ನಿಜ ಸಂಗತಿಯು ಹೊರಬೀಳಲಾರದು. ಶಂಕರಾ, ಹೀಗೆ ಸಿಟ್ಟಿನ ಭರದಲ್ಲಿ ಕೇಳುವದಿದ್ದರೆ ನಾನು ಸ್ವತಃ ಆಗಲೆ ಅವಳನ್ನು ಕೇಳಿ ಬಿಡುತ್ತಿದ್ದೆನು; ಆದರೆ ತಮ್ಮಾ, ನಾಲ್ಕು ಜನರಲ್ಲಿ ಈ ಮಾತಿನ ಬೊಬ್ಬಾಟವಾಗಬಾರದಾಗಿದೆ. ನೀನು ಯುಕ್ತಿ-ಪ್ರಯುಕ್ತಿಗಳಿಂದ ಅವಳ ಮನಸ್ಸಿನೊಳಗಿನ ಇಂಗಿತವನ್ನು ತಿಳಿದುಕೋ. ಆ ಮೇಲೆ ಏನು ಮಾಡಬೇಕಾಗುವದೋ ಅದನ್ನು ನಾನು ನೋಡಿಕೊಳ್ಳುತ್ತೇನೆ. ಒಳ್ಳೇದು, ಶಂಕರಾ, ನಾನು ನಿನ್ನನ್ನು ಒಂದು ಸ್ಥಳಕ್ಕೆ ಕರೆದೊಯ್ಯಬೇಕೆಂದಿರುತ್ತೇನೆ."

"ಅದೆಲ್ಲಿಗೆ?" ಶಂಕರನು ಶಂಕಿತನಾಗಿ ಕೇಳಿದನು.

"ನಮ್ಮ ಗುರುಗಳ ಮಂದಿರಕ್ಕೆ."

"ಅಣ್ಣಾ, ಇಂಥ ಸಾಧು-ಸಂತರಲ್ಲಿ ನನಗೆ ಎಳ್ಳಷ್ಟೂ ನಂಬಿಗೆಯಿಲ್ಲ. ಅಂದ ಬಳಿಕ ನಾನು ಅಲ್ಲಿಗೆ ಬಂದು ಮಾಡುವದೇನು?"

"ಶಂಕರಾ, ನೀನು ಕಡು ಮೂರ್ಖನಿರುತ್ತೀ. ನಮ್ಮ ಕಮಲಾಕಾಂತ ಮಹಾರಾಜರು ಅಂತಿಂಥ ಲಫಂಗ ಬಿಡಾಡಿ ಸಾಧುಗಳಾಗಿಲ್ಲ. ಒಮ್ಮೆ ನೀನು ಅಲ್ಲಿಗೆ ಬಂದೆಯೆಂದರೆ, ಅಲ್ಲಿಂದ ಕಾಲ್ದೆಗೆಯಲಿಕ್ಕೆ ನಿನ್ನ ಮನಸ್ಸೇ ಒಪ್ಪಲಿಕ್ಕಿಲ್ಲ; ಅದಲ್ಲದೆ ನಮ್ಮ ಗುರುಗಳು ಭೂತ-ಭವಿಷ್ಯಗಳನ್ನು ಚನ್ನಾಗಿ ಹೇಳುತ್ತಾರೆ. ನಾನು ಅವರಿಗೆ ನಿನ್ನ ಕೈ ತೋರಿಸಬೇಕೆಂದಿರುತ್ತೇನೆ."

"ಆದರೆ ಅಣ್ಣಾ, ನೀವು ಹೇಳಿದ ಕುಮುದಿನಿಯ ಸಂಬಂಧದ ಸಂಗತಿ ಕೇಳಿ ನನ್ನ ಮನಸ್ಸು ಅಲ್ಲೋಲ-ಕಲ್ಲೋಲಾಗಿ ಹೋಗಿದೆ. ಅದರಿಂದ ನಾನು ನಮ್ಮ ಮನೆಗೆ ಯಾವಾಗ ಹೋದೇನೋ ಎಂದೆನಿಸಿದೆ."

"ತಮ್ಮಾ, ಶಂಕರಾ, ಈ ಪರಿ ಸಂತಾಪಗೊಳ್ಳುವದು ತರವಲ್ಲ. ಗುರುಗಳು ತಮ್ಮ ಪವಿತ್ರ ಹಸ್ತವನ್ನು ನಿನ್ನ ತಲೆಯಮೇಲೊಮ್ಮೆ ಇಟ್ಟರೆಂದರೆ ನಿನ್ನ ಮನಸ್ಸು ತನ್ನಷ್ಟಕ್ಕೆ ತಾನೇ ಶಾಂತವಾಗುವದು ಶಂಕರಾ, ನನಗೆ ಗುರುಗಳ ದರ್ಶನವಾಗುವ ಮೊದಲು ನಾನಾದರೂ ನಿನ್ನ ಮತದವನೇ ಆಗಿದ್ದೆನು; ಆದರೆ ನನ್ನ ಪೂರ್ವಾರ್ಜಿತ ಪುಣ್ಯವು ಬಲವತ್ತರಾದ್ದರಿಂದ ನಿರ್ಮಲಾ ಶರಣಮ್ಮನವರ ಒತ್ತಾಯದ ಮೇರೆಗೆ ಗುರುಗಳ ಕಡೆಗೆ ಹೋಗುವ ಸುಬುದ್ಧಿಯು ನನಗುಂಟಾಯಿತು. ನಾನು ಗುರುದೀಕ್ಷೆ ಹೊಂದಿದ ನಂತರ ನನ್ನ ಮನಸ್ಸಿಗೆ ಎಷ್ಟು ಆಹ್ಲಾದವುಂಟಾಗಿದೆಯೆಂಬದನ್ನು ನಾನೇನು ಹೇಳಲಿ!" ಈ ಬಗೆಯಾಗಿ ಗುರುಸ್ತುತಿಗೆಯ್ಯುತ್ತ ವಲ್ಲಭರಾಯನು ತಮ್ಮನನ್ನು ಸಾಧುಗಳೆಡೆಗೆ ಕರೆದೊಯ್ದನು.

ವಲ್ಲಭರಾಯನು ಮೇಲೆ ಹೇಳಿದಂತೆ ಶಂಕರರಾಯನ ಮನಸ್ಸಿನಲ್ಲಿ ಕುಮುದಿನಿಯ ವಿಷಯವಾಗಿ ಸಂಶಯ ಪಿಶಾಚಿಯನ್ನು ಪ್ರವೇಶಗೊಳಿಸಿದರೂ ಕುಮುದಿನಿಯ ಬಗ್ಗೆ ಶಂಕರರಾಯನ ಮನಸ್ಸು ಸ್ವಲ್ಪವೂ ಕಲುಷಿತವಾಗಲಿಲ್ಲ. ತನ್ನ ಅಣ್ಣನ ಮನಸ್ಸನ್ನು ನೋಯಿಸಬಾರದೆಂಬದೊಂದೇ ಉದ್ದೇಶದಿಂದ ಆತನು ಅಂದು ಕಮಲಾಕಾಂತನ ಮಠಕ್ಕೆ ಹೋದನು. ವಲ್ಲಭರಾಯನು ಶಂಕರರಾಯನೊಡನೆ ಮಠವನ್ನು ಪ್ರವೇಶಿಸಿದಾಗ ನಿರ್ಮಲೆಯೂ ನರ್ಮದೆಯೂ ಕಮಲಾಕಾಂತನ ಪಾದಸೇವೆಗೆಯ್ಯುತ್ತ ಅತ್ಯಿತ್ತಣದ ಹರಟೆ ಹೊಡೆಯುತ್ತ ಕುಳಿತಿದ್ದರು. ಕುಮುದಿನಿಯು ವಿಜಾಪುರದಿಂದ ಮರಳಿ ಬಂದ ವರ್ತಮಾನವು ಸಾಧುಗಳಿಗೆ ಈ ಮೊದಲೆ ತಿಳಿದಿತ್ತು. ವಲ್ಲಭರಾಯನು ಪ್ರವೇಶಿಸಿದೊಡನೆಯೇ ಕಮಲಾಕಾಂತನು: "ಅಪ್ಪಾ, ದೇವಾ, ಬನ್ನಿರಿ-ಬನ್ನಿರಿ." ಎಂದಂದು ಶಂಕರರಾಯನ ಕಡೆಗೆ ಟಕಮಕವೆಂದು ನೋಡಹತ್ತಿದನು. ವಲ್ಲಭರಾಯನು ತಾನು ಗುರುಗಳಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿ, ತಮ್ಮನಿಗೂ ಮಾಡಹೇಳಿದನು. ಆ ಸಾಧುವನ್ನು ಕಂಡು ಶಂಕರರಾಯನ ಮನಸ್ಸಿಗೆ ತೃಪ್ತಿಯುಂಟಾಗಲಿಲ್ಲ. ಅಣ್ಣನ ಭಿಡೆಗಾಗಿ ಆತನು ಹೇಗಾದರೊಮ್ಮೆ ನಮಿ

ಸಿದನು; ಮತ್ತು ಅಣ್ಣನ ಪಕ್ಕದಲ್ಲಿಯೇ ಕುಳಿತುಕೊಂಡನು. ಗಂಡನು ಅಲ್ಲಿಗೆ ಬಂದರೂ ನರ್ಮದೆಯು ಗುರುಚರಣಗಳ ಸೇವೆ ಮಾಡುತ್ತಲೇ ಕುಳಿತಿದ್ದಳು; ಯಾಕಂದರೆ ಪರಮ ಪವಿತ್ರವಾದ ಗುರುವಿನ ಮಂದಿರದಲ್ಲಿ ಚಿಕ್ಕವರು-ದೊಡ್ಡವರು, ಅಣ್ಣ-ತಂಗಿ, ಗಂಡ-ಹೆಂಡತಿ ಈ ಭೇದಾಭೇದವೆಲ್ಲುಳಿಯಬೇಕು? ಎಲ್ಲರೂ ಒಂದೇ ಗುರುವಿನ ಶಿಷ್ಯರು. ಅದರಿಂದ ಎಲ್ಲರೂ ಸಮದೃಷ್ಟಿಯಿಂದ ನಡೆಯಬೇಕು. ವಲ್ಲಭರಾಯ-ಶಂಕರರಾಯರು ಬಂದು ಕುಳಿತ ಕೂಡಲೆ ಕಮಲಾಕಾಂತನು ನರ್ಮದೆಯ ಕಡೆಗೆ ಹೊರಳಿ:"-ಒಳ್ಳೇದು, ಹೊರಡಿರಿನ್ನು. ಇಂದು ರಾತ್ರಿ ನಿಜಸಮಾಧಿಹೊಂದಿ, ನಾಳೆಗೆ ನಿಮ್ಮ ಪ್ರಶ್ನೆಯ ಉತ್ತರ ಹೇಳುವೆನು." ಕಮಲಾಕಾಂತನ ಅಂತಃಕರಣವು ಬೆಣ್ಣೆಗಿಂತಲೂ ಮೃದುವಾಗಿದ್ದರೂ, ಅವನ ಶಿಸ್ತು ಮಾತ್ರ ಬಹು ಕಠಿಣ ತರದ್ದಾಗಿತ್ತು. ಸಾಧುಗಳ ಬಾಯಿಂದೊಮ್ಮೆ ಶಬ್ದವು ಹೊರಟಿತೆಂದರೆ ಅದರಂತೆ ನಡೆಯಲೇ ಬೇಕಾಗುತ್ತಿತ್ತು. ಇಲ್ಲದಿದ್ದರೆ ಅವಧೂತರ ಸಹವಾಸವದು! ಎಂಥ ಶಾಪ ಕೊಟ್ಟಾರು ಮತ್ತು ಏನು ಹಾನಿಮಾಡಿಯಾರೆಂಬದು ಪರಬ್ರಹ್ಮನಿಗೆ ಕೂಡ ತಿಳಿಯಲಶಕ್ಯವಾಗಿತ್ತು! ಗುರುಗಳು ಆಜ್ಞೆಗೆಯ್ಯುತ್ತಲೆ ನಿರ್ಮಲೆ-ನರ್ಮದೆಯರು ಚಟಕ್ಕನೆ ಎದ್ದು, ಗುರುಗಳಿಗೆ ನಮಿಸಿ ಅಲ್ಲಿಂದ ಸುಮ್ಮನೆ ಹೊರಟು ಹೋದರು. ಅವರಿಬ್ಬರೂ ಹೊರಟು ಹೋದ ಕೂಡಲೆ ಸಾಧುಗಳು ಮುಗುಳು ನಗೆಯಿಂದ: "ವಲ್ಲಭರಾಯರೇ, ಮತ್ತೇನು ವರ್ತಮಾನ?" ಎಂದೆನ್ನಲು,

"ಮಹಾರಾಜರೇ, ತಾವು ತ್ರಿಕಾಲಜ್ಞರು. ತಮಗೆ ಅರಿಯದ ವಿಷಯವಾವದಿದೆ? ಮತ್ತು ನಾನು ತಮಗೆ ಅದನ್ನೇನು ತಿಳಿಸಬೇಕಾಗಿದೆ?"

"ಇವರಾರು? ನಿಮ್ಮ ಬಂಧುಗಳಂತೆ ತೋರುವರಲ್ಲ?" ಎಂದು ಶಂಕರರಾಯನನ್ನು ದಿಟ್ಟಿಸಿ ನೋಡುತ್ತ ಸಾಧುಗಳು ಕೇಳಿದರು.

"ಅಹುದು. ತಮ್ಮ ಚರಣದರ್ಶನಕ್ಕೆಂದು ಕರೆತಂದಿರುತ್ತೇನೆ."

"ನಮ್ಮ ಚರಣಗಳೆಂಥವು! ಆ ಸಚ್ಚಿದಾನಂದನಾದ ಭಗವಂತನ ಚರಣವನ್ನು ಹೊಂದಿರಿ. ಅದಿರಲಿ. ಇವರ ಹೆಂಡತಿಯು ಬಂದಳೇ?"

"ಮಹಾರಾಜರೇ, ತಮ್ಮ ಭವಿಷ್ಯವೆಂದಾದರೂ ಸುಳ್ಳಾದೀತೆ?"

"ಈ ನಿಮ್ಮ ತಮ್ಮನು ಬಹು ಭಾಗ್ಯವಂತನಂತೆ ತೋರುತ್ತಾನರೀ ರಾಯರೇ." ಶಂಕರರಾಯನ ಕಡೆಗೆ ಸಹೇತುಕ ದೃಷ್ಟಿಯಿಂದ ನೋಡಿ ಅಂದರು.

"ಮಹಾರಾಜರೇ, ಈತನ ಕೈನೋಡುವ ಶ್ರಮವಹಿಸುವಿರೇನು?"

"ವಲ್ಲಭರಾಯರೇ, ಇವರ ಕೈನೋಡುವ ಅವಶ್ಯಕತೆಯೇ ಇರುವದಿಲ್ಲ. ನೀವು ನನ್ನೆದುರಿಗೆ ಆ ಮಾತೆತ್ತಿದಂದಿನಿಂದ ನನ್ನ ಮನಸ್ಸಿಗೂ ತುಸ ಚಡಪಡಿಕೆಯಾಗಿದೆ; ಮತ್ತು ಇಂದು ಇವರನ್ನು ಪ್ರತ್ಯಕ್ಷ ನೋಡಿದ ಬಳಿಕಂತೂ..........."

"ಮಹಾರಾಜರೇ, ಹಾಗಾದರೆ ಸಮಾಧಿಯಲ್ಲೇನಾದರೂ ಪತ್ತೆ ಹತ್ತಿತೆ?"

"ವಲ್ಲಭರಾಯರೇ, ಇವರ ಗ್ರಹಗಳ ಬಲವು ಹೆಚ್ಚಾಗಿರುವದರಿಂದಲೇ ಇವರ

ಹೆಂಡತಿಯ ವೃತ್ತಿಯಲ್ಲಿ ತುಸ ಚಾಂಚಲ್ಯವುಂಟಾಗಿದ್ದರೂ ಅವು ಸರಿಪಡಿಸುತ್ತವೆ; ಆದರೆ ಈ ಕಾಲಕ್ಕೆ ಯೋಗ್ಯ ಉಪಾಯ ಕೈಕೊಳ್ಳದಿದ್ದರೆ…………"

"ಅಂದರೆ ತಮಗೆ ಅಂಥ ಅನಿಷ್ಟ ಯೋಗವು ಕಂಡು ಬರುವದೇನು?"

"ಒಂದು ವೇಳೆ ಅನಿಷ್ಟ ಯೋಗವಿದ್ದರೂ ನಮ್ಮಂತಹ ಹರಿಭಕ್ತರಿಗೆ ಅದರ ಪರಿವೆಯೇಕೆ? ವಲ್ಲಭರಾಯರೇ, ನಾಳೆಗೆ ನೀವು ನಿಮ್ಮ ನಾದಿನಿಯನ್ನು ನಿಮ್ಮ ಜೊತೆಗೆ ದರ್ಶನಕ್ಕೆ ಕರೆತನ್ನಿರಿ."

"ನಾನು ಇಂದೇ ಅವಳನ್ನು ಕರೆತರಬೇಕೆಂದಿದ್ದೆನು; ಆದರೆ ತಮ್ಮ ಆಜ್ಞೆಯ ಹೊರತು ಕರೆತರುವದು ನನಗೆ ಯೋಗ್ಯವೆನಿಸಲಿಲ್ಲ."

"ನಿಮ್ಮಂತಹ ನನ್ನ ಪರಮಭಕ್ತರಿಗೆ ನಮ್ಮ ಆಜ್ಞೆಯ ಆವಶ್ಯಕತೆಯೇನು? ಆದರೆ ಇಂದು ನೀವು ಅವಳನ್ನು ಕರೆತರದಿದ್ದದ್ದೇ ವಿಹಿತವಾಯಿತು."

"ಹಾಗಾದರೆ ನಾಳೆ ಕರೆತರಲೊ?"

"ನಾನು ನಮ್ಮ ನಿರ್ಮಲೆಯನ್ನು ನಿಮ್ಮ ಮನೆಗೆ ಕಳಿಸಿಕೊಡುತ್ತೇನೆ. ನೀವು ಅವಳೊಡನೆ ಆಕೆಯನ್ನಿಲ್ಲಿಗೆ ಕಳಿಸಿಕೊಡಿರಿ," ಎಂದು ಹೇಳಿ ಸಾಧುಗಳು ಗಹನ ವಿಚಾರದಲ್ಲಿ ಮಗ್ನರಾದರು.

"ಮಹಾರಾಜರೇ, ತಾವು ಈ ದೇಹವನ್ನು ತಮ್ಮ ಸೇವೆಗೆ ಹಚ್ಚಿ ನನ್ನನ್ನು ಹೇಗೆ ಪುನೀತಗೊಳಿಸಿದಿರೋ, ಹಾಗೆಯೇ ಈ ನನ್ನ ಪ್ರೀತಿಯ ತಮ್ಮನನ್ನೂ ಪುನೀತ ನನ್ನಾಗ ಮಾಡಿರಿ."

"ವಲ್ಲಭರಾಯರೇ, ಆ ಬಗ್ಗೆ ನೀವು ಕೊಂಚವೂ ಚಿಂತಿಸಬೇಡಿರಿ. ನಿಮ್ಮ ಮನಸ್ಸಿನಂತೆಯೇ ಎಲ್ಲವೂ ಪರಿಣಮಿಸುವದು. ಇನ್ನೂ ಪ್ರಸಂಗವು ಅಷ್ಟು ಕೈಮೀರಿ ಹೋಗಿರುವದಿಲ್ಲ. ಈಗೀಗ ಪ್ರಾರಂಭವಾಗಿದೆ; ಆದರೆ ಆಕೆಯನ್ನು ಮಾರ್ಗಕ್ಕೆ ಹಚ್ಚುವಂತಹ ರಾಮಬಾಣ ಮಾತ್ರೆಯು ನನ್ನಲ್ಲಿರುತ್ತದೆ. ಶಂಕರರಾಯರೇ, ನೀವು ನಿಮ್ಮ ಮನಸ್ಸನ್ನು ಶಾಂತವಾಗಿರಿಸಿರಿ. ನಿಮ್ಮ ಕಿವಿಗೆ ಏನೇ ಕೇಳಿಸಿದರೂ, ಕಣ್ಣಿಗೆ ಏನು ಕಾಣಿಸಿಕೊಂಡರೂ ನೀವು ನಿಮ್ಮ ಮನಸ್ಸನ್ನು ಚಲಿಸಗೊಡಬೇಡಿರಿ. ರಾಯರೇ, ಈ ಸಂಸಾರಸಾಗರವು ಬಹು ಚಂಚಲವಾಗಿರುತ್ತದೆ. ಇದರಲ್ಲಿ ಬಿದ್ದವನು ಯಾವಾಗ ಗುಟುಗು ನೀರು ಕುಡಿಯಬೇಕಾಗುವದೆಂಬ ಭರವಸೆಯಿರುವದಿಲ್ಲ. ಮೋಹವೆಂಬದು ಎಂಥೆಂಥ ತಪಸ್ವಿಗಳ ಬುದ್ಧಿಯನ್ನೂ ಮಂಕುಗೊಳಿಸಿಬಿಟ್ಟಿದೆ; ಅಂದ ಬಳಿಕ ಬೇರೆ ಮನುಜರ ಪಾಡೇನು? ಇದು ಯಾವ ವ್ಯಕ್ತಿದೋಷವೂ ಇರುವದಿಲ್ಲ. ಮನುಷ್ಯರಿಗೆ ಪ್ರಾಪ್ತವಾಗುವ ಗ್ರಹದೆಸೆಯೇ ಅವರನ್ನು ಆ ಕೆಲಸಕ್ಕೆ ಪ್ರವೃತ್ತರನ್ನಾಗ ಮಾಡುತ್ತದೆ. ನೀವು ಕೇವಲ ಶಾಂತರಾಗಿರ್ರಿ. ವಯಸ್ಸು ಹೆಚ್ಚಿ, ಗೋರಿಯ ದಾರಿ ಹಿಡಿದಂತಹರು ಕೂಡ ಮೋಹಜಾಲದಿಂದ ಹುಚ್ಚರಾಗುತ್ತಿರಲು, ಕುಮುದಿನಿಯಂತಹ ಕೇವಲ ನವತರುಣಿಯ ಪಾಡೇನು? ಇಂಥ ಪ್ರಸಂಗದಲ್ಲಿ ಮುಳ್ಳಿನಿಂದಲೇ ಮುಳ್ಳು ತೆಗೆಯಬೇಕಾಗುತ್ತದೆ. ವಲ್ಲಭರಾಯ-ಶಂಕರರಾಯರೇ,

ನೀವಿನ್ನು ಕೇವಲ ನಿಶ್ಚಿಂತ ಮನಸ್ಕರಾಗಿ ಹೊರಟು ಹೋಗಿರಿ. ಏನರೀ, ನೀವುಗಳು ನಮ್ಮ ಮೇಲೆ ಭಾರ ಹೊರಿಸಿರುತ್ತೀರೆಂದ ಬಳಿಕ, ನಿಮ್ಮ ಮನೆತನದ ಒಳಿತು-ಕೆಡಕುಗಳ ಪರಿವೆಯು ಇನ್ನು ನನ್ನನ್ನು ಕೂಡಿರುತ್ತದೆ. ನೀವು ಈಗ ಸ್ವಸ್ಥಚಿತ್ತದಿಂದ ಹೊರಡಿರಿ; ಹಾಗು ನಿಮ್ಮ ಕುಮುದಿನಿಯನ್ನು ಮಾತ್ರ ನಾಳೆಗೆ ತಪ್ಪದೆ ಇಲ್ಲಿಗೆ ಕಳಿಸಿ ಕೊಡಿರಿ."

ಸಾಧುಗಳು ಇಷ್ಟು ಆಶ್ವಾಸನೆ ಕೊಟ್ಟ ಬಳಿಕ ವಲ್ಲಭರಾಯನು ಸ್ವಸ್ಥಚಿತ್ತದಿಂದ ಎದ್ದು ಅವರ ಚರಣಗಳ ಮೇಲೆ ಮಸ್ತಕವಿರಿಸಿ ಹೊರಡಲನುವಾದನು. ಶಂಕರರಾಯನು ಸಾಧುಗಳಿಗೆ ಕೇವಲ ಕೈ ಜೋಡಿಸಿ ಶಿಷ್ಟಾಚಾರದ ನಮಸ್ಕಾರ ಮಾಡಿದನು. ಆಗ ವಲ್ಲಭರಾಯನು ಆತನ ಕಡೆಗೆ ಕೆಂಗಣ್ಣಿನಿಂದ ನೋಡಿ ಮೆಲ್ಲನೆ:-'ಎಲಾ ಮೂರ್ಖಾ, ಗುರುಗಳ ಚರಣಗಳ ಮೇಲೆ ಮಸ್ತಕವಿರಿಸ ಹೋಗು' ಎಂದು ಹೇಳಿದರೂ, ಆ ಸಾಧುವಿನ ಇದುವರೆಗಿನ ಬಡಬಡಿಕೆಯಿಂದ ಶಂಕರರಾಯನ ಮನಸ್ಸು ತೀರ ಬೇಜಾರುಗೊಂಡಿತ್ತಾದ್ದರಿಂದ ತಾನು ಎಲ್ಲಿರುವೆನು, ಏನು ಮಾಡುತ್ತಿರುವೆನು, ಎಂಬದರ ಭಾನವೇ ಅವನಿಗಿರಲಿಲ್ಲ. ಅಣ್ಣನು ನಿಕ್ಷುಣ್ಣವಾಗಿ ಆಜ್ಞಾಪಿಸಲು, ತಮ್ಮನು ಅನಿರ್ವಾಹವಾಗಿ ಸಾಧುವಿಗೆ ನಮಸ್ಕಾರ ಮಾಡಿ ಅಲ್ಲಿಂದ ಕಾಲ್ದೆಗೆದನು. ಕೆಲ ದಾರಿಯನ್ನು ಇಬ್ಬರೂ ಸುಮ್ಮನೆ ಕ್ರಮಿಸಿದರು. ಆ ಮೇಲೆ ವಲ್ಲಭರಾಯನು:—"ಶಂಕರಾ, ಗುರುಗಳ ವಿಷಯಕ್ಕೆ ನಿನ್ನ ಅಭಿಪ್ರಾಯವೇನು?"

'ಸಾಧುವಿನ ವಿಷಯಕ್ಕೆ ಏನೆನಿಸಿತೋ ಅದು ನನ್ನದು ನನಗೇ ತಿಳಿಯದಾಗಿದೆ.'

"ಅಪ್ಪಾ, ಅವರು ಮಹಾಸಿದ್ಧಪುರುಷರಿರುತ್ತಾರೆ. ಅವರ ಬಾಯಿಂದ ಯಾವ ಶಬ್ದಗಳು ಹೊರಡುವವೋ ಅವುಗಳೆಂದೂ ಸುಳ್ಳಾಗುವದಿಲ್ಲ. ತಮ್ಮಾ, ಶಂಕರಾ, ಕುಮುದಿನಿಯ ಬಗ್ಗೆ ಅವರು ಏನು ಅಂದರೆಂಬದು ನಿನಗೆ ತಿಳಿಯಿತಷ್ಟೇ?"

"ಅಣ್ಣಾ, ಆ ಬಗ್ಗೆ ಈಗ ನನ್ನನ್ನೇನೂ ಕೇಳಬೇಡಿರಿ. ನನ್ನ ಮನಸ್ಸು ಸ್ವಸ್ಥವಿಲ್ಲ."

"ಒಳ್ಳೇದು; ಇನ್ನು ಒಂದೆರಡುಸಾರೆ ನೀನು ಅಲ್ಲಿಗೆ ಬಂದೆಯೆಂದರೆ, ತಾನಾಗಿಯೇ ನಿನಗೆ ಅವರ ಸತ್ಯಸ್ವರೂಪವು ತಿಳಿಯುವದು."

ಅವರಿಬ್ಬರೂ ಗುರುಗಳ ಮಠದಿಂದ ಮನೆಗೆ ಹಿಂದಿರುಗುವಷ್ಟರಲ್ಲಿ ಸಾಯಂಕಾಲವಾಗಿ ಎಲ್ಲ ಕಡೆಗೂ ಜ್ಯೋತಿಗಳು ಬೆಳಗಹತ್ತಿದ್ದವು. ಶಂಕರರಾಯನು ಮನೆಯೊಳಗೆ ಅತ್ತಿತ್ತ ಹೊರಳಿ ಸಹ ನೋಡದೆ, ನೆಟ್ಟಗೆ ಅಟ್ಟವನ್ನೇರಿ ತನ್ನ ಕೋಣೆಯನ್ನು ಹೊಕ್ಕು ಬಿಟ್ಟನು. ವಲ್ಲಭರಾಯನು ಅಡಿಗೆ ಮನೆಯಲ್ಲಿ ಯಾರಿರುವರೆಂಬದನ್ನು ನಿರೀಕ್ಷಿಸುವದಕ್ಕಾಗಿ ಮೆಲ್ಲನೆ ಇಣಿಕಿ ಹಾಕಿದನು. ಅಲ್ಲಿ ತನ್ನ ಹೆಂಡತಿಯಾದ ನರ್ಮದೆಯೊಬ್ಬಳೇ ಅಡಿಗೆ ಮಾಡುತ್ತ ಕುಳಿತಿದ್ದಳು. ಅದರಿಂದ ಆತನು ಅಡಿಗೆಯ ಮನೆಯನ್ನು ಹೊಕ್ಕು ಹೆಂಡತಿಯ ಬಳಿಯಲ್ಲಿ ಹಿತಗುಜಮಾಡುತ್ತ ಕುಳಿತನು.

ಕುಮುದಿನಿಯು ಗಂಡ-ಭಾವ-ನೆಗೆಣ್ಣಿಯರ ದಾರಿ ನೋಡಿ-ನೋಡಿ ಬೇಸತ್ತು

ತನ್ನ ಕೋಣೆಗೆ ಹೋಗಿ ಯೋಚಿಸುತ್ತ ಕುಳಿತಿದ್ದಳು. ಇಷ್ಟರಲ್ಲಿ ಅವಳಿಗೆ ಜಂಪು ಹತ್ತಿತು. ಆದರಿಂದ ಮನೆಯಲ್ಲೆಲ್ಲ ದೀಪಹತ್ತಿ, ಮನೆಯೊಳಗೆ ಬರತಕ್ಕವರೆಲ್ಲರು ಬಂದರೂ ಅವಳಿಗೆ ಅದಾವದೂ ಗೊತ್ತಾಗಲಿಲ್ಲ. ಕುಮುದಿನಿಯು ಕೋಣೆಯಲ್ಲಿ ಮಲಗಿಕೊಂಡದ್ದನ್ನು ಕಂಡು ಶಂಕರರಾಯನು ಗಟ್ಟಿಯಾಗಿ:—"ಕುಮುದಿನೀ, ಒಳಗೆ ಅತ್ತಿಗೆಯವರೊಬ್ಬರೇ ಅಡುಗೆ ಮಾಡುತ್ತಿರಲು, ನೀನು ಇಲ್ಲಿ ಹೀಗೆ ಮಲಗಿರುವುದೇಕೆ?'' ಎಂದನು.

ಶಂಕರರಾಯನ ಆ ದನಿಯನ್ನು ಕೇಳಿ ಕುಮುದಿನಿಯು ತಡವರಿಸುತ್ತ ಎದ್ದು ಕುಳಿತು, ಗಾಬರಿ ದನಿಯಿಂದ:—"ಅವ್ವಯ್ಯಾ! ನನಗೆಂಥ ನಿದ್ದೆ ಬಂದಿತು?" ಎಂದುಕೊಂಡಳು.

\+ + + + + +

"ನಿರ್ಮಲಮ್ಮನವರೇ, ಇದೇನು ನನ್ನ ಕೈಯೊಳಗಿನದಿದೆಯೇ?"

"ಹಾಗಾದರೆ ನಾನು ಹೇಳುತ್ತಿರುವುದೇನು? ನಾನು ಆಕೆಯ ಮಲತಾಯಿಯ ಬಾಯಿಂದ ಆಕೆಯ ಬಗ್ಗೆ ನಾಲ್ಕು ಸಂಗತಿಗಳನ್ನು ಕೇಳಿ ತಿಳಿದಿದ್ದೆನು; ಆದರೆ ಆಗ ಅವುಗಳ ಮೇಲೆ ಅಷ್ಟು ನನ್ನ ವಿಶ್ವಾಸವಿರಲಿಲ್ಲ; ಯಾಕಂದರೆ ಅವಳು ಹೇಳಿ ಕೇಳಿ ಈಕೆಯ ಮಲತಾಯಿಯು! ಆದರಿಂದ ಅವಳು ಏನನ್ನಾದರೂ ಹುಟ್ಟಿಸಿ ಹೇಳುತ್ತಿರಬಹುದೆಂದು ಭಾವಿಸಿದ್ದೆನು; ಆದರೆ ಪ್ರತ್ಯಕ್ಷ ಇವಳ ಭಾವನವರ ಬಾಯಿಂದ ಕೇಳಿದ ಮೇಲೆ ನನ್ನ ಕಿವಿಗಳೇ ಗಡಚಿಕ್ಕಿದವು. ಈ ನಿಮ್ಮ ಕುಮುದಿನಿಯು ಒಳ್ಳೇ ಸುಶಿಕ್ಷಿತಳಲ್ಲವೇ?''

"ಹಾಗಾದರೆ ನಾನೇನು ಅವಳ ಮೇಲೆ ಸುಮ್ಮನೆ ನಜರಿಟ್ಟಿರುತ್ತೇನೆಯೇ? ಇಂಥ ಸುಶಿಕ್ಷಿತ ಲಲನೆಯರೇ ನಮ್ಮ ಜಾಲದಲ್ಲಿ ಸಹಜವಾಗಿ ಸಿಲುಕುವರು.''

"ಅದು ಹೇಗೆ?''

"ಹೇಗಂದರೇನು? ಈ ರಮಣಿಯರು ಶಾಲೆ-ಕಾಲೇಜುಗಳಲ್ಲಿ ಇಂಗ್ಲಿಷ ಕಲಿಯ ಹತ್ತಿದರೆಂದರೆ, ಇವರ ಉಚ್ಚ ಶಿಕ್ಷಣದೊಡನೆ ಇವರ ಬಗೆಬಗೆಯ ಫ್ಯಾಶನ್ನುಗಳೂ ಹೆಚ್ಚುತ್ತ ಹೋಗುವವು; ಹಾಗು ಅವುಗಳನ್ನು ಪೂರೈಸಿಕೊಳ್ಳುವದಕ್ಕೆಂದು ಇವರು ಆ ಮೇಲೆ ಬೇಕುಬೇಕಾದ ಹಾಗೆ ವರ್ತಿಸಲು ಸಿದ್ಧರಾಗುತ್ತಾರೆ. ನಿರ್ಮಲಮ್ಮಾ, ನಾನು ನಿಮಗೇನಾದರೂ ಹೇಳುತ್ತಿರುವೆನೆಂದು ನೀವು ಒಂದು ವೇಳೆ ಕಲ್ಪಿಸಬಹುದು; ಆದರೆ ಈ ದೊಡ್ಡದೊಡ್ಡ ಪಟ್ಟಣಗಳಲ್ಲಿ ಗರತಿಯರೆಂಬ ಬುರುಕೆಯ ಮರೆಯಲ್ಲಿ ಫ್ಯಾಶನ್ನಿಗೆ ಮನಸೋತಿರುವ ಎಷ್ಟೋ ಜನ ಸುಶಿಕ್ಷಿತ ಹೆಂಗಳೆಯರು ದುಡ್ಡಿನ ಸಲುವಾಗಿ ನಮ್ಮ ಹಸ್ತಕರಾಗಿ ಬಂದು, ನಮ್ಮ ವೇಶ್ಯೆಯರಿಗಿಂತಲೂ ತಾಳ ಬಿಟ್ಟಿರುತ್ತಾರೆ! ನಿರ್ಮಲಮ್ಮಾ, ನಾವೇನು ಹೇಳಿ ಕೇಳಿ ನಮ್ಮ ದೇಹಗಳ ಅಂಗಡಿಯನ್ನೇ ಹೂಡಿಕೊಂಡು ಕುಳಿತಿರುತ್ತೇವೆ. ನಾವು ಏನು ಮಾಡಿದರೂ, ಹೇಗೆ ವರ್ತಿಸಿದರೂ ನಮ್ಮನ್ನು ಕೇಳುವವರೇ ಇಲ್ಲ; ಆದರೆ ನಮ್ಮ ಹೆಸರಿನಿಂದ ಶಂಖುಪುಟಿಸುವವರು ತಮ್ಮ ತಮ್ಮ ಮನೆಗಳಲ್ಲಿ

ಏನೇನು ಗೊಂದಲ ನಡೆದಿರುತ್ತದೆಂಬದರ ಕಡೆಗೆ ಕೊಂಚವೂ ಲಕ್ಷ್ಯಗೊಡುವುದಿಲ್ಲ. ನಿರ್ಮಲಮ್ಮಾ, ನಿಮ್ಮ ಕುಮುದಿನಿಯು ಯಾವ ದಿವಸ ಪ್ರಥಮತಃ ನನ್ನ ಕಣ್ಣಿಗೆ ಬಿದ್ದಳೋ, ಅಂದೇ ನಾನು ಅವಳಲ್ಲಿ ಎಷ್ಟು ನೀರಿದೆಯೆಂಬದನ್ನು ತಿಳಿದುಕೊಂಡಿರುತ್ತೇನೆ; ಅಂತೆಯೇ ನಾನು ಅವಳ ಮೇಲೆ ನಜರಿಟ್ಟದ್ದೇನೆ....''

''ಮತ್ತೂ ನಾನಾದರೂ ಅದಕ್ಕಾಗಿಯೇ ನಿಮ್ಮ ಮಾತಿಗೆ ಸಮ್ಮತಿಸಿದೆನು'' ನಿರ್ಮಲೆಯು ನಡುವೇ ಮಾತನಾಡಿದಳು.

''ಆದರೆ ನಿರ್ಮಲಮ್ಮಾ, ನೀವು ಇದುವರೆಗೂ ಅದೇನನ್ನೂ ಏಕೆ ಮಾಡಲಿಲ್ಲ? ನೀವು ಈ ಚಂದ್ರಿಯ ಕರಾಮತಿಯನ್ನು ನೋಡಬೇಕಾಗಿದ್ದರೆ ಐದೇನಿಮಿಷ ಕುಮುದಿನಿಯನ್ನು ನನ್ನ ಹತ್ತರ ಇರಿಸಿ ನೋಡಿರಿ. ಆರನೇ ನಿಮಿಷಕ್ಕೆ ಅವಳು ನಮ್ಮವಳಾಗದಿದ್ದರೆ, ಈ ಚಂದ್ರಿಯು ಜಾತಿವಂತ ವೇಶ್ಯೆಯೇ ಅಲ್ಲೆಂದು ತಿಳಿಯಿರಿ.''

''ಚಂದ್ರೀ, ನಿದಾನವಾಗಿ ಎಲ್ಲವೂ ತನ್ನಷ್ಟಕ್ಕೆ ತಾನೇ ಆದೀತು. ಅವಳ ಗಂಡನಿಗೆ ಈ ಸಂಗತಿಯ ಒಂದಿಷ್ಟು ವಾಸನೆ ಬಡಿದರೂ ಸಾಕು; ಆತನು ಅವಳನ್ನು ಒದೆದು ಮನೆಯಿಂದ ಹೊರದೂಡುವನು. ಆ ಮೇಲೆ ಅವಳು ಹೋಗುವದೆಲ್ಲಿಗೆ? ದೀಡನಮುಸ್ಕಾರ ಹಾಕುತ್ತ ನಾವು ಹೇಳಿದ ಹಾಗೆ ಕೇಳುವಳು''

''ನಿರ್ಮಲಮ್ಮಾ, ನೀವು ನಿಮ್ಮನ್ನು ಒಳ್ಳೇ ಅನುಭವಿಕರೆಂದು ತಿಳಿದಿರಬಹುದು; ಆದರೆ ನೀವು ನಮ್ಮ ಕಸಬಿನಲ್ಲಂತೂ ನಿಜವಾಗಿಯೂ ಪಾರಂಗತರಲ್ಲವೆಂಬದನ್ನು ನಾನು ಎದೆ ತಟ್ಟಿ ಹೇಳಬಲ್ಲೆನು! ಏನರಿ ನಿರ್ಮಲಮ್ಮಾ, ಇತ್ತೀಚೆಗಿನ ಕೆಲ ನಿರ್ಲಜ್ಜ ಪುರುಷರು ತಮ್ಮ ಹೆಂಡತಿಯು ಎರಡನೆಯವರಿಗೆ ಮರುಳಾಗಿರುವರೆಂಬದನ್ನು ಕಣ್ಣಾರೆ ಕಂಡರೂ ಕೂಡ ಆ ಸಂಗತಿಯ ಪರಿಣಾಮವು ಅವರ ಮನಸ್ಸಿನ ಮೇಲೆ ಕೊಂಚವೂ ಆಗುತ್ತಿರುವದಿಲ್ಲ; ಅದರಂತೆ ನಿಮ್ಮ ಈ ಶಂಕರರಾಯನಾದರೂ ಎಷ್ಟು ನೀರಿನವನಿರುವನೆಂಬದು ಆತನ ಮುಖದಿಂದಲೇ ಕಂಡು ಬರುತ್ತದೆ.''

''ಅಂದರೆ ನೀವು ಆತನನ್ನು ತೀರ ಕೈಲಾಗದವನನ್ನೇ ಮಾಡಿಬಿಟ್ಟರೇನು?'' ನಿರ್ಮಲಮ್ಮನು ತಾರಧ್ವನಿಯಿಂದ ಕೇಳಲು,

''ಹಾಗಾದರೆ ತೋರಿಸಿರಿ ಆತನೊಳಗಿನ ಖಂಬೀರತನವನ್ನು!''

''ಚಂದ್ರೀ, ಇನ್ನೆರಡು ದಿನ ತಡೆ. ಆ ಮೇಲೆ ಏನೇನು ಮೋಜು ಆಗುತ್ತದೆಂಬದನ್ನು ಕಣ್ಣಾರೆ ನೋಡುವೆಯಂತೆ.''

''ಇನ್ನು ಅದನ್ನೇ ನೋಡುತ್ತಿರುವೆನು. ನಿರ್ಮಲಮ್ಮಾ, ನೀವು ನಿಮ್ಮ ವಚನವನ್ನೆಷ್ಟರ ಮಟ್ಟಿಗೆ ಪಾಲಿಸುತ್ತೀರೆಂಬದನ್ನು ನೋಡುವೆನು.''

''ಚಂದ್ರೀ, ನಾನು ಇನ್ನು ಸ್ಪಷ್ಟವಾಗಿಯೇ ಹೇಳುತ್ತೇನೆ. ಆ ಬಗ್ಗೆ ನೀವಿನ್ನು ವಿಷಾದಪಡಬೇಡಿರಿ. ನಾನು ಈ ಬೇಟೆಯನ್ನು ನಿಮ್ಮ ಬಲೆಯಲ್ಲಿ ಕೆಡಹಿದರೆ ನಿಮ್ಮಿಂದ ನನಗೆ ಸಿಗತಕ್ಕ ಪ್ರತಿಫಲವೇನು?''

''ಏನು ದೊರೆಯುವದೆನ್ನುವಿರಾ? ಪ್ರಾಪ್ತಿಯ ಅರ್ಧಪಾಲು'' ಎಂದು ಕಿಟ

ಕೆಯ ಮರೆಗೆ ನಿಂತಿದ್ದ ಗುಂಡನು ಒಮ್ಮೆಲೆ ಮುಂದೆ ಬಂದು ಒಡನುಡಿದನು.

"ಒಳ್ಳೇದು. ನಾನಿನ್ನು ಆ ಕಡೆಗೇ ಹೊರಡುತ್ತೇನೆ; ಹಾಗು ಇಂದು ಅಲ್ಲಿ ಏನೇನು ಗೊಂದಲ ನಡೆದಿದೆಯೆಂಬದನ್ನು ತಿಳಿದು ಬಂದು ನಿಮಗೆ ತಿಳಿಸುತ್ತೇನೆ." ನಿರ್ಮಲೆಯು ಹೊರಟು ನಿಂತು ನುಡಿದಳು.

"ನಿರ್ಮಲಮ್ಮಾ, ಏನು ಬೇಕಾದ್ದನ್ನು ಮಾಡಿ ನೀವು ಆ ರಮಣಿಯನ್ನು ನನ್ನ ಕೈವಶ ಮಾಡಿಬಿಡಿರಿ; ಅಂದರೆ ನಿಮಗೆ ನಮ್ಮಿಂದ ಸಾಕಷ್ಟು ಪುರಸ್ಕಾರ ದೊರೆತೀತು. ನಿರ್ಮಲಮ್ಮಾ, ತುಸ ತಡೆಯಿರಿ...." ಚಂದ್ರಿಯು ನಿರ್ಮಲೆಯನ್ನು ಅಡ್ಡತರುಬಿ ನಿಂತು "ಎಲಾ ಗುಂಡಾ, ಆ ಬೀರಿನೊಳಗಿನ ಇಪ್ಪತ್ತು ರೂಪಾಯಿಗಳನ್ನು ತಕ್ಕೊಂಡು ಬಾ ನೋಡೋಣ."

"ಅವೇತಕ್ಕೆ?" ನಿರ್ಮಲೆಯು ಆಶಾಭರದಿಂದ ಕೇಳಿದಳು.

"ನಿರ್ಮಲಮ್ಮಾ, ನೀವು ಇದೆಂಥ ಹರಕು ಮಾಸಿದ ಸೀರೆಯನ್ನುಡುತ್ತಿರುವಿರಿ? ಇದು ನಿಮಗೆ ಒಪ್ಪುವದಿಲ್ಲ. ನಾನು ಹಿಂದಿನ ಸಾರೆಯೇ ಈ ಬಗ್ಗೆ ನಿಮಗೆ ಹೇಳ ತಕ್ಕವಳಿದ್ದೆನು; ಆದರೆ ಮಾತಿನ ಭರದಲ್ಲದು ಹಾಗೆಯೇ ಉಳಿದು ಹೋಗಿತ್ತು." ಚಂದ್ರಿಯು ಗುಂಡನ ಕೈಯಿಂದ ರೂಪಾಯಿ ಇಸಕೊಂಡು ನಿರ್ಮಲೆಯ ಕೈಗೆ ಕೊಡುತ್ತ "ನಿರ್ಮಲಮ್ಮಾ ನೀವು ಈ ರೂಪಾಯಿಗಳನ್ನು ಕೊಟ್ಟು ಎಲ್ಲಕ್ಕೂ ಮೊದಲು ನಿಮ್ಮ ಮನಸ್ಸಿಗೆ ಒಪ್ಪುವಂತಹ ಸೀರೆಯನ್ನು ಕೊಂಡುಕೊಳ್ಳಿರಿ."

"ಅದನ್ನು ಇಂದೇ ಕೊಳ್ಳುವ ಅವಶ್ಯಕತೆಯೇನು? ನಾನು ಮೊದಲು ನಿಮ್ಮ ಕೆಲಸ ಮಾಡುವೆನು. ಆ ಮೇಲೆ ಈ ನಿರ್ಮಲೆಯು ನಿಮ್ಮವಳೇ ಆಗಿರುತ್ತಾಳೆ."

"ಈಗ ಸುಮ್ಮನೆ ಇವುಗಳನ್ನು ತಕ್ಕೊಳ್ಳಿರಿ" ಹೀಗೆಂದು ಚಂದ್ರಿಯು ನಿರ್ಮಲೆಯ ಕೈಯಲ್ಲಿ ಹತ್ತು-ಹತ್ತರ ಎರಡು ನೋಟುಗಳನ್ನಿಟ್ಟಳು. ನಿರ್ಮಲೆಯು ನಿಷೇದ ಸೂಚಕ ಮುರುಕ ಮಾಡುತ್ತ ಅವುಗಳನ್ನು ಸೆರಗಿನಲ್ಲಿ ಕಟ್ಟಿಕೊಂಡು ತನ್ನ ಕೆಲಸಕ್ಕೆ ತೆರಳಿದಳು.

ಈ ಮೊದಲು ಹೇಳಿದಂತೆ ಆಕಸ್ಮಿಕವಾಗಿ ಮಲಗಿದ್ದ ಕುಮುದಿನಿಯು ಶಂಕರರಾಯನ ಕಠೋರ ವಚನಗಳಿಂದ ಎಚ್ಚತ್ತು ಅತ್ತಿತ್ತ ನೋಡುವಷ್ಟರಲ್ಲಿ ಆತನು ಆ ಕೋಣೆಯಿಂದ ಹೊರಬಿದ್ದು ಹೋಗಿದ್ದನು. ಇಂದು ತನ್ನಿಂದ ಪ್ರಮಾದವಾದ ಬಗ್ಗೆಯೂ ಪತಿಯ ರೋಷಕ್ಕೆ ಪಾತ್ರವಾದದ್ದಕ್ಕೂ ಕುಮುದಿನಿಗೆ ಬಲು ಕೆಡಕೆನಿಸಿತು. ಈಗ ಕೆಳಗಿಳಿದು ಹೋದರೆ ನೆಗೆಣ್ಣಿಯು ಎಂಥೆಂಥ ಬಿರಿ ನುಡಿಗಳನ್ನಾಡುವಳೋ ಎಂಬ ಅಂಜಿಕೆಯಿಂದ ಅವಳಿಗೆ ಅಡಿಗೆಯ ಮನೆಗೆ ಹೋಗಲಿಕ್ಕೆ ಧೈರ್ಯವಾಗಲಿಲ್ಲ. ನರ್ಮದೆಯು ಇದು ವರೆಗೆ ಕುಮುದಿನಿಯ ಮೇಲೆ ಬಗೆಬಗೆಯಿಂದ ಸಿಟ್ಟು ಸಿಡಕು ಮಾಡುತ್ತಿದ್ದರೂ, ವಲ್ಲಭರಾಯನಾಗಲಿ ಶಂಕರರಾಯನಾಗಲಿ ಇದುವರೆಗೆಂದೂ ಒಂದು ಶಬ್ದದಿಂದ ಕೂಡ ಅವಳನ್ನು ಅಂದಿರಲಿಲ್ಲ; ಆಡಿಕೊಂಡಿರಲಿಲ್ಲ; ಆದರೆ ಈ ಸಾರೆ ತಾನು ವಿಜಾಪುರದಿಂದ ಹಿಂದಿರುಗಿ ಬಂದಂದಿನಿಂದ ತನ್ನ ಭಾವನೆ

ತನ್ನನ್ನು ಮಾತಾಡಿಸಿರಲಿಲ್ಲವೆಂದು ಮೊದಲೇ ಅಸ್ವಸ್ಥಚಿತ್ತಳಾಗಿದ್ದ ಕುಮುದಿನಿಯು ಇಂದಿನ ತನ್ನ ಗಂಡನ ಅಕಲ್ಪಿತ ರೋಷದ ವರ್ತನದಿಂದ ಅವಳ ದುಃಖಕ್ಕೆ ಮೇರೆಯೇ ಉಳಿಯಲಿಲ್ಲ. ಅವಳು ಕತ್ತಲಲ್ಲಿಯೇ ಕುಳಿತು ಅಳತೊಡಗಿದಳು. ತಮ್ಮ ಮನೆಯಲ್ಲಿ ತನ್ನ ವಿರುದ್ಧ ಏನು ಗೊಂದಲ ನಡೆದಿದೆಯೆಂಬುದರ ಕಲ್ಪನೆಯೇ ಆಕೆಗಿರಲಿಲ್ಲ.

ಊಟವಾದ ಬಳಿಕ ನರ್ಮದೆ-ವಲ್ಲಭರಾಯರು ತಮ್ಮ ಕೋಣೆಗೆ ಹೋದರು. ಕುಮುದಿನಿಯ ಬಗ್ಗೆ ಅವರಾರೂ ಹೇಳಿಕೇಳಲಿಲ್ಲ. "ನಾನು ಇಂದು ರಾತ್ರಿ ಊಟ ಮಾಡುವದಿಲ್ಲ." ಎಂದು ಶಂಕರರಾಯನು ಆಳಿನ ಕೂಡ ಒಳಗೆ ಹೇಳಿ ಕಳಿಸಿದ್ದರಿಂದ ಆತನ ಸಲುವಾಗಿಯೂ ಆ ಗಂಡ-ಹೆಂಡಂದಿರು ಹಾದಿ ನೋಡಬೇಕಾಗಲಿಲ್ಲ. ಸದ್ಯಃಸ್ಥಿತಿಯ ಬಗ್ಗೆ ಆ ದಂಪತಿಗಳಲ್ಲಿ ಕೆಲ ಮಾತುಕಥೆಗಳಾದ ಬಳಿಕ ಅವರಿಬ್ಬರಿಗೂ ನಿದ್ದೆ ಹತ್ತಿತು. ಹೊರಗೆ ಹೋಗಿದ್ದ ಶಂಕರರಾಯನು ಮಧ್ಯರಾತ್ರಿಯ ಹೊತ್ತಿಗೆ ಮನೆಗೆ ಹಿಂದಿರುಗಿದನು. ಆಳು ಬಾಗಿಲು ತೆರೆದನು. ವಲ್ಲಭರಾಯಾದಿಗಳಿಗೆ ಗಾಢ ನಿದ್ದೆ ಹತ್ತಿತ್ತಾದ್ದರಿಂದ ಶಂಕರರಾಯನ ಆಗಮನದ ಸುದ್ದಿಯು ಅವರಿಗೆ ಹೇಗೆ ತಿಳಿಯಬೇಕು? ಅಟ್ಟವನ್ನೇರಿದವನೇ ಶಂಕರರಾಯನು ತನ್ನ ಕೋಣೆಯನ್ನು ಹೊಕ್ಕನು. ಕುಮುದಿನಿಯು ಅಲ್ಲೊಂದು ಮೂಲೆಯಲ್ಲಿ ನೆಲದ ಮೇಲೆ ಬಿದ್ದುಕೊಂಡೇ ನಿದ್ರಾವಶಳಾಗಿದ್ದಳು. ಶಂಕರರಾಯನು ಆಕೆಯ ಶಾಂತವಾದ ಮುಖಮುದ್ರೆಯ ಕಡೆಗೆ ದಿಟ್ಟಿಸಿ ನೋಡಿದವನೇ ನಿಟ್ಟುಸಿರುಗರೆದು, ತನ್ನ ಹಾಸಿಗೆಯ ಮೇಲೆ ಹೋಗಿ ಬಿದ್ದುಕೊಂಡನು.

ರಾತ್ರಿಯ ಜಾಗರಣೆಯ ಮೂಲಕ ಶಂಕರರಾಯನು ಮರುದಿನ ಬೆಳಗಾಗಿ ಒಂಬತ್ತು ಗಂಟೆಯಾದರೂ ಹಾಸಿಗೆ ಬಿಟ್ಟು ಏಳಲಿಲ್ಲ. ಕುಮುದಿನಿಯು ಮಾತ್ರ ನಸುಕಿನಲ್ಲೆದ್ದು ಪ್ರಾತರ್ವಿಧಿ ತೀರಿಸಿ, ಮೈ ತೊಳಕೊಂಡು ಅಡಿಗೆಯ ಉದ್ಯೋಗಕ್ಕೆ ಹತ್ತಿದಳು. ಎಷ್ಟೋ ಹೊತ್ತಾದ ಬಳಿಕ ನರ್ಮದೆಯು ಅಡಿಗೆಯ ಮನೆಗೆ ಬಂದಳು. ಅಲ್ಲಿ ಕುಮುದಿನಿಯು ಅಡಿಗೆ ಮಾಡುತ್ತಿರುವದನ್ನು ಕಂಡು ಇಂದಿನ ಜಗಳಕ್ಕೆ ಒಳ್ಳೇ ನೆವ ಸಿಕ್ಕಿತೆಂದು ಬಗೆದು, ಅಡಿಗೆಯ ಮನೆಯಲ್ಲಿ ಕುಳಿತು ಕುಮುದಿನಿಗೆ ಏನೇನೋ ಅನ್ನಹತ್ತಿದಳು. ನಿನ್ನೆಯಿಂದ ಕುಮುದಿನಿಯ ಹೊಟ್ಟೆಯಲ್ಲಿ ಒಂದು ಅಗುಳು ಅನ್ನ ಕೂಡ ಪ್ರವೇಶಿಸಿರಲಿಲ್ಲ; ಅಲ್ಲದೆ ಗಂಡ-ಭಾವಂದಿರ ವಿಪರೀತ ವರ್ತನದಿಂದ ಆಕೆಯ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವುಂಟಾಗಿದ್ದಿತು. ಆದರಿಂದ ಅವಳು ಆಗ ವ್ಯಥಿತಾಂತಃಕರಣೆಯಾಗಿದ್ದಳು. ಅವಳ ಕೈ-ಕಾಲು ನಡುಗಹತ್ತಿದವು. ಆದರಲ್ಲಿ ನೆಗೆಣ್ಣಿಯ ಅದ್ವಾತದ್ವಾ ಶಬ್ದಪ್ರಹಾರವನ್ನು ಕೇಳಿ ಅವಳು ಮತ್ತಿಷ್ಟು ಗುಂಗಾಗಿ ಬಿಟ್ಟಳು. ಆಗ ಅವಳ ಕೈಯಲ್ಲಿದ್ದುದೊಂದು ಪಾತ್ರೆಯು ಜಾರಿ ನೆಲಕ್ಕೆ ದೊಪ್ಪೆಂದು ಬಿದ್ದಿತು; ಮತ್ತು ಅದೇ ಕಾಲಕ್ಕೆ ಕುಮುದಿನಿಯು ಬವಳಿ ಬಂದು ಬೀಳತಕ್ಕವಳೇ; ಆದರೆ ದೈವಯೋಗದಿಂದ ಹಾಗಾಗಲಿಲ್ಲ. ಪಾತ್ರೆ ಕೆಡಹಿದ್ದಕ್ಕಾಗಿ ನರ್ಮದೆಯು ಕುಮುದಿನಿಯನ್ನು ಬಾಯಿಗೆ ಬಂದಹಾಗೆ ಬೈ-

ಯುತ್ತ ಅಟ್ಟದ ದಾರೀ ಹಿಡಿದಳು. ಅಡಿಗೆಯಾದ ಬಳಿಕ ಎಲ್ಲರೂ ಊಟ ಮಾಡಿದರು. ಅಂದು ಅಮಾಸಿಯು. ಶಂಕರರಾಯ-ವಲ್ಲಭರಾಯರ ಅಂಗಡಿಗಳಿಗೆ ರಜೆಯಿದ್ದಿತಾದ್ದರಿಂದ ಅವರು ಅಂದು ಮನೆಯಲ್ಲಿಯೇ ಇದ್ದರು. ಉಳಿದ ಎಲ್ಲ ಜನರ ಊಟವಾದ ಬಳಿಕ ಕುಮುದಿನಿಯು ಹೇಗಾದರೂ ನಾಲ್ಕು ತುತ್ತು ತಿಂದಳು. ಬೆಳಗಿನಿಂದ ಅವಳನ್ನು ಗಂಡಸರಾರೂ ಮಾತನಾಡಿಸಿರಲಿಲ್ಲ. ಏನೋ ನೆವ ಮಾಡಿ ಅವಳು ವಲ್ಲಭರಾಯನನ್ನು ಮಾತಾಡಿಸುವ ಸಲುವಾಗಿ ಅವನೆಡೆಗೆ ಹೋದಳು; ಆದರೆ ಆತನ ಲಕ್ಷ್ಯವೇ ಅವಳ ಕಡೆಗಿರಲಿಲ್ಲ. ಆತನು ಆಗ ಹಾಗೆ ಉದ್ದೇಶಪೂರ್ವಕವಾಗಿ ಮಾಡಿದನೋ ಅನುದ್ದೇಶಪೂರ್ವಕವಾಗಿ ಹಾಗಾಯಿತೋ ದೇವರೇ ಬಲ್ಲ! ಕುಮುದಿನಿಯ ಮುಖದ ಮೇಲಿನ ದುಃಖದ ಛಾಯೆಯನ್ನು ಕಂಡು ಶಂಕರರಾಯನಿಗೆ ಬಹು ಕೆಡಕೆನಿಸಿತು; ಆದರೆ ಸಂಶಯ ಪಿಶಾಚಿಯು ಆತನ ಅಂತಃಕರಣದಲ್ಲಿ ನೆಲೆಗೊಂಡಿತ್ತಾದ್ದರಿಂದ ಆತನ ಮನಸ್ಸು ತೀರ ಚಂಚಲವಾಗಿ ಬಿಟ್ಟಿತ್ತು. ಮನೆಯೊಳಗಿನ ಎಲ್ಲ ಜನರೂ, ತನ್ನ ಗಂಡನೂ ತನ್ನೊಡನೆ ಒಮ್ಮಿಂದೊಮ್ಮೆಲೆ ಹೀಗೆ ಅಸಹಕಾರದಿಂದ ನಡೆಯ ಹತ್ತಿದ ಕಾರಣವೇನೆಂಬದು ತಿಳಿಯದ್ದರಿಂದ, ಕುಮುದಿನಿಯು ತೀರ ಹುಚ್ಚಳಂತಾಗಿದ್ದಳು. ಅಂದು ಅವಳು ಅಡಿಗೆಯ ಮನೆಯ ಕೆಲಸವನ್ನೆಲ್ಲ ತೀರಿಸಿಕೊಂಡು ಸಚಿಂತ ಮನಸ್ಸಿನಿಂದ ಬಾಗಿಲ ಹತ್ತರ ಬಂದು ನಿಂತುಕೊಂಡಳು.

ಅಷ್ಟರಲ್ಲಿ ನಿರ್ಮಲಾಶರಣಮ್ಮನು ಈ ಮೊದಲು ಹೇಳಿದಂತೆ ಎದುರಿಗಿನ ಚಂದ್ರಿಯ ಮನೆಯಿಂದ ಹೊರಟು ನರ್ಮದೆಯ ಬಳಿಗೆ ಬಂದಳು. ಕುಮುದಿನಿಯು ಬಾಗಿಲಲ್ಲಿ ನಿಂತುಕೊಂಡದ್ದನ್ನು ಕಂಡು ನಿರ್ಮಲೆಯು ಹಲ್ಲು ಕಿರಿಯುತ್ತ—"ಕುಮುದಿನಿ ಬಾಯಿಯವರೇ, ಊಟವಾಯಿತೇನು?" ಎಂದು ಕೇಳಿದಳು. "ಆಯಿತು" ಎಂದು ಕುಮುದಿನಿಯು ಮೆಲ್ಲನೆ ಹೇಳಿದಳು. ನಿರ್ಮಲೆಯು ಕುಮುದಿನಿಯನ್ನು ಮತ್ತೇನನ್ನೂ ಕೇಳುವ ಉಸಾಬರಿಗೆ ಹೋಗದೆ, ತನ್ನ ಪ್ರಿಯ ಶಿಷ್ಯಣಿಯಾದ ನರ್ಮದೆಯ ಕಡೆಗೆ ಸಾಗಿದಳು. ಆಗ ಶಂಕರರಾಯನು ವೃತ್ತಪತ್ರವನ್ನು ನೋಡುತ್ತ ಅಟ್ಟದ ಮೇಲಿನ ಹಾಲಿನಲ್ಲೇ ಕುಳಿತಿದ್ದನು. ಬಳಿಯಲ್ಲೇ ವಲ್ಲಭರಾಯನು ಇಝೀಚೆಅರಿನಮೇಲೆ ಒರಗಿದ್ದನು. ನರ್ಮದೆಯು ತನ್ನ ಕೋಣೆಯಲ್ಲಿ ಅಡ್ಡಾಗಿದ್ದಳು. ನಿರ್ಮಲೆಯು ಅಟ್ಟವನ್ನೇರಿ ಹೋಗಿ ವಲ್ಲಭರಾಯನ ಕಡೆಗೆ ಹೊರಳಿ, ನಗೆಮೊಗದಿಂದ "ಯಾಕೆ ವಲ್ಲಭರಾಯರೇ, ಇಂದು ಮನೆಯಲ್ಲೇ ಇರುತ್ತೀರಿ?" ಎಂದಳು.

"ಬನ್ನಿರಿ, ನಿರ್ಮಲಮ್ಮಾ, ಬನ್ನಿರಿ. ಇಂದು ಅಮಾಸಿಯಾದುದರಿಂದ ಅಂಗಡಿಯನ್ನು ತೆರೆಯುವದಿಲ್ಲ." ಇಝೀಚೇಅರಿನ ಮೇಲೆ ಒರಗಿಕೊಂಡಿದ್ದ ವಲ್ಲಭರಾಯನು ನೆಟ್ಟಗೆ ಕುಳಿತುಕೊಂಡು ಹೇಳಿದನು.

"ನರ್ಮದಕ್ಕನು ಎಲ್ಲಿರುವಳು?" ಸುತ್ತಮುತ್ತಲೂ ಶೋಧಕ ದೃಷ್ಟಿಯನ್ನು ತಿರುವುತ್ತ ನಿರ್ಮಲೆಯು ಕೇಳಿದಳು.

ನಿರ್ಮಲೆಯ ದನಿ ಕೇಳುತ್ತಲೆ ನರ್ಮದೆಯು ಕೋಣೆಯೊಳಗಿಂದ ತಡವರಿಸುತ್ತ

ಎದ್ದು ಬಂದು:—"ಯಾರು, ನಿರ್ಮಲಮ್ಮನವರೇನು? ಬನ್ನಿರಿ, ಒಳಗೆ ಬನ್ನಿರಿ. ಹೊರಗೇಕೆ ನಿಂತಿರುವುದು?" ಎಂದು ಸ್ವಾಗತ ಮಾಡಿದ ಬಳಿಕ ಯಾರು ಜಂಭದಿಂದ ಮೆರೆಯಲಿಕ್ಕಿಲ್ಲ?

ನಿರ್ಮಲೆಯು ಮುರಕ ಮಾಡುತ್ತ ಹೆಂಡತಿಯು ಕೋಣೆ ಸೇರಿದ್ದನ್ನು ಕಂಡು ವಲ್ಲಭರಾಯನು ಕುಳಿತಲ್ಲಿಯೇ ಕುಳಿತುಕೊಂಡನು. ಶಂಕರರಾಯನು ಅದಾವ ಕಡೆಗೂ ಕೊಂಚವೂ ನೋಡದೆ, ತನ್ನ ವೃತ್ತಪತ್ರ ವಾಚನದಲ್ಲಿಯೇ ತಲ್ಲೀನನಾಗಿದ್ದನು ಆಗ ಆತನು ಅದೇನನ್ನು ಅಷ್ಟು ಏಕಾಗ್ರಚಿತ್ತದಿಂದ ಓದುತ್ತಿದ್ದನೋ ದೇವರೇ ಬಲ್ಲನು! ಅಥವಾ ನಿರ್ಮಲಮ್ಮನ ಕಡೆಗೆ ನೋಡಬಾರದೆಂದು ಬೇಕಂತ ಹಾಗೆ ಕುಳಿತಿದ್ದನೋ ತಿಳಿಯದು. ನಿರ್ಮಲೆಯು ನರ್ಮದೆಯ ಕಿವಿಯಲ್ಲಿ ಏನೇನೋ ಬಹು ಮೆಲ್ಲನೆ ಹೇಳಿದ ಕೂಡಲೆ ಆಕೆಯು ಕಿಡಿಗಣ್ಣಿನಿಂದ ಕಿಟಿಕಿಯ ಬಳಿಗೆ ಹೋದಳು. ಆಗ ಅಲ್ಲೊಂದು ಚಮತ್ಕಾರವು ಅವಳಿಗೆ ಕಾಣಿಸಿತು. ಎದುರಿಗಿನ ಮನೆಯ ಅಟ್ಟದ ಕೋಣೆಯ ಹೊರಗಿನ ಛಾವಣಿಯೊಳಗೆ ನಿಂತಿದ್ದ ಗುಂಡನು ತಮ್ಮ ಮನೆಯ ಕೆಳಗಡೆಯ ಬಾಗಿಲ ಕಡೆಗೆ ಟಕಮಕವೆಂದು ಒಂದೇಸವನೆ ನೋಡುತ್ತಿರುವನು. ಕೂಡಲೆ ನರ್ಮದೆಯು ಮೆಲ್ಲನೆ ತನ್ನ ಕೋಣೆಯಿಂದ ಹೊರಬಿದ್ದು, ಕಾಲಸಪ್ಪಳ ಮಾಡದ ಹಾಗೆ ಅಟ್ಟವನ್ನಿಳಿದು ನೋಡುತ್ತಾಳೆ, ಕುಮುದಿನಿಯು ತಲೆಬಾಗಿಲ ಬಳಿಯಲ್ಲಿ ನಿಂತು ಗುಂಡನನ್ನೇ ಟಕಮಕವೆಂದು ನೋಡುತ್ತ ಏನೋ ವಿಚಾರಮಗ್ನಳಾಗಿರುವ ಹಾಗೆ ಕಾಣಿಸಿತು. ಕುಮುದಿನಿಯು ತನ್ನ ಆಂತರಂಗಿಕ ವಿಚಾರಗಳಲ್ಲಿ ಅತ್ಯಂತ ಮಗ್ನಳಾದುದರಿಂದ ತಾನು ಎದುರಿಗಿನ ಅಟ್ಟದ ಕಡೆಗೆ ಮುಖ ಮಾಡಿ ನಿಂತಿರುವುದೂ, ಅಲ್ಲಿ ನಿಂತಿದ್ದ ಗುಂಡನು ತನ್ನ ಕಡೆಗೆ ಟಕಮಕವೆಂದು ನೋಡುತ್ತ ಕುಚೇಷ್ಟೆ ಮಾಡುತ್ತಿರುವುದೂ, ತನ್ನ ನೆಗೆಣ್ಣಿಯು ಅಟ್ಟದ ಪಾವಟಿಗೆಗಳ ಮೇಲೆ ನಿಂತುಕೊಂಡು ತನ್ನ ಕಡೆಗೆ ಕೆಂಗಣ್ಣಿನಿಂದ ನೋಡುವುದೂ ಮುಂತಾದ ಯಾವ ಕಡೆಗೂ ಆಕೆಯ ಲಕ್ಷ್ಯವಿರಲಿಲ್ಲ; ಮತ್ತು ಲಕ್ಷ್ಯದಲ್ಲಿ ಬರುವಷ್ಟು ಭಾನವೂ ಇರಲಿಲ್ಲ.

ಕುಮುದಿನಿ-ಗುಂಡರ ಆ ಪ್ರಕಾರವನ್ನು ಕಂಡು ನರ್ಮದೆಯು ಲಗುಬಗನೆ ಮತ್ತೆ ಅಟ್ಟವನ್ನೇರಿ ಹೋಗಿ ಗಂಡನಿಗೆ ತನ್ನೊಡನೆ ಬರಲಿಕ್ಕೆ ಸಂಜ್ಞೆ ಮಾಡಿದಳು. ಹೆಂಡತಿಯು ಒಳ್ಳೇ ಅವಸರದಿಂದ ಸೂಚಿಸಲು, ವಲ್ಲಭರಾಯನು ಕುಳಿತಲ್ಲಿಂದೆದ್ದು ಹೆಂಡತಿಯ ಜೊತೆಗೆ ಕೆಳಗೆ ಹೊರಟನು. ಈ ಪ್ರಕಾರವನ್ನು ತಿಳಿದು ಶಂಕರರಾಯನೂ ಅವರಿಬ್ಬರ ಹಿಂದಿನಿಂದ ಅವರಿಗೆ ಕಾಣದ ಹಾಗೆ ಕೆಳಗೆ ಬಂದು ಒಂದು ಬಾಗಿಲ ಮರೆಗೆ ಅವಿತುಕೊಂಡು ನಿಂತು, ಕುಮುದಿನಿ-ಗುಂಡರ ಆ ನೋಟವನ್ನು ಕಂಡನು. ನರ್ಮದೆಯು ವಲ್ಲಭರಾಯನಿಗೆ ಆ ದೃಶ್ಯವನ್ನು ತೋರಿಸಿ ಬೇರೆ ಯಾರಿಗೂ ಕೇಳದ ಹಾಗೆ ಆತನ ಕಿವಿಯಲ್ಲಿ ಏನೇನೋ ಹೇಳಿದಳು. ಅದನ್ನು ಕೇಳಿ ವಲ್ಲಭರಾಯನು ಕೋಪದಿಂದ ಕೆಂಪಗಾದನು. ಶಂಕರರಾಯನು ಮರೆಯಲ್ಲಿ ನಿಂತೇ ಅದೆಲ್ಲವನ್ನು ನೋಡುತ್ತಿದ್ದನು. ತನ್ನ ಅತ್ತಿಗೆಯು ಅಣ್ಣನಿಗೆ ಏನು ಹೇಳುತ್ತಿರುವ

ಕೆಂಬದು ಅವನಿಗೆ ಕೇಳಿಸದಿದ್ದರೂ ಆಗಿನ ದೃಶ್ಯದಿಂದ ಅವನು ಅದನ್ನು ಊಹಿಸಿಕೊಂಡನು. ಅದರಿಂದ ಆತನ ಸಿಟ್ಟು ಹೆಚ್ಚಹತ್ತಿತು. ತನ್ನ ಹಿಂದೆ ಏನೇನು ಪ್ರಕಾರಗಳು ನಡೆದಿರುತ್ತವೆಂಬದರ ಗಂಧವಾರ್ತೆಯೂ ಕುಮುದಿನಿಗಿರಲಿಲ್ಲ. ಅವಳು ತನ್ನ ವಿಚಾರದಲ್ಲಿಯೇ ಮಗ್ನಳಾಗಿದ್ದಳು. ವಲ್ಲಭರಾಯರ ಮನೆಯು ಬಳ್ಳಾರಿಯೊಳಗಿನ ಸತ್ಯನಾರಾಯಣ ಪೇಟೆಯ ರಾಜಬೀದಿಯಲ್ಲಿದ್ದುದರಿಂದ, ನಾನಾ ಬಗೆಯ ಜನರು ಆ ಮಾರ್ಗದಲ್ಲಿ ಅಡ್ಡಾಡತಕ್ಕವರೇ. ಕುಮುದಿನಿಯಂತಹ ಸುಸ್ವರೂಪಿಯಾದ ತರುಣಿಯು ತಲೆಬಾಗಿಲಲ್ಲಿ ನಿಂತಿರುವುದು ಅನಾಯಾಸವಾಗಿ ಕಣ್ಣಿಗೆ ಕಾಣುತ್ತಿರಲು, ಅದಾವ ಹರಿಭಕ್ತನು ಅವಳನ್ನು ದಿಟ್ಟಿಸಿ ದಿಟ್ಟಿಸಿ ಕಣ್ತುಂಬ ನೋಡದೆ ಹೋಗುವನು? ಯಾರು ಯಾರು ಆ ಮನೆಯ ಮುಂದಿನಿಂದ ಹಾಯ್ದು ಹೋಗುತ್ತಿದ್ದರೋ, ಅವರೆಲ್ಲರೂ ಆಕೆಯ ಕಡೆಗೆ ಹೊರಹೊರಳಿ ಅವಳನ್ನು ಟಕಮಕವೆಂದು ನೋಡುತ್ತಿದ್ದರು; ಆದರೆ ಪಾಪ! ಇದಾವುದೂ ಅಂದು ಗಹನವಿಚಾರಮಗ್ನಳಾದ ಆ ಸಾಧ್ವಿಯ ಲಕ್ಷ್ಯದಲ್ಲಿಯೇ ಇರಲಿಲ್ಲ. ಕೆಲ ಕುಚೇಷ್ಟೆಯ ತರುಣರು ಮಾತ್ರ ಸುಮ್ಮ ಸುಮ್ಮನೆ ಮನಸ್ಸುಗಳನ್ನು ಪಾಪದ ಕುಂಡದಲ್ಲಿ ಮುಳುಗಿಸುತ್ತಿದ್ದರು. ಲೋಕದೊಳಗಿನ ಕೆಲ ದುರ್ಜನರಿಗೆ ಯಾವಳೊಬ್ಬ ಕುಮಾರಿಯಾಗಲಿ ನವತರುಣಿಯಾಗಲಿ ಕಣ್ಣಿಗೆ ಬಿದ್ದರೆ ಸಾಕು; ಅವರು ಅವಳನ್ನು ಮತ್ತೆ ಮತ್ತೆ ನೋಡುವ ಸಲುವಾಗಿ ತಮ್ಮ ಜೀವವನ್ನು ಎಂಥ ವಿಪತ್ತಿಗಾದರೂ ಗುರಿ ಮಾಡುತ್ತಾರೆ! ಆದರೆ ಅಂಥ ಶುಷ್ಕ ನೋಟದಿಂದ ಅವರಿಗೆ ಅದಾವ ಸುಖವೆನಿಸುತ್ತಿರುವದೋ ಅವರೇ ಬಲ್ಲರು!

ನರ್ಮದೆ ವಲ್ಲಭರಾಯರು ಬಂದ ದಾರಿಯಿಂದ ಹಿಂದಿರುಗಿ ಹೋದರು. ಶಂಕರರಾಯನು ಬಾಗಿಲ ಮರೆಯಲ್ಲಿ ನಿಂತಿದ್ದನಾದ್ದರಿಂದ ಅವರಿಗೆ ಕಾಣಿಸಲಿಲ್ಲ. ಅಣ್ಣ-ಅತ್ತಿಗೆಯರು ಹೊರಟು ಹೋಗಲು ಶಂಕರರಾಯನು ಹಸಿದ ಹುಲಿಯಂತೆ ಒಮ್ಮೆಲೆ ನೆಗೆದು ಬಂದು ಕುಮುದಿನಿಯ ಎದುರಿಗೆ ನಿಂತುಕೊಂಡು, ಅವಳನ್ನು ಕುರಿತು:—“ನಿರ್ಲಜ್ಜಳೇ, ನಿನಗೆ ಮಾನ-ಮರ್ಯಾದೆಗಳ ಪರಿವೆಯೇ ಇಲ್ಲವೇನು? ನೀನು ಇತ್ತೀಚೆಗೆ ಉಟ್ಟದ್ದನ್ನು ತಲೆಗೆ ಸುತ್ತಿಕೊಂಡಿರುವೆಯೆಂಬಂತೆ ತೋರುತ್ತಿದೆ. ನೀನು ಯಾವಳೊಬ್ಬ ಬೀದಿಯ ಬಸವಿಯಂತೆ ತಲೆಬಾಗಿಲಲ್ಲಿ ನಿಂತುಕೊಂಡು ಆದಾರ ಮಾರ್ಗ ನಿರೀಕ್ಷಿಸುತ್ತಿರುವೆ? ಎದುರಿಗಿನ ಅಟ್ಟದ ಮೇಲೆ ನಿಂತು ನಿನ್ನನ್ನೇ ಟಕಮಕವೆಂದು ನೋಡುತ್ತಿರುವವನು ನಿನ್ನ ವಿಟನೇನು?” ಎಂದು ಕೇಳಿದನು.

ಸ್ವಪ್ನದಲ್ಲಿ ಕೂಡ ಕೇಳದಂತಹ ದೋಷಾರೋಪದ ನುಡಿಗಳು ಗಂಡನ ಬಾಯಿಂದ ಹೊರಟದ್ದನ್ನು ಕೇಳಿ, ಆ ಬಡ ಕುಮುದಿನಿಯು ನಿಂತನಿಂತಲ್ಲಿಯೇ ದೇಹಭಾನ ವಿರಹಿತಳಾದಳು. ಅವಳ ಕಣ್ಣುಗಳಿಂದ ಅಶ್ರುಧಾರೆಗಳು ಒಂದೇಸವನೆ ಹರಿಯಹತ್ತಿದವು. ದೀನಮೊಗದಿಂದ ಗಂಡನ ಕಡೆಗೆ ನೋಡುತ್ತ, ಅವಳು ಅಡುಗೆಯ ಮನೆಯನ್ನು ಹೊಕ್ಕಳು; ಹಾಗು ಅಲ್ಲಿಯ ಒಂದು ಮೂಲೆಯಲ್ಲಿ ಕುಳಿತು ಗಟ್ಟಿಯಾಗಿ ಅಳಲಾರಂಭಿಸಿದಳು!

ಇಷ್ಟರಲ್ಲಿ ನಿರ್ಮಲೆ-ನಮ್ಮದೆಯರು ಕೆಳಗಿಳಿದು ಬಂದರು. ಕುಮುದಿನಿಯ ರೋದನವನ್ನು ಕೇಳಿ ನರ್ಮದೆಯು ನಾಟಕದ ಆವಿರ್ಭಾವದಿಂದ:-"ಅವ್ವಯ್ಯಾ! ಏನಾಯಿತರೆವ್ವಾ ಇವಳಿಗೆ, ಈ ಮಟಮಟ ಮಧ್ಯಾಹ್ನದಲ್ಲಿ ನಮ್ಮ ತುಂಬಿದ ಮನೆಯಲ್ಲಳಲಿಕ್ಕೆ? ಮೈದುನರೇ, ನೀವು ನಿಮ್ಮ ಹೆಂಡತಿಗೇನಾದರೂ ಅಂದಿರೇನು? ಏನರೀ, ಇವಳು ಬಾಗಿಲಲ್ಲಿ ನಿಂತುಕೊಂಡ ಮಾತ್ರಕ್ಕೆ ತಪ್ಪೇನಾಯಿತು? ಇನ್ನು ಆ ಎದುರಿಗಿನ ಅಟ್ಟದ ಮೇಲಿನ ಧಾವಣಿಯೊಳಗೆ ನಿಂತುಕೊಂಡ ಆ ಟೊಣಪನು ಇವಳ ಕಡೆಗೆ ನೋಡಿ ಕುಚೇಷ್ಟೆ ಮಾಡುತ್ತಿರುವುದನ್ನು ಕಂಡರೆ ಮಾತ್ರ ಹೇಗೆ ಹೇಗೋ ಅನಿಸುತ್ತದೆ! ನನ್ನ ಮಾತು ನಿಜವಷ್ಟೇ ನಿರ್ಮಲವ್ವಾ?"

"ಈ ನಿರ್ಮಲಮ್ಮನೇನು ಹೇಳಬೇಕರೀ ಈ ವಿಷಯದಲ್ಲಿ? ನಿಮ್ಮದು ನೀವೇ ನೋಡಿಕೊಳ್ಳಿರಿ!" ಹೀಗೆಂದು ನಿರ್ಮಲಮ್ಮನು ಉರಿಯುವ ಮನೆಗೆ ಎಣ್ಣೆ ಎರಚಿದಳು.

"ಎಲೇ, ಇಷ್ಟು ಒದರಿ ಒದರಿ ಅಳಲಿಕ್ಕಾದರೂ ಏನಾಯಿತು?" ಎಂದು ನಾಯಿಯಂತೆ ವಸಕ್ಕನೇ ಕುಮುದಿನಿಯ ಮೈ ಮೇಲೆ ಹೋಗಿ, ನರ್ಮದೆಯು:-"ಗಂಡನು ಹೊಡೆದು-ಗಿಡದನೇನು? ಆದದ್ದಾದರೂ ಏನಾಯಿತು? ದೊಡ್ಡವರವ್ವಾ ನೀವು-ಆ ವಿಜಾಪುರದ ಕಡೆಯ ಬೆಳವಲ ನಾಡಿನ ಹೆಂಗಸರು! ಒಂದಿಷ್ಟು ಸಿಟ್ಟು ಮಾಡಿದರೂ ನೀವು ನಿಮ್ಮ ಅಳುವಿನ ಶಸ್ತ್ರದಿಂದ ಮನೆಯನ್ನೇ ತಲೆಯ ಮೇಲೆತ್ತಿಕೊಳ್ಳುವವರು! ನಿರ್ಮಲವ್ವಾ, ನೀವು ಈಗ ಪ್ರತ್ಯಕ್ಷರಿರುತ್ತೀರೆಂದು ಒಳಿತಾಯಿತು. ಅದಿಲ್ಲದೆ ಈ ಪ್ರಸಂಗದಲ್ಲಿ ಅನಪೇಕ್ಷಿತರಾಗಿ ಬಂದಿದ್ದರೆ, ಈಕೆಯನ್ನು ಗಂಡನು ಥಳಿಸಿದನೋ, ನೆಗೆಣ್ಣಿಯು ಒದೆದಳೋ ಎಂದು ನಿಮಗೆ ಅನಿಸದಿರುತ್ತಿದ್ದಿಲ್ಲ; ಆದರೆ ಶಂಕರಪ್ಪನವರೇ, ನೀವಾದರೂ ನಿಮ್ಮ ಜೀವಕ್ಕೆ ಸುಮ್ಮನೆ ಏಕೆ ತೊಂದರೆ ವಹಿಸುತ್ತೀರಿ? ಹೋಗಿರಿ; ಅಟ್ಟದ ಮೇಲೆ ಹೋಗಿ ಸ್ವಸ್ಥವಾಗಿ ಕುಳಿತುಕೊಳ್ಳಿರಿ."

ಅತ್ತಿಗೆಯು ಅಪ್ಪಣೆಯನ್ನಿತ್ತಕೂಡಲೆ ಶಂಕರರಾಯನು ಸಿಟ್ಟು ಬೆಂಕಿಯಾಗಿ ಅಟ್ಟಕ್ಕೆ ಹೊರಟು ಹೋದನು. ನರ್ಮದೆಯು ಕುಮುದಿನಿಗೆ ಇನ್ನೂ ಏನೇನೋ ಮಾತಾಡಬೇಕೆಂದಿದ್ದಳು. ಅಷ್ಟರಲ್ಲಿ ಕೆಳಗಡೆಯ ಗೊಂದಲವನ್ನು ಕೇಳಿ ವಲ್ಲಭರಾಯನು ಅಲ್ಲಿಗೆ ಬರಲು, ನರ್ಮದೆಗೆ ಮತ್ತಿಷ್ಟು ಹುರುಪು ಬಂದಂತಾಯಿತು. ಅದರಿಂದ ಅವಳು:—"ಏನರೀ, ಈಕೆಗೆ ಇನ್ನು ಏನೆನ್ನಬೇಕು? ಆ ಎದುರಿಗಿನ ಮನೆಯ ಟೊಣಪನನ್ನು ಮಿಕಿಮಿಕಿ ನೋಡುತ್ತ ಬಾಗಿಲಲ್ಲಿ ನಿಂತಿದ್ದಳಾದ್ದರಿಂದ 'ಯಾರನ್ನು ನೋಡುತ್ತಿರುವೆ?' ಎಂದು ಮೈದುನರು ಸಹಜವಾಗಿ ಕೇಳಲಾಗಿ, ಈಕೆಯು ಒಳ್ಳೇ ದೊಡ್ಡದನಿ ತೆಗೆದು ಆಕ್ರೋಶ ಮಾಡತೊಡಗಿರುತ್ತಾಳೆ."

"ಇವಳ ಮೈಯಲ್ಲಿ ಕೆಟ್ಟ ಭೂತದ ಸಂಚಾರವಾಗಿದೆ ಇವಳನ್ನು ನಮ್ಮ ಕಮಲಾಕಾಂತ ಮಹಾರಾಜರ ಬಳಿಗೆ ಒಯ್ಯದ ಹೊರತು ಅದು ತೊಲಗಲಿಕ್ಕಿಲ್ಲ. ನಿರ್ಮಲಮ್ಮನವರೇ, ನೀವು ಇವಳನ್ನು ಈಗಲೆ ಗುರುಮಹಾರಾಜರೆಡೆಗೆ ಕರೆದೊಯ್ಯಿರಿ; ಹಾಗು ಅವರ ಪಾದದ ಮೇಲೆ ಕೆಡವಿರಿ. ಏಳೇ ಕುಮುದಿನೀ, ಎದ್ದೇಳು; ಮತ್ತು ಈ ನಿರ್ಮ

ಲಮ್ಮನವರೊಡನೆ ಗುರುಮಂದಿರಕ್ಕೆ ಹೊರಡು." ವಲ್ಲಭರಾಯನು ಕಟ್ಟಪ್ಪಣೆಗೈದನು.

"ಭಾವನವರೇ, ನಾನು ಈಸಾರಿ ತವರೂರಿಂದ ತಿರುಗಿ ಬಂದಂದಿನಿಂದ ಎಲ್ಲರೂ ನನ್ನೊಡನೆ ಹೀಗೇಕೆ ವರ್ತಿಸಹತ್ತಿರುತ್ತೀರಿ? ನನ್ನಿಂದ ಅಂಥ ಯಾವ" ಅಪರಾಧವು ಘಟಿಸಿರುತ್ತದೆ?" ಎಂದು ಕುಮುದಿನಿಯು ಬಿಕ್ಕಿ ಬಿಕ್ಕಿ ಅಳುತ್ತ ಕೇಳಿದಳು.

"ನಿರ್ಮಲಮ್ಮಾ ನೋಡಿರಿ-ನೋಡಿರಿ, ಬೆಳವಲ ನಾಡಿನ ಈ ಹೊಯ್ಮಾಲಿತನ ವನ್ನು! ಮಾಡಿ, ಮುಟ್ಟಿ, ಮತ್ತೆ ಏನೂ ಗೊತ್ತಿಲ್ಲದವಳ ಹಾಗೆ ಹೇಗೆ ನಟಿಸುತ್ತಾಳೆ?"

ನರ್ಮದೆಯು ಈ ನುಡಿಗಳನ್ನು ಕೇಳಿ ಕುಮುದಿನಿಯು ಅನ್ನುತ್ತಾಳೆ:-"ನರ್ಮ ದಕ್ಕಾ, ನಾನು ನಿಮ್ಮ ಕಾಲಿಗೆ ಬೀಳುತ್ತೇನೆ. ನನಗೆ ಗೊತ್ತಾಗದಂತೆ ನನ್ನಿಂದ ಏನಾ ದರೂ ತಪ್ಪಾಗಿದ್ದರೆ ನನ್ನ ಕೆನ್ನೆಯು ಮೇಲಿಕ್ಕಿ ನನಗದನ್ನು ಸ್ಪಷ್ಟವಾಗಿ ತಿಳಿಸಿರಿ. ಸುಮ್ಮನೆ ಸಂಶಯಕ್ಕೀಡಾಗಿ ನನ್ನನ್ನು ತಿರಸ್ಕರಿಸಬೇಡಿರಿ."

"ಕುಮುದಿನೀ, ನಾವು ಸರಳ ಮಾರ್ಗದಿಂದ ನಡೆದರೆ ಯಾರು ಯಾರನ್ನು ತಿರ ಸ್ಕರಿಸುತ್ತಾರೆ? ಎಲ್ಲರೂ ಯಾವಾಗಲೂ ರೀತಿಯಂತೆ ನಡೆಯುತ್ತಿರಬೇಕು." ನಿರ್ಮಲಾ ಸಂತಿಣಿಯು ನುಡಿದಳು.

"ಹಾಗಾದರೆ ನಾನು ಎಂದು ಯಾರೊಡನೆ ಕಪಟದಿಂದ ವರ್ತಿಸಿರುತ್ತೇನೆ?" ದೀನಮುದ್ರೆಯಿಂದ ಕುಮುದಿನಿಯು ಕೇಳಿದಳು.

"ಕುಮುದಿನೀ, ಇನ್ನು ನಿನ್ನ ಈ ಮಾತುಗಳು ಸಾಕು. ನೀನಿನ್ನು ಸುಮ್ಮನೆ ಈ ನಿರ್ಮಲಮ್ಮನವರೊಡನೆ ಗುರುಮಂದಿರಕ್ಕೆ ಹೋಗು; ಹಾಗು ಅಲ್ಲಿ ಅವರು ಹೇಳಿ ದಂತೆ ನಡೆ; ಅಂದರಾಯಿತು" ವಲ್ಲಭರಾಯನು ಉಸುರಿದನು.

"ಎಲ್ಲಿಗೆ ಹೊರಡಬೇಕೆಂದಿರಿ?" ಕುಮುದಿನಿಯು ಭಾವನನ್ನು ಕೇಳಲು,

"ಸುಡುಗಾಡಿಗೆ!" ನರ್ಮದಯು ಸಂತಾಪದಿಂದ ನುಡಿದಳು. "ನೋಡಿದಿರಾ ನಿಮ್ಮಲಮ್ಮಾ? ನಮ್ಮವರ ಸ್ಥಳದಲ್ಲಿ ಮತ್ತಾರಾದರೂ ಇದ್ದಿದ್ದರೆ, ಈಗಲೆ ಇವಳ ಕೆನ್ನೆ ಗಳನ್ನು ಚೆನ್ನಾಗಿ ಕೆಂಪಗೆ ಮಾಡಿ ಆ ಮೇಲೆ ಈಕೆಯ ಪ್ರಶ್ನೆಗೆ ಉತ್ತರ ಕೊಡ ಬಹುದಿತ್ತು; ಆದರೆ ಇವರು ಯಾವಾಗಲೂ ತಮ್ಮ ತಮ್ಮನ ಹೆಂಡತಿಯ ಕೌತುಕ ಮಾಡುವವರೇ! ಏನೋ ಒಂದು ರೂಢಿಯ ಮಾತಿದೆಯಲ್ಲ, 'ಗಂಡನು ಹೂವಿನಿಂದ ಹೊಡೆದರೆ ಅಳುತ್ತ ಹೋಗುವಳಂತೆ.......ನು ಡೊಣ್ಣೆಯಿಂದ ಹೊಡೆವರೂ ನಗುತ್ತ ಸಾಗುವಳಂತೆ' ಅದೇ ಗತಿಯು ಈ ನಾಚಿಕೆಗೇಡಳದಾಗಿದೆ."

"ಕುಮುದಿನೀ, ಇದೆಂಥದಮ್ಮಾ ನಿನ್ನ ನಡತೆ? ಮೊದಲು ಒರಸಿಕೊಳ್ಳು ಆ ಕಣ್ಣು ಗಳನ್ನು; ಮತ್ತು ಹೊರಡು ನನ್ನ ಜೊತೆಗೆ. ತಂಗೀ, ನೀನು ಒಳ್ಳೇ ದೈವಶಾಲಿನಿಯೆಂದೇ ನಿನಗಿಂಥ ಭಾವ-ನೆಗೆಣ್ಣಿಯರು ದೊರೆತಿರುತ್ತಾರೆ; ಇಲ್ಲದಿದ್ದರೆ ನಿನ್ನ ಅವಸ್ಥೆಯು ಏನಾಗುತ್ತಿತ್ತೆಂಬದನ್ನು ಬಲ್ಲೆಯಾ?" ನಿರ್ಮಲೆಯು ಅಂದಳು.

ಆಗ ವಲ್ಲಭರಾಯರು ನಿರ್ಮಲೆಯನ್ನು ಕುರಿತು:—"ನಿರ್ಮಲಮ್ಮಾ, ಗುರು ಮಹಾರಾಜರಿಗೆ ನನ್ನ ದಂಡವತ ನಮುಸ್ಕಾರಗಳನ್ನು ತಿಳಿಸಿರಿ; ಮತ್ತು ಈ ನಮ್ಮ

ವಿಚಿತ್ರ ಸಾದಿನಿಯನ್ನು ನಿಮ್ಮ ಚರಣಗಳ ಮೇಲೆ ಹಾಕಿರುತ್ತೇನೆಂದು ಹೇಳಿರಿ.'' ಎಂದು ಹೇಳಿ, ಅಟ್ಟದ ಮೇಲೆ ಹೊರಟು ಹೋದರು. ನರ್ಮದೆಯೂ ಗಂಡನ ಹಿಂದೆಯೇ ಹೋದಳು. ಪಾಪ! ಆ ಬಡ ಕುಮುದಿನಿಯು ಕಕ್ಕಾವಿಕ್ಕಿಯಾಗಿ ನಿರ್ಮಲೆಯ ಮುಖದ ಕಡೆಗೆ ನೋಡುತ್ತ ನಿಂತುಕೊಂಡಳು. ಆಗ ನಿರ್ಮಲೆಯು:—

''ಕುಮುದಿನೀ, ನೀನು ಹೀಗೆ ಹುಚ್ಚಳ ಹಾಗೆ ನನ್ನ ಮೋರೆಯ ಕಡೆಗೇಕೆ ನೋಡುತ್ತ ನಿಂತಿರುತ್ತೀ? ನನ್ನ ಮುಖಕ್ಕೇನು ಮುತ್ತು-ಮಾಣಿಕಗಳು ಹತ್ತಿರುವವೇ?''

''ನಿರ್ಮಲಮ್ಮನವರೇ, ನೀವಾದರೂ ನನ್ನ ಮೇಲೆ ಸಿಟ್ಟಾಗಬೇಡಿರಿ. ದೇವಾ! ನನ್ನ ವಿಷಯದಲ್ಲಿ ಇಂದು ಆದಾರಿಗೂ ಏಕೆ ದಯೆಯುಂಟಾಗುವದಿಲ್ಲವಪ್ಪಾ?''

''ಹಾಗಾದರೆ ನೀನು ನಾವು ಹೇಳಿದಂತೆ ಕೇಳುವದಿಲ್ಲವೇಕೆ?''

'ನಿರ್ಮಲವ್ವಾ, ನಾನು ಯಾರ ಮಾತನ್ನು ಕೇಳಲ್ಲ? ಯಾರ ಆಜ್ಞೆಯಂತೆ ನಡೆದಿಲ್ಲ?'

''ಕುಮುದಿನೀ, ಇನ್ನು ಅದೆಲ್ಲ ವಿಚಾರ ಬೇಡ. ನನ್ನೊಡನೆ ಸುಮ್ಮನೆ ನಡೆ.''

''ನೀವು ನನ್ನನ್ನೆಲ್ಲಿಗೆ ಕರೆದೊಯ್ಯುತಕ್ಕವರು?''

''........ನಾಯಿಯ ಬಾಲದ ಡೊಂಕಂ........ತಿದ್ದಲಾರನು ಮಹೇಶಾ! ಎಂಬಂತೆ ಮತ್ತೆ ಅದೇ ಮಾತು. ಎಲೇ ಕುಮುದಿನೀ, ನಾನು ನಿನ್ನನ್ನು ಯಾವದೊಂದು ಹುಲಿಯ ಬಾಯಿಗೆ ನೀಡಲಿಕ್ಕೆಂದು ಘೋರಾರಣ್ಯಕ್ಕೆ ಕರೆದೊಯ್ಯುವುದಿಲ್ಲ; ದೊಡ್ಡ ಸತ್ಪುರುಷರ ಬಳಿಗೆ ಕರೆದೊಯ್ಯುತ್ತೇನೆ. ನಿನಗೆ ಯಾವ ಭೂತ ಪಿಶಾಚಿಯು ಬಡಕೊಂಡಿರುವದೋ, ಅದನ್ನು ನಿವಾರಿಸಬೇಕಾಗಿದೆ. ಹೊರಡು ಬೇಗನೆ; ನನಗೆ ಇದೊಂದೇ ಕೆಲಸವಿರುವದಿಲ್ಲ.''

ಪಾಪ! ಕುಮುದಿನಿಯ ವಿಚಾರದ ಗತಿಯು ತೀರ ಕುಂಠಿತವಾಗಿ ಹೋಯಿತು. ಇನ್ನು ಸುಮ್ಮನೆ ಪ್ರಶ್ನೋತ್ತರ ಬೆಳಿಸುವುದರಲ್ಲಿ ಏನೂ ಅರ್ಥವಿಲ್ಲೆಂಬದು ಆಕೆಗೆ ಗೊತ್ತಾಯಿತು. ಎಲ್ಲರ ಮನಸ್ಸಿನ ಸಮಾಧಾನ ಮಾಡುವ ಸಲುವಾಗಿ ಅವಳು ನಿರ್ಮಲೆಯೊಡನೆ ಆ ಕಮಲಾಕಾಂತ ಸಾಧುವಿನ ಗುರುಮಂದಿರಕ್ಕೆ ತೆರಳಿದಳು. ನಿರ್ಮಲೆಯು ಕುಮುದಿನಿಯೊಡನೆ ಅಲ್ಲಿಗೆ ಹೋದಾಗ ಕಮಲಾಕಾಂತನು ಸ್ತ್ರೀಗಣ ಮಂಡಳದಲ್ಲಿ ಶಾಲಿಗ್ರಾಮದಂತೆ ಕುಳಿತಿದ್ದನು. ಕುಮುದಿನಿಯನ್ನು ಕಂಡ ಕೂಡಲೆ ಆ ಸಾಧುವಿನ ಕಣ್ಣುಗಳು ಚಕಿತವಾದವು; ಮತ್ತು ಸಾವುಕಾರ ಶಂಕರರಾಯನ ಹೆಂಡತಿಯಾದ ಕುಮುದಿನಿಯು ಇವಳೇ ಎಂಬದನ್ನು ಆತನು ಒಮ್ಮೆಲೆ ಊಹಿಸಿದನು.

ಸಾಧುವಿನ ಆಶ್ರಮದೊಳಗಿನ ಆ ದೃಶ್ಯ, ಸಾಧುವಿನ ಮುಖಮುದ್ರೆ ಮತ್ತು ಆ ಸ್ಥಾನದಲ್ಲಿಯ ಎಲ್ಲ ಪ್ರಕಾರಗಳ ಕಲ್ಪನೆಯಿಂದ ಕುಮುದಿನಿಯ ಮನಸ್ಸು ಒಮ್ಮೆಲೆ ಗಾಬರಿಗೊಂಡಿತು. ಕುಮುದಿನಿಯು ಒಳ್ಳೇ ಸುಶಿಕ್ಷಿತಳಾಗಿದ್ದಳು. ಇಂಥ ಬಿಡಾಡಿ ಸಾಧು-ಸಂತರ ಹಲವು ಕತೆಗಳನ್ನು ಅವಳು ಕೇಳಿ ತಿಳಿದಿದ್ದಳು. ಅದರಿಂದ ಆ ಸಾಧುವಿನ ಬಳಿಯಲ್ಲಿ ನೆರೆದಿದ್ದ ಭೋಳೇಭಾವಿಕ ಸ್ತ್ರೀಸಮೂಹದ ಬಗ್ಗೆ ಅವಳಿಗೆ ಕನಿಕರ ವುಂಟಾಯಿತು. ಕಮಲಾಕಾಂತನ ಮುಖಮುದ್ರೆಯಿಂದಲೇ ಅವಳು ಆ ಲಫಂಗ

ಸಾಧುವಿನ ಪರೀಕ್ಷೆ ಮಾಡಿದಳು. ವಲ್ಲಭರಾಯನಂತಹ ತಮ್ಮ ವ್ಯವಹಾರಚತುರ ನಾದ ಭಾವನು ಈ ಸಾಧುವಿನ ಬಲೆಯಲ್ಲಿ ಹೇಗೆ ಸಿಲುಕಿದನೆಂಬ ಬಗ್ಗೆ ಅವಳಿಗೆ ಬಹು ಆಶ್ಚರ್ಯವೆನಿಸಿತು. ಅವಳು ಆ ವಿಚಾರ ಮಗ್ನತೆಯಲ್ಲಿಯೇ ನಿರ್ಮಲೆಯೊಡನೆ ಆ ಸ್ತ್ರೀಸಮೂಹವನ್ನು ಹೊಕ್ಕಳು. ನಿರ್ಮಲೆಯ ಪದ್ಧತಿಯಂತೆ ಸಾಧುಗಳಿಗೆ ದಂಡವತ್ ಸಾಷ್ಟಾಂಗ ನಮಸ್ಕಾರ ಮಾಡಿದಳು. ಕುಮುದಿನಿಯೂ ಶಿಷ್ಟಾಚಾರಕ್ಕನುಗುಣವಾಗಿ ಆ ಸಾಧುವಿಗೆ ನಮಸ್ಕರಿಸಿದಳು. ಆಗ ಕಮಲಾಕಾಂತ ಸಾಧುವು ಆಕೆಯ ಕಡೆಗೆ ಟಕಮಕವೆಂದು ನೋಡುತ್ತ, ಹ್ಞೀ, ಹ್ಞೀ, ಹ್ಞೀ ಎಂದೆನ್ನುತ್ತ "ಇವಳು ವಲ್ಲಭರಾಯರ ನಾದಿನಿಯಲ್ಲವೆ?" ಎಂದು ಪ್ರಶ್ನೆಮಾಡಿದನು.

"ಅಹುದು. ವಲ್ಲಭರಾಯರೇ ಇವಳನ್ನು ತಮ್ಮ ಚರಣಸನ್ನಿಧಿಗೆ ಕಳಿಸಿ ಕೊಟ್ಟಿರುತ್ತಾರೆ." ನಿರ್ಮಲೆಯು ಹಲ್ಲು ಕಿರಿಯುತ್ತ ಹೇಳಿದಳು.

"ನಿರ್ಮಲಮ್ಮಾ, ಇವಳನ್ನು ಆ ರತ್ನಗಂಬಳಿಯ ಮೇಲೆ ಕೂಡ್ರಿಸಿರಿ. ನಾನು ಇಷ್ಟರಲ್ಲೇ ಇವರೆಲ್ಲರಿಗೆ ಪ್ರಸಾದಕೊಟ್ಟು ಇವರನ್ನು ದಾರಿಗೆ ಹಚ್ಚುತ್ತೇನೆ." ಎಂದು ಅಂದವನೇ ಕಮಲಾಕಾಂತನು ಒಬ್ಬೊಬ್ಬ ಭಕ್ತಳನ್ನು ಕಳಿಸತೊಡಗಿದನು. ಅಲ್ಪಾವಧಿಯಲ್ಲೇ ಆ ಭಕ್ತರ ಹಿಂಡು ಹಾದಿ ಹಿಡಿಯಿತು. ಕುಮುದಿನಿಯು ಕಮಲಾಕಾಂತನ ಕೈಚಾಲಾಕಿ, ಮಾತಿನ ಚಾಲಾಕಿ ಹಾಗು ನೇತ್ರಚಾಲಾಕಿಗಳನ್ನು ನೋಡುತ್ತ, ಕಪಟವ್ಯೂಹದಲ್ಲಿ ಸಿಕ್ಕ ಸಾಧುತ್ವದ ಹಾನಿಯು ಹೇಗಾಗುತ್ತಿರುವದೆಂಬ ಬಗ್ಗೆ ಆಲೋಚಿಸುತ್ತ ಕುಳಿತಿದ್ದಳು. ವಲ್ಲಭರಾಯನ ಸಂಪೂರ್ಣ ಮನೆತನವು ಇಂದಿಗೆ ಸಂಪೂರ್ಣವಾಗಿ ತನ್ನ ಕೈವಶವಾಯಿತೆಂದು ಆ ಸಾಧುವಿನ ಖಾತ್ರಿಯಾದುದರಿಂದ, ಆತನು ಇಂದು ಮತ್ತೆ ತನ್ನ ನಿಜರೂಪವನ್ನು ಧರಿಸಿದನು. ಇಂದು ಆತನು ತುಸ ಫ್ರಾನ್ಸ ದೇಶದ ಉಚ್ಚತರದ ಮದ್ಯವನ್ನು ಸೇವಿಸಿದ್ದನು. ಅದರ ವಾಸನೆಯು ಭಕ್ತಜನರ ಘ್ರಾಣೇಂದ್ರಿಯವನ್ನು ಮುಟ್ಟಬಾರದೆಂದೂ, ತನ್ನ ಬಿಡಾಡಿ ಸಾಧುತ್ವವು ಹೊರಬೀಳಬಾರದೆಂದೂ ಆ ವಸ್ತಾದಿಯು ಅಂದು ಹೀನಾ, ಗುಲಾಬ ಮುಂತಾದ ಸೆಂಟುಗಳ ದೊಡ್ಡ ದೊಡ್ಡ ಫಾಯಾಗಳನ್ನು ಕಿವಿಯಲ್ಲಿಟ್ಟುಕೊಂಡಿದ್ದಲ್ಲದೆ, ಮೈ-ಕೈಗಳಿಗೂ ಆ ಸುಗಂಧೆಣ್ಣೆಗಳನ್ನು ಹೆಚ್ಚಾಗಿ ತೊಡಕೊಂಡಿದ್ದನು. ಸಾಧುವಿನ ಆ ವಿಚಿತ್ರ ಮುಖ, ಭಾರೀ ಬೆಲೆಯ ಉಡುಪು ಹಾಗು ವಿಚಿತ್ರ ವರ್ತನ ಇವುಗಳನ್ನು ಕಂಡು ಕುಮುದಿನಿಯು ಚಕಿತಳಾದಳು. ಎಲ್ಲ ಭಕ್ತಾಂಗನೆಯರು ಹೊರಟು ಹೋದ ಬಳಿಕ ಕಮಲಾಕಾಂತನು ಕುಮುದಿನಿಯ ಕಡೆಗೆ ದುರದುರನೆ ನೋಡುತ್ತ:—

"ಏನಂದರೀ ನಿರ್ಮಲಮ್ಮಾ, ವಲ್ಲಭರಾಯನೇ ಇವಳನ್ನು ನನ್ನೆಡೆಗೆ ಕಳಿಸಿರುತ್ತಾನೆಯೇ? ವಿಹಿತವಾಯಿತು. ನಮ್ಮ ಶಿಷ್ಯರ ಕಲ್ಯಾಣಕ್ಕಾಗಿ ನಾವು ಬೇಕಾದಂತಹ ಪಾಪಕ್ಕೆ ಹೊಣೆಗಾರರಾಗಲು ಸಿದ್ಧರಿರುತ್ತೇವೆ."

"ಗುರುಮಹಾರಾಜರೇ, ನನಗದಾವುದೂ ತಿಳಿಯುವುದಿಲ್ಲ. ನರ್ಮದಕ್ಕನಿಗೂ ನನಗೂ ಒಳ್ಳೇ ಋಣಾನುಬಂಧವಿದೆ; ಮತ್ತು ಈ ಕುಮುದಿನಿಯು ಆ ನಮ್ಮ

ನರ್ಮದಕ್ಕನ ನೆಗೆಣ್ಣಿಯು. ಇದಕ್ಕಾಗಿಯೇ ನಾನು ಇಷ್ಟು ಚಡಪಡಿಸುತ್ತಿರುತ್ತೇನೆ. ಗುರುಗಳೇ, ಇನ್ನು ನನ್ನನ್ನು ಈ ಬಗ್ಗೆ ಏನೂ ಕೇಳಬೇಡಿರಿ. ನೀವೇ ಇದೆಲ್ಲವನ್ನು ತಿಳಿದು ನೋಡಿ, ಸರಿಪಡಿಸಿಕೊಳ್ಳಿರಿ." ನಿರ್ಮಲೆಯು ಸಾಧುವಿನ ಕಡೆಗೆ ಹೇತು ಪೂರ್ವಕವಾಗಿ ನೋಡುತ್ತ ನುಡಿದಳು.

"ಅದಿರಲಿ. ನಿರ್ಮಲಮ್ಮಾ, ನಾನು ಈಗಲೆ ಸಮಾಧಿ ತಾಳಿ ಈಕೆಯ ಪೂರ್ವ ಚರಿತ್ರೆಯ ಸಿಂಹಾವಲೋಕನವನ್ನಷ್ಟು ಮಾಡಿಕೊಳ್ಳಬೇಕಾಗಿದೆ. ಆದುದರಿಂದ ನೀವು ಬಾಗಿಲವನ್ನಿಕ್ಕಿ ಭದ್ರಪಡಿಸಿರಿ. ಒಳಗೆ ಯಾರನ್ನೂ ಬರಗೊಡಬೇಡಿರಿ."

ನಿರ್ಮಲೆ:—"ಮಹಾರಾಜ, ಒಳ್ಳೇ ಆಸ್ಥೆಯಿಂದ ನೋಡಿರಿ. ನಾನು ಬಾಗಿಲ ಹೊರಗೆ ಕುಳಿತು ಪಹರೆ ಮಾಡುತ್ತಿರುತ್ತೇನೆ. ಕುಮುದಿನೀ, ಗುರುಮಹಾರಾಜರು ಏನು ಹೇಳುವರೋ, ಅದನ್ನು ಭಕ್ತಿಭಾವದಿಂದ ಕೇಳಿಕೊಳ್ಳವ್ವಾ! ಅದರಿಂದ ನಿನ್ನದೇ ಕಲ್ಯಾಣವಾಗುವದು!" ಎಂದು ಹೇಳಿ, ನಿರ್ಮಲೆಯು ಅಲ್ಲಿಂದೆದ್ದು ಹೊರಡಲನು ವಾದಳು. ಆಗ ಕುಮುದಿನಿಯು ಅವಳನ್ನು ಕುರಿತು:—"ನಿರ್ಮಲಮ್ಮನವರೇ, ನೀವು ಇಲ್ಲಿಂದ ಹೋಗಬೇಡಿರಿ. ಒಬ್ಬಳೇ ಇಲ್ಲಿರಲಿಕ್ಕೆ ನನಗೆ ಹೇಗೋ ಅನಿಸುತ್ತಿದೆ."

"ಹೇಗೆ ಹೇಗೆನಿಸಲಿಕ್ಕೇನಾಯಿತೇ? ಈ ಸಾಧುಗಳು ನಿನ್ನನ್ನೇನೂ ನುಂಗು ವುದಿಲ್ಲ. ಇವರು ನಿನ್ನನ್ನು ನಿನ್ನ ಎಲ್ಲ ಪಾಪದಿಂದ ಇಂದು ಉದ್ಧರಿಸತಕ್ಕವರಿದ್ದಾರೆ. ಸುಮ್ಮನೆ ಕುಳಿತುಕೋ. ನಾನು ಇಲ್ಲಿಯೇ ಬಾಗಿಲ ಹೊರಗೆ ಇರುತ್ತೇನೆ. ಮಹಾರಾ ಜರೇ, ಏನೂ ಉಳಿಯಬಾರದು ನೋಡಿರಿ." ಎಂದು ಅಂದು, ನಿರ್ಮಲೆಯು ಕಮಲಾ ಕಾಂತನಿಗೆ ಕಣ್ಣು ಸನ್ನೆ ಮಾಡಿ, ಬಾಗಿಲ ಕಡೆಗೆ ಹೊರಟು ಹೋದಳು. ಕುಮು ದಿನಿಯು ಕಕ್ಕಾವಿಕ್ಕಿಯಾಗಿ ಎಡಬಲಗಳಲ್ಲಿ ನೋಡಲಾರಂಭಿಸಿದಳು. ಇಂದು ತನ್ನ ಮೇಲೆ ಯಾವುದೋ ಒಂದು ಅನಿಷ್ಟಪ್ರಸಂಗವೊದಗುವದೆಂದು ಅವಳ ಮನಸ್ಸು ಅವಳಿಗೆ ಹೇಳಹತ್ತಿತು ಕುಮುದಿನಿಯು ಈ ಬಗೆಯಾಗಿ ವಿಚಾರಮಗ್ನಳಾಗಿರು ವಾಗಲೇ ಕಮಲಾಕಾಂತನು ಆಕೆಯ ಕೈ ಹಿಡಿದು ಅವಳನ್ನು ತನ್ನ ಬಳಿಯಲ್ಲಿ ಕರೆದು ತಂದು ಕೂಡ್ರಿಸುವದಕ್ಕೆಂದು ಏಳಹತ್ತಿದನು; ಆದರೆ ಆ ಸಾಧ್ವಿಯ ಸಚ್ಛೀಲದ ಪ್ರಭಾವದಿಂದ ಅವನಿಗೆ ಆಗ ಧೈರ್ಯವಾಗಲಿಲ್ಲ. ಪರಸ್ತ್ರೀಯರ ಮೇಲೆ ಕೈ ಮಾಡಲಿಕ್ಕೆ ಎಂದೂ ಹಿಂದುಮುಂದೆ ನೋಡದ ಆ ಬದ್‍ಮಾಷನು ಕುಮುದಿನಿಯ ಪಾತಿವ್ರತ್ಯದ ತೇಜದಿಂದ ಅವಸಾನಗೇಡಿಯಾದನು. ಅವಳೊಡನೆ ವಿಷಯಲಾಲ ಸೆಯ ಮಾತೆತ್ತಲಿಕ್ಕೆ ಆತನಿಗೆ ಧೈರ್ಯವಾಗದಾಯಿತು. ಇಂಥ ಪ್ರಸಂಗಗಳಲ್ಲಿ ಹುಟ್ಟಾ ಖಂಬೀರನಿಗೂ ಖಂಬೀರತನವನ್ನುಂಟುಮಾಡುವ ಶಕ್ತಿಯ ಪ್ರಸಾದವನ್ನಾ ದರೂ ಒಂದಿಷ್ಟು ಸೇವಿಸಬೇಕೆಂದು ಆಗ ಆತನಿಗೆ ಅನಿಸಿತು; ಮತ್ತು ಅದಕ್ಕಾಗಿ ಅವನು ತನ್ನ ಆಸನದಿಂದೆದ್ದನು. ಅವನು ಅತ್ತ ಒಂದೆರಡು ಹೆಜ್ಜೆ ಕ್ರಮಿಸುವಷ್ಟರಲ್ಲಿಯೇ ಅವನ ಮನಸ್ಸಿನಲ್ಲಿ ಯಾವದೋ ಒಂದು ಸಂಶಯವುಂಟಾಯಿತು; ಅದರಿಂದ ಅವನ ಮನಸ್ಸು ಆ ಸೀಸೆಯನ್ನೆತ್ತಿ ಕುಡಿಯಲಿಕ್ಕೆ ಹಿಂಜರಿಯತೊಡಗಿತು. ಆ ಕಮಲಾ

ಕಾಂತನು ಇದುವರೆಗೆ ಹಲವು ಬದ್‌ಮಾಷಗಿರಿಯ ಕೆಲಸಗಳನ್ನು ಮಾಡಿದ್ದನು; ಆದರೆ ಇಂದಿನಂತೆ ಆತನ ಮನಸ್ಸು ಎಂದೂ ಗಾಬರಿಗೊಂಡಿರಲಿಲ್ಲ. ಇಂದಿನ ಆತನ ಚಲನವಲನಗಳು ಸಿನೇಮಾ ಚಿತ್ರಪಟಗಳಿಗೆ ಯಥಾಯೋಗ್ಯವಾಗಿದ್ದವು. ಸಾಧು ವಿನ ಆ ವಿಲಕ್ಷಣ ಸ್ಥಿತಿಯನ್ನು ಕಂಡು ಕುಮುದಿನಿಯು ಒಳ್ಳೇ ಕುತೂಹಲ ಪಟ್ಟಳು ಈ ಸಾಧುವು ಹುಚ್ಚು ನಾಯಿ ಕಚ್ಚಿದ ಹುಚ್ಚನ ಹಾಗೆ ಹೀಗೇಕೆ ಮಾಡುತ್ತಿರುವ ನೆಂಬದು ಆಕೆಗೆ ಹೊಳೆಯದಾಯಿತು. ಆಕೆಯು ಆ ಸಾಧುವಿನ ಕಡೆಗೆ ಟಕಮಕ ವೆಂದು ನೋಡಹತ್ತಿದಳು. ಸಾಧುವಿಗೂ ತನ್ನ ಮನೋದೌರ್ಬಲ್ಯದ ಬಗ್ಗೆ ನಾಚಿಕೆ ಯೆನಿಸಿತು. ಆಗ ಆ ವಸ್ತ್ರಾದಿಯು ಮತ್ತೆ ನಡಕಟ್ಟಿಕೊಂಡು, ಕೆಮ್ಮಿ ಗಂಟಲನ್ನು ಸರಿಪಡಿಸಿಕೊಂಡು:—"ಕುಮುದಿನೀ, ನಿನ್ನ ಪಾಪದ ಅತಿರೇಕವಾದ್ದರಿಂದ ಅದರ ಆಘಾತಗಳು ನನಗೆ ಅಸಹ್ಯವಾಗಿರುತ್ತವೆ; ಆದರೆ ನಾನು ಮಹಾ ಸತ್ಪುರುಷನಿರು ತ್ತೇನೆ. ನಿನ್ನನ್ನು ಪಾವನಗೊಳಿಸುವ ಬಗ್ಗೆ ನಾನು ನಿನ್ನ ಭಾವನಾದ ವಲ್ಲಭರಾಯನಿಗೆ ಈ ಮೊದಲೇ ಆಶ್ವಾಸನೆ ಕೊಟ್ಟುಬಿಟ್ಟಿರುತ್ತೇನೆ. ನಿನಗೆ ನನ್ನ ಆಶ್ರಮದ ಸ್ಪರ್ಶವಾದ್ದ ರಿಂದ ನಿನ್ನ ಪಾತಕಗಳು ಹೊರಬಿದ್ದಿವೆ. ಅವುಗಳ ದಾವಾನಲದಿಂದ ನನ್ನ ದೇಹವು ಸುಟ್ಟು ಭಸ್ಮವಾದರೂ ಚಿಂತೆಯಿಲ್ಲ; ಆದರೆ ನಾನು ನಿನ್ನನ್ನು ಉದ್ಧಾರಿಸದೆ ಬಿಡೆನು. ಬಾ, ಇತ್ತ ನನ್ನ ಬಳಿಗೆ ಬಂದು ಕೂಡ್ರು. ಬುದ್ಧಿಹೀನತೆಯಿಂದ ನಿನ್ನಿಂದ ಕೆಟ್ಟ ಕೆಲಸ ವಾಗಿದೆ. ಪಾಪದ ಕಡೆಗೆ ನಿನ್ನ ಪ್ರವೃತ್ತಿಯು ಹೊರಳಿದೆ. ಇಂಥ ಅಧಃಪಾತದ ಶನಿ ಯು ನಿನಗೆ ಗಂಟು ಬಿದ್ದಿದೆ; ಆದರೂ ನೀನು ಸುದೈವಿಯು. ಅಂತೆಯೇ ನೀನು ವಲ್ಲಭರಾಯನಂತಹ ಸತ್ಪುರುಷನ ತಮ್ಮನ ಹೆಂಡತಿಯಾಗಿರುತ್ತೀ. ನಾನು ಆಗಿನಿಂದ ಸಮಾಧಿಯೇರಿಸಲಿಕ್ಕೆ ಪ್ರಯತ್ನಿಸಹತ್ತಿದ್ದೇನೆ; ಆದರೆ ನನ್ನ ಕ್ರೋಧಾಗ್ನಿಯಲ್ಲಿ ಸುಟ್ಟು ಹೋಗುವ ಅಂಜಿಕೆಯಿಂದ ನಿನ್ನನ್ನು ಪಾಪದ ಮಾರ್ಗಕ್ಕೆ ಪ್ರವೃತ್ತಗೊಳಿಸಿದ ಆ ಬದಮಾಷನು........"

"ಸಾಧುಗಳೇ, ನೀವು ದೊಡ್ಡ ಸತ್ಪುರುಷರೆಂದು ನಮ್ಮ ಭಾವನವರು ನನ್ನನ್ನು ನಿಮ್ಮ ಬಳಿಗೆ ಕಳಿಸಿ ಕೊಟ್ಟಿರುತ್ತಾರೆ; ಆದರೆ ನೀವು ಈಗ ಯಾರಿಗೆ ಹಾಗು ಏನು ಮಾತಾಡುತ್ತಿರುವಿರೆಂಬ ಬಗ್ಗೆ ತುಸ ಯೋಚಿಸಿದಿರೇನು?" ಕುಮುದಿನಿಯು ಸಿಟ್ಟಿ ನಿಂದ ಕೇಳಿದಳು.

"ಅಂದರೆ, ನೀನು ಸ್ವಂತದ ಇಚ್ಛೆಯಿಂದ ಇಲ್ಲಿಗೆ ಬಂದಿಲ್ಲವೇನು?"

'ಇಲ್ಲ; ಹಾಗೆ ಬಂದಿಲ್ಲ; ಇಂತಹ ಬಿಡಾಡಿ ಸಾಧುಸಂತರಲ್ಲಿ ನನ್ನ ನಂಬಿಗೆಯಿಲ್ಲ.'

"ನಿಜ. ನಿಜ. ಯಾವಳಿಗೆ ತನ್ನ ಶೀಲದ ಪರಿವೆಯಿಲ್ಲವೋ ಅಂಥವಳು ಸಾಧು ಸಂತರನ್ನೆಂತು ಆದರಿಸುವಳು? ಆದರೆ ನನಗೆ ನನ್ನ ಗುರುಕರ್ತವ್ಯವನ್ನು ಮಾಡ ಬೇಕಾಗಿದೆ. ನಿನ್ನ ನಂಬಿಗೆ-ವಿಶ್ವಾಸಗಳ ಪರಿವೆಯು ನನಗೆ ಯತ್ಕಿಂಚಿತ್ತೂ ಇರುವು ದಿಲ್ಲ. ನಾನು ನಮ್ಮ ಪ್ರಿಯ ವಲ್ಲಭರಾಯನ ಮನೆತನದ ಮಾನ ಕಾಯಬೇಕಾಗಿದೆ. ಆದ್ದರಿಂದ ನಾನು ನಿನ್ನ ಕಾಲು ಜಾರಿ ಊನಾದದ್ದನ್ನು ಸರಿ ಪಡಿಸದೆ ಹಾಗೆಯೋ

ನನ್ನ ಆಶ್ರಮದೊಳಗಿಂದ ಹೋಗಗೊಡುವೆನೇ? ಇದೋ ನೋಡು, ನಾನು ನಿನ್ನನ್ನು ಇನ್ನು ಉದ್ಧಾರಮಾಡತಕ್ಕವನೆಂಬದು ತಿಳಿದ ಕೂಡಲೆ ನಿನ್ನಲ್ಲಿಯ ಪಾತಕಗಳೆಲ್ಲ ಒಟ್ಟುಗೂಡಿ ಬಂದು ನನ್ನ ಕುತ್ತಿಗೆ ಹಿಚುಕಲು ಪ್ರಯತ್ನಿಸಹತ್ತಿವೆ; ತಡೆಯಿರಿ, ನೀಚರಿರಾ, ನೀವುಗಳು ನನ್ನ ದೇಹದಲ್ಲಿ ಇದಕ್ಕಿಂತ ಹೆಚ್ಚು ತಾಂಡವನೃತ್ಯ ನಡಿಸಿದರೂ ನಾನು ನನ್ನ ಸಾಧುವೃತ್ತಿಯಿಂದ ಕೊಂಚವೂ ಚಲಿಸಲಾರೆನು! ಕುಮುದಿನೀ, ಬಾ, ಬೇಗನೇ ಬಾ. ಲಗುಬಗನೆ ನನ್ನ ಹತ್ತರ ಬಾ. ಇತ್ತ ನೋಡು, ನಿನ್ನ ಘೋರ ಪಾತಕಗಳು ನನ್ನನ್ನು ಹೇಗೆ ಆಕ್ರಮಿಸಿರುತ್ತವೆ?" ಎಂದಂದು ಆ ಪಿಶಾಚಿಯು ಆ ಸಾಧ್ವಿಯ ಕೈ ಹಿಡಿಯಲಿಕ್ಕೆ ಮುಂದಕ್ಕೆ ಸರಿದನು; ಆದರೆ ಸಚ್ಛೀಲತೆಯ ಉತ್ಕೃಷ್ಟರಕ್ತವು ಕುಮುದಿನಿಯ ರೋಮ-ರೋಮಾಂಚಗಳಲ್ಲಿ ಪುಟಿಯುತ್ತಿದ್ದದರಿಂದ ಅವಳು ಕೊಂಚವೂ ಎದೆಗುಂದಲಿಲ್ಲ; ಇಲ್ಲವೆ ಹಿಂಜರಿಯಲಿಲ್ಲ. ಸಾಧುವು ಆಕೆಯ ಕೈ ಹಿಡಿಯಲಿಕ್ಕೆ ಮುಂದರಿಯುತ್ತಲೆ ಕುಮುದಿನಿಯು ಹಸಿದ ಹೆಣ್ಣುಹುಲಿಯಂತೆ ಆ ಕಮಲಾಕಾಂತನ ಮೈ ಮೇಲೆ ಏರಿ ಹೋಗಿ:—"ಎಲೈ ನೀಚಾ, ಲಫಂಗಾ, ನಿನ್ನ ನಟನೆಗೆ ಮರುಳಾಗಿ ನಿನ್ನ ಕೈವಶಳಾಗುವಂತಹ ಮಡ್ಡಳು ನಾನೆಂದು ತಿಳಿದಿರುತ್ತೀಯೇನು? ಚಾಂಡಾಲಾ, ನನ್ನನ್ನು ಕುರಿತು ಬಾಯಿಗೆ ಬಂದಂತೆ ಬೊಗಳುವ ನಿನ್ನ ನಾಲಿಗೆಯಲ್ಲಿ ಹುಳಗಳೇ ಬಿದ್ದಾವು!" ಎಂದಳು.

"ಕುಮುದಿನೀ, ತಪ್ಪುತ್ತೀ; ನೀನು ಮತ್ತೂ ದಾರಿ ತಪ್ಪುತ್ತೀ. ಮೋಸ ಹೋಗುತ್ತೀ. ಇಂಥ ಸುಸಮಯವು ನಿನ್ನ ಶೇಷಾಯುಷ್ಯದಲ್ಲಿ ಇನ್ನೆಂದೂ ಬರಲಾರದು. ಈ ಸಾಧುವು ನಿನ್ನೊಡನೆ ಮಾತಾಡುತ್ತಿರದೆ, ನಿನ್ನ ಉದ್ಧಾರಕ್ಕಾಗಿ ಜಾಗೃತಗೊಳಿಸಿರುವ ಈ ದಿವ್ಯ ಶಕ್ತಿಯೇ ಮಾತಾಡುತ್ತಿದೆ. ಈ ದಿವ್ಯಶಕ್ತಿಯೊಡನೆ ನೀನು ನಿನ್ನ ದೇಹವನ್ನು ಸಂಯೋಗಗೊಳಿಸಿ, ನಿನ್ನ ರಕ್ತಮಾಂಸಗಳಲ್ಲಿಯ ಪಾಪವನ್ನು ಕ್ಷಾಲನ ಮಾಡಿಕೊಂಡು ಪಾವನಳಾಗು."

"ಮೂರ್ಖಾ, ಮೋಸುಗಾರಾ, ನನ್ನ ಭಾವ-ನೆಗೆಣ್ಣಿಯರು ತೀರ ಭೋಳೇ ಭಾವಿಕರು. ಅಂತೆಯೇ ನೀನು ಅವರನ್ನು ನಿನ್ನ ಬಲೆಯಲ್ಲಿ ಸಹಜವಾಗಿ ಕೆಡಹಿಕೊಂಡಿರುತ್ತೀ; ಆದರೆ ನಾನು ನಿನ್ನನ್ನು ಕಂಡ ಕೂಡಲೆ, ನಿನ್ನ ಅಂತರಂಗವನ್ನು ಕಂಡು ಹಿಡಿದಿರುತ್ತೇನೆ. ಎಲ್ಲಿ ಹೋದಳು ಆ ನಿರ್ಮಲಾ....ಗಿತ್ತಿಯು? ಪಾಪಿಗಳೇ, ಸಾಧುಸಂತವೃತ್ತಿಯ ಬುರುಕೆಯ ಮರೆಯಲ್ಲಿ ಲೋಕದವರನ್ನು ಮೋಸಗೊಳಿಸಿ, ಪಾಪದ ರಾಶಿಗಳನ್ನು ಸಿದ್ಧಗೊಳಿಸುವ ನಿಮ್ಮಂತಹರು ಯಾವ ಗತಿಗೆ ತಲುಪುವಿರಿ? ಸರಿ, ದೂರ ಸರಿ; ನಿನ್ನ ದರ್ಶನವೆಂದರೆ, ಮೂರ್ತಿಮಂತ ಪಾಪದ ಸಂಗ್ರಹವೇ ಸರಿ!" ಹೀಗೆ ನುಡಿದು, ಕುಮುದಿನಿಯು ಆ ಹಾಲಿನ ಬಾಗಿಲ ಕಡೆಗೆ ನಡೆದಳು; ಆದರೆ ಅಷ್ಟರಲ್ಲಿ ಆ ಲಫಂಗನು:—"ನಾನು ನಿನ್ನನ್ನು ಹೀಗೆ ಸುಮ್ಮನೆ ಹೋಗಗೊಡುವೆನೇ? ಬಾ, ಇತ್ತ ನನ್ನ ಹತ್ತರ ಬಾ." ಎಂದಂದು, ಆ ಸಾಧುವು ಕುಮುದಿನಿಯ ಕೈ ಹಿಡಿದು ಎಳೆದನು.

---

## ದೈವದ ಆಟ!

ರಸರುವಾಸಿಯಾದ ಆ ಅತ್ಯಂತ ನೀಚ ಕಮಲಾಕಾಂತ ಸಾಧುವಿನ ಆಡಂಬರಕ್ಕೆ ಕುಮುದಿನಿಯು ಕೊಂಚವೂ ಅಂಜಲಿಲ್ಲವೆಂಬದನ್ನು ಓದಿದ ನಮ್ಮ ವಾಚಕರು ಆಶ್ಚರ್ಯಚಕಿತರಾಗಬಹುದು; ಆದರೆ ಸಚ್ಛೀಲದ ಸಾಮರ್ಥ್ಯವೇ ಹಾಗೆ ವಿರಾಟ್ ಸ್ವರೂಪದ್ದಾಗಿರುತ್ತದೆ. ಯಾರ ಶೀಲವು ಶುದ್ಧವಾಗಿರುವದೋ, ಮನಸ್ಸು ನಿಷ್ಪಾಪವಾಗಿರುವದೋ, ಆಚರಣೆಯು ಕಲಂಕರಹಿತವಾಗಿರುವದೋ ಅಂಥ ಮನುಷ್ಯನ ಮೇಲೆ ಸಂಕಟದ ಪರ್ವತಗಳು ಕಡಕೊಂಡು ಬಿದ್ದರೂ ಆತನಿಗೆ ಅವುಗಳ ಅಂಜಿಕೆಯೆನಿಸುವುದಿಲ್ಲ. ತನ್ನ ಶುದ್ಧಾಚರಣೆಯೇ ತನ್ನನ್ನು ಸಂರಕ್ಷಣೆ ಮಾಡುವದೆಂಬ ಆತ್ಮವಿಶ್ವಾಸದಿಂದ ಆತನು ಯಾವ ಸಂಕಟಗಳಿಗೂ ಸೊಪ್ಪು ಹಾಕುತ್ತಿರುವುದಿಲ್ಲ. ಅಂತೆಯೇ ಕಡೆಗೆ ಆತನ ಸದಿಚ್ಛೆಯೇ ಆತನಿಗೆ ಫಲಕಾರಿಯಾಗುತ್ತದೆ; ಆದರೆ ತದ್ವಿರುದ್ಧವಾಗಿ ಪಾಪೀ ಮನಸ್ಸು ಎಷ್ಟೇ ನಿಗರಗಟ್ಟಾಗಿದ್ದರೂ ಸತ್ಯದ ಮುಂದೆ ಅದರ ನಿಭಾವವಾಗುವದಿಲ್ಲ. ಪಾಪೀ ಮನುಜನು ಬಹಿರಂಗದಲ್ಲಿ ತನ್ನ ಮನಸ್ಸನ್ನು ಎಷ್ಟು ಗಟ್ಟಿಮಾಡಿದರೂ ಕಡೆಗೆ ಅದು ಹೇಡಿಯೇ ಆಗುತ್ತದೆ. ಕುಮುದಿನಿಯು ಮನೆಯ ಜನರ ವಿಪರೀತ ವರ್ತನದಿಂದ ವ್ಯಥಿತಳಾಗಿದ್ದರೂ, ತಂದೆಯ ಮರಣದಿಂದ ಅವಳ ಹೃದಯಕ್ಕಾದ ಗಾಯವು ಇನ್ನೂ ಮಾದಿರದಿದ್ದರೂ, ಪರಪುರುಷನಿಗೆ ಎದುರಾಗುವ ಅನುಭವವು ಇಡೀ ಆಯುಷ್ಯದಲ್ಲಿ ಅವಳಿಗೆ ಬಂದಿರದಿದ್ದರೂ ಕಮಲಾಕಾಂತನ ಪಾಪೀ ದೃಷ್ಟಿಯನ್ನು ಕಂಡ ಕೂಡಲೆ ಆಕೆಯ ಅಂತಃಕರಣದೊಳಗಿನ ಅವರ ಕುಲದೇವತೆಯ ವಿರಾಟ್ ಶಕ್ತಿಯು ತಟ್ಟನೆ ಜಾಗೃತವಾಗಿ, ಕಮಲಾಕಾಂತನಿಗೆ ಪ್ರತೀಕಾರ ಮಾಡಲಿಕ್ಕೆ ಆಕೆಯು ಸಜ್ಜಾದಳು. ಕುಮುದಿನಿಯ ಮನಸ್ಸಿನ ಮೇಲೆ ಸುಶಿಕ್ಷಣದ ಸಂಸ್ಕಾರವು ಚನ್ನಾಗಿ ಆದುದರಿಂದ, ದುಷ್ಕರ್ಮದ ಪರಿಣಾಮವು ಕಡೆಗೆ ಹೇಗೆ ನಿಷ್ಫಲವಾಗುತ್ತಿರುತ್ತದೆಂಬ ಬಗ್ಗೆ ಆಕೆಗೆ ಸಂಪೂರ್ಣ ಖಾತ್ರಿಯಿದ್ದಿತು. ಕಮಲಾಕಾಂತನಂತಹ ಪಾಪೀ ಕೀಟಕನಿಂದ ತನ್ನ ಶೀಲವೆಂಬ ಹಿಮಾಚಲಪರ್ವತದ ಒಂದು ಕಣವಾದರೂ ಚಲಿಸಲಾರದೆಂಬದನ್ನು ಸಂಪೂರ್ಣವಾಗಿ ತಿಳಿದಿದ್ದರಿಂದಲೇ ಅವಳು ಗಾಬರಿಗೊಳ್ಳಲಿಲ್ಲ; ಇಲ್ಲವೆ ಅಂಗೆಡಲಿಲ್ಲ. ಕಮಲಾಕಾಂತನು ಅವಳ ಕೈಹಿಡಿದೊಡನೆಯೇ ಅವಳು "ಚಾಂಡಾಲಾ, ಇಕೋ, ಕಾಣಿಕೆಯನ್ನು!" ಎಂದು ಹೇಳಿ ಕುಮುದಿನಿಯು ಆ ಸಾಧುವಿನ ಮೂಗಿನ ಮೇಲೊಮ್ಮೆ ಒಳ್ಳೇ ಬಲವಾಗಿ ಗುದ್ದಿದಳು. ಆ ಕೂಡಲೆ ಸಾಧುವು "ನಿರ್ಮಲೇ-ನಿರ್ಮಲೇ, ಸತ್ತೆನೇ ಸತ್ತೆನು; ಓಡಿ ಬಾ" ಎಂದು ಚೀರಿಕೊಳ್ಳುತ್ತ ದೊಪ್ಪನೆ ನೆಲಕ್ಕೆ ಕುಸಿಕುಳಿತನು. ಆಗ ಆತನ ಬಾಯಿ-ಮೂಗುಗಳಿಂದ ನೆತ್ತರವು ಒತ್ತರದಿಂದ ಪುಟಿಯ ಹತ್ತಿತ್ತು. ಆ ಬಿಡಾಡಿ ಸಾಧುವು ಕಿರಚುವದನ್ನು ಕೇಳಿದ ಕೂಡಲೆ ಬಾಗಿಲ ಕಾಯುತ್ತ ಹಾಲಿನ ಹೊರಗಡೆ ಕುಳಿತುಕೊಂಡಿದ್ದ ನಿರ್ಮಲೆಯು ಒಳಗೆ ಒಮ್ಮೆಲೆ ಓಡಿ ಬಂದು 'ಎಲೇ ಚಾಂಡಾಲಿನೀ!'

ಎಂದೆಂದು, ರಕ್ತಬಂಬಾಳನಾಗಿದ್ದ ಸಾಧುವನ್ನು ಕುರಿತು:—"ಸಾಧುಗಳೇ, ಆದದ್ದಾದರೂ ಏನು?" ಎಂದು ಆಕಾಂತಯುಕ್ತವಾಗಿ ಕೇಳಿದಳು.

"ನಿರ್ಮಲೇss........" ಸಾಧುವು ಎಳೆದು ಅನ್ನುತ್ತ:—"ಎಲೆ, ಈ ಚಂಡಾಲಿನಿಯು ನನ್ನ ಮೂಗಿನ ಮೇಲೆ ಗುದ್ದಿದಳಲ್ಲ!" ಎಂದು ಹೇಳಿದನು.

ನಿರ್ಮಲೆಯು ಕುಮುದಿನಿಯ ಮೈಮೇಲೆ ಏರಿಹೋಗುತ್ತ:--"ಎಲೇ ಸೆಟವಿ!"

ಕುಮುದಿನಿಯು ಸಿಟ್ಟಿನಿಂದ ನಿರ್ಮಲೆಯನ್ನು ಕುರಿತು:—"ಸುಮ್ಮನಿರು, ಚಂಡಾಲಿನೀ, ಸುಮ್ಮನಿರು. ಪಾಪಿಗಳೇ, ಸಾಧುತ್ವದ ಬುರುಕೆಯನ್ನು ಹೊತ್ತುಕೊಂಡು ಲೋಕದವರ ಕಣ್ಣುಗಳಲ್ಲಿ ಮಣ್ಣೆರಚುವಾಗ ನಿಮಗೆ ಇಹ-ಪರ ಲೋಕಗಳ ಅಂಜಿಕೆಯೆನಿಸುವದಿಲ್ಲವೆ? ನೀಚರೇ, ಭೋಳೇ ಭಾವಿಕ ಹೆಂಗಸರನ್ನು ಮೋಸದಿಂದ ಇಲ್ಲಿಗೆ ಬರಮಾಡಿಕೊಂಡು, ಈ ಕೃಷ್ಣಕೃತ್ಯಕ್ಕೆ ಪ್ರವೃತ್ತಗೊಳಿಸುತ್ತಿರುವ ನಿಮಗೆ ನಾಚಿಕೆ ಹೇಗೆ ಅನಿಸುವದಿಲ್ಲ? ನಿರ್ಮಲೇ, ಇದಕ್ಕಾಗಿಯೇ ನೀನು ನಮ್ಮ ಮನೆಯನ್ನು ಪ್ರವೇಶಿಸಿ, ಮಾನಭಾವೀತನಕ್ಕೆ ಪ್ರಾರಂಭಿಸಿದ್ದೆಯೇನು? ನಿಮ್ಮಗಳ ಈ ಕೃಷ್ಣಕಾರಸ್ಥಾನಗಳು ಬೊಬ್ಬಾಟವಿಲ್ಲದಂತೆ ಪಾರುಗಂಡಾವೆಂದೇ ನಿಮ್ಮ ಕಲ್ಪನೆಯಿದ್ದಿತೇ? ತಡೆಯಿರಿ, ಇನ್ನೊಂದು ಕ್ಷಣದಲ್ಲಿ ನಿಮ್ಮೊ ಕೃತಿಗಳನ್ನು ಬೀದಿಗೆ ಎಳೆದು, ನಿಮ್ಮ ಮೆರವಣಿಗೆ ಮಾಡಿಸುತ್ತೇನೆ ಮೆರವಣಿಗೆ!"

"ಎಲೆ, ಹೋಗು! ಗೊತ್ತಿದೆ, ನೀನೆಂಥ ಗರತಿಯೆಂಬುದು? ಕುಮುದಿನೀ, ಈ ಸಾಧುಗಳು ನಿನ್ನ ಕೈಹಿಡಿದರೇನಾಯಿತು? ತವರೂರಲ್ಲಿ ಆ ಟೊಣಪರಿಂದ ಮೈಕೈಗಳನ್ನು ಮುಟ್ಟಿಸಿಕೊಳ್ಳುವದಕ್ಕಿಂತ ಇದು ಎಷ್ಟೋ ಮೇಲಾಗಿತ್ತು; ಆದರೆ ನಿನ್ನಂತಹ ಹೇಸಿ........ಗೆ ಇಂಥ ಮರ್ಯಾದೆಯು ಬಾಳು ಸೇರುವದೆಂತು? ತಡೆ, ಇನ್ನು ನಿನ್ನ ಭಾವ-ನೆಗೆಣ್ಣಿಯರಿಗೆ ಹೇಳಿ, ನಿನ್ನ ಫಜೀತಿ ಹೇಗೆ ಮಾಡಿಸುತ್ತೇನೆ ನೋಡು."

"ನಾಚಿಕೆಗೇಡೀ, ಇನ್ನು ನಮ್ಮ ಹೊಸ್ತಿಲಮೆಟ್ಟುವ ಧೈರ್ಯವು ನಿನ್ನಲ್ಲಿದೆಯೇ? ಭಾವನವರಿಗೆ ನಿಮ್ಮ ಎಲ್ಲ ಹುಚ್ಚುಚಾಷ್ಟರವನ್ನು ತಿಳಿಸಿ, ನಿಮ್ಮ ಮೈ ಎಲವುಗಳನ್ನು ಸಡಲಿಸುತ್ತೇನೆ. ಗೊತ್ತಾಯಿತೇ?" ಎಂದು ಹೇಳಿ, ಕುಮುದಿನಿಯು ಬಾಗಿಲ ಕಡೆಗೆ ನಡೆದಳು. ಆಗ ನಿರ್ಮಲೆಯು ಅವಳ ಕೈಹಿಡಿದು ನಿಲ್ಲಿಸುತ್ತ:—"ಎಲೇ ಸೆಟವೀ, ನಿನ್ನನ್ನು ಭ್ರಷ್ಟಗೊಳಿಸದೆ ಹೀಗೆ ಬಿಟ್ಟುಬಿಡುವಷ್ಟು ತಿಳಿಗೇಡಿಯು ಈ ನಿರ್ಮಲೆಯಿರುವದಿಲ್ಲ. ಸಾಧುಗಳೇ, ಬೆಪ್ಪರ ಹಾಗೆ ನೋಡುತ್ತ ನಿಂತಿರೇಕೆ? ಬನ್ನಿರಿ; ಈಕೆಯನ್ನು ಆ ಒಳಗಿನ ಕೋಣೆಗೆ........"

"ಸಾಧುಗಳ ಪ್ರಾಪ್ತಿಯೊಳಗಿನ ಅರ್ಧಪಾಲು ನಿನಗೂ ಬೇಕಾಗಿದೆಯೇನು?" ಎಂದೆಂದು, ಕುಮುದಿನಿಯು ನಿರ್ಮಲೆಯ ಕೈಯೊಳಗಿಂದ ತನ್ನ ಕೈಯನ್ನು ಬಿಡಿಸಿಕೊಂಡು ನಿಲ್ಲಲು, ಸಾಧುವು ಅಂಜುತ್ತಂಜುತ್ತ:—"ನಿರ್ಮಲೆ, ಬೇಡ-ಬೇಡ· ಹೋಗಲಿ, ಈ ಸಾಡೇಸಾತಿಯು ಪಾಪಭರಿತಳಾಗಿಯೇ ಹೋಗಲಿ. ಇನ್ನು ನಾನು ಬಹು ದೊಡ್ಡ ಸಮಾಧಿಯನ್ನು ಏರಿಸುವೆನು. ಅದರಿಂದ ಇವಳಿಗೆ ಇಂದೆಯೇ ತಕ್ಕ

ಪ್ರಾಯಶ್ಚಿತ್ತವಾಗದಿದ್ದರೆ, ಈ ಕಮಲಾಕಾಂತ ಸಾಧುವಿನ ಸಾಮರ್ಥ್ಯವೆಂತಹದು?''

"ಎಂಥ ಶುಕಮುನಿಯಿವನು! ಮೂರ್ಖರಿರಾ, ನಿಮಗೆ ನಿಮ್ಮ ಪಾಪದ ಫಲಗಳು ಇಹಜನ್ಮದಲ್ಲಿಯೇ ಲಭಿಸದಿರಲಾರವು" ಎಂದಂದು ಕುಮುದಿನಿಯು ಬಾಗಿಲ ಹತ್ತರ ಬಂದಳು; ಮತ್ತು ಬಾಗಿಲ ಚಿಲಕ ತೆಗೆದು ಹೊರಬಿದ್ದಳು. ಇಷ್ಟರಲ್ಲಿ ಅವಳ ಮೂಗಿನ ಬಳಿಯಲ್ಲಿ ಯಾರೋ ಒಂದು ಶುಭ್ರ ಕರವಸ್ತ್ರವನ್ನು ಹಿಡಿದ ಕೂಡಲೆ, ಅವಳು ಮೂರ್ಛೆ ತಾಳಿ ನೆಲಕ್ಕೆ ಬಿದ್ದುಬಿಟ್ಟಳು!

ಕುಮುದಿನಿಯು ಬಾಗಿಲ ತೆರೆಯ ಹತ್ತಲು, ನಿರ್ಮಲೆಯು ಒಳ್ಳೇ ಕಳವಳದಿಂದ:—"ಸಾಧುಗಳೇ-ಸಾಧುಗಳೇ, ಅವಳನ್ನು ಹೀಗೆ ಸುಮ್ಮನೆ ಏಕೆ ಹೋಗಗೊಡುವಿರಿ? ಆದರಿಂದ ನನ್ನ ಬಿರುದಿಗೆ ಕಲಂಕ ಹತ್ತೀತಲ್ಲ!''

"ನಿರ್ಮಲೇ, ಹತ್ತಲೊಲ್ಲದೇಕೆ?" ಕಮಲಾಕಾಂತನು ತನ್ನ ಎದೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತ ಅನ್ನುತ್ತಾನೆ:—"ಆಕೆಯು ಒದರಿಗಿದರಿದಳೆಂದರೆ, ಅಕ್ಕಪಕ್ಕದ ಜನರು ಕಲೆತು ಸಾಧುಗಳ ಹೂರಣವೆಲ್ಲ ಹೊರಬಿದ್ದು ಹೋದೀತು; ಮತ್ತು ನಮ್ಮ ಎಲ್ಲ ವಿಲಾಸಗಳು ಅಲ್ಲಲ್ಲಿಯೇ ಮಣ್ಣುಪಾಲಾದಾವು. ಅವಳು ತೀರ ತಾಳಗೆಟ್ಟವಳಾಗಿರುತ್ತಾಳೆ. ಇಂಥ ಉರಿಯುವ ಕೊಳ್ಳಿಯನ್ನು ನಮ್ಮ ನಿವಾಸಸ್ಥಾನದಲ್ಲಿ ತಂದು, ನಮ್ಮ ಮನೆಗೆ ನಾನೇ ಬೆಂಕಿಹಚ್ಚಿಕೊಳ್ಳುವಂತಹ ಹುಚ್ಚನು ಈ ಕಮಲಾಕಾಂತನಾಗಿಲ್ಲ. ನಿರ್ಮಲೆ, ನೀನು ಇನ್ನು ಒಳ್ಳೇ ಹಗಣದಿಂದ ಈಕೆಯ ಭಾವ-ನೆಘೆಣ್ಣಿಯರಿಗೆ ಹೇಳು; ಅಂದರೆ ಇವಳು ಏನು ಹೇಳಿದರೂ ಅಲ್ಲಿ ಇವಳ ಮಾತು ಎಳ್ಳಷ್ಟೂ ನಾಟಿರಬಾರದು ನೊಡು!"

"ಸಾಧುಗಳೇ, ನೋಡಿಯಾದರೂ ನೋಡಿರಿ; ಅವಳ ಕರಳುಗಳನ್ನೇ ಅವಳ ಬಾಯಲ್ಲಿ ಹೇಗೆ ಸೇರಿಸುತ್ತೇನೆಂಬದನ್ನು. ಈ ಕುಮುದಿನಿಯು ತನ್ನ ಭಾವ-ನೆಘೆಣ್ಣಿಯರೆದುರಿಗೆ ತನ್ನ ಜೀವವನ್ನು ತೆಗೆದಿಟ್ಟರೂ ಕೂಡ ಇವಳೇ ಆ ಸಾಧುಗಳ ಮಠದಲ್ಲಿ ಏನೋ ಅಚಾತುರ್ಯದಿಂದ ನಡೆದು, ಮತ್ತೆ ತಾನೇ ಅವರ ಬಗ್ಗೆ ಏನೋ ಹೇಳಹತ್ತಿರುವಳೆಂದು ತಿಳಿದು ಇವಳನ್ನು ಒದೆದು ಹೊರಗಟ್ಟುವರು; ಆದರೆ ಸಾಧುಗಳೇ, ನೀವು ಮೀಸೆ ಹೊತ್ತ ಗಂಡಸಾಗಿದ್ದರೂ ನೀವು ಇಷ್ಟು ಹೇ........"

"ಎಲೇ ನಿರ್ಮಲೆ," ಕಮಲಾಕಾಂತನು ನಡುವೇ ಅನ್ನುತ್ತಾನೆ:—"ನಮ್ಮದೆಲ್ಲವೂ ಗಿಲೀಟಿನ ನಾಣ್ಯವು! ಅವನ್ನು ಬಹು ಎಚ್ಚರಿಕೆಯಿಂದ ಪ್ರಚುರಗೊಳಿಸಬೇಕು; ಇಲ್ಲದಿದ್ದರೆ ನನ್ನ-ನಿನ್ನ ಕೈಗಳಲ್ಲಿ ಒಮ್ಮೆಲೆ ಕಬ್ಬಿಣ ಬಳೆಗಳೇ ಬಂದಾವು. ಪ್ರಿಯ ನಿರ್ಮಲೇ, ನಮ್ಮಂತಹರು ಒಳ್ಳೇ ಎಚ್ಚರಿಕೆಯಿಂದ ಸ್ಥಿತಿಗತಿಗಳಿಗೆ ಅಂಜಿ ನಡೆಯಬೇಕಾಗುತ್ತದೆ. ಒಮ್ಮೆಲೆ ರಭಸದಿಂದ ನಡೆಯುವದು ತಕ್ಕದ್ದಲ್ಲ."

"ಸಾಧುಗಳೇ, ನೀವು ಇಷ್ಟೇಕೆ ಅಂಜುತ್ತಿರುವಿರೆಂಬದು ತಿಳಿಯದಾಗಿದೆ. ಆ ಕುಮುದಿನಿಯು ಹಾಗೆ ಮಾತಾಡುವಾಗ ಇಲ್ಲವೆ ಒದರುವಾಗ ಪ್ರತ್ಯಕ್ಷ ವಲ್ಲಭರಾಯರಿದ್ದರೂ ಅವಳ ಕಪಟ ಕೃತ್ಯದ ಬಗ್ಗೆ ಕಾಲತ್ರಯದಲ್ಲೂ ಅವರಿಗೆ ವಿಶ್ವಾಸವುಂಟಾಗು

ತ್ತಿರಲಿಲ್ಲ. ಸಾಧುಗಳೇ, ಅವಳೊಳ್ಳೇ ಹಗಣದವಳು! ನೂರಾರು ಜನರ ಕೈನೀರು ಕುಡಿದವಳು! ತಾಳಗೆಟ್ಟ ವಾರವನಿತೆಯು! ಅಂಥವಳಲ್ಲಿ ಯಾರಿಗಾದರೂ ನಂಬಿಗೆ ಯಾದೀತೇ? ನೀವು ಸುಮ್ಮನೆ ಮುತ್ತಿನಂತಹ ಹೊತ್ತನ್ನು ವ್ಯರ್ಥವಾಗಿ ಕಳೆದಿರಿ!"

ಹೀಗೆ ನಿರ್ಮಲೆಯು ಮೂಗು ಮುರಿಯುತ್ತ ನುಡಿಯಲು:—"ಅದಿರಲಿ. ನಿರ್ಮಲೇ, ಆ ಕಿಟಕಿಗಳನ್ನೆಲ್ಲ ತೆರೆ. ತುಸ ಗಾಳಿಯಾದರೂ ಬರಲಿ. ಜೀವವು ಉಬ್ಬಿಗೆ ಹಾಕಿದಂತಾಗಿದೆ" ಎಂದು ಆ ಪರಾಕ್ರಮಪಟುವಾದ ಗುರುವು ಆಜ್ಞೆ ಗೈಯಲು, ಆ ಉಪದ್ವ್ಯಾಪಿನಿಯಾದ ಶಿಷ್ಯಣಿಯು ಆ ಮಹಾಲಿನ ಎಲ್ಲ ಬಾಗಿಲು-ಕಿಡಕಿಗಳನ್ನು ತೆರೆಯುತ್ತ:—"ಆಗಲಿ. ಗುರುಗಳೇ, ನೀವಿನ್ನು ತುಸ ವಿಶ್ರಾಂತಿ ಹೊಂದಿರಿ. ನಾನು ನರ್ಮದೆಯ ಬಳಿಗೆ ಹೋಗಿ ಅಲ್ಲಿ ಹೇಗೆ ಕೊಳ್ಳೀ ಕೊಡುತ್ತೇನೆಂಬದನ್ನಾದರೂ ನೋಡಿರಿ. ಆದರಿಂದ ಆ ಕುಮುದಿನೀ ಲವಂಡಿಯು ದಿಂಡರಿಕೆ ಯುರುಳುತ್ತ ನಿಮ್ಮ ಕಾಲೆಡೆಗೆ ಬರುವಂತೆ ಮಾಡದಿದ್ದರೆ ನನ್ನ ನಿರ್ಮಲೆ ಎಂಬ ಹೆಸರನ್ನೇ ಬದಲಿಸಿಡಿರಂತೆ!"

"ಒಳ್ಳೇದು, ಹೋಗು; ಆದರೆ ಗುರುವಿನ ಮರ್ಯಾದೆ ಕಾಯು." ಎಂದು ಕಮಲಾಕಾಂತನು ನಿಟ್ಟುಸಿರು ಬಿಟ್ಟು ಅಂದನು. ನಿರ್ಮಲೆಯು ಆತನ ಕಡೆಗೆ ಓರೆಗಣ್ಣಿನಿಂದ ನೋಡುತ್ತ ಹೊರಟು ಹೋದಳು.

ನಮ್ಮ ಕಥಾನಕವು ನಡೆದ ಕಾಲಕ್ಕೆ ಬಳ್ಳಾರಿಯ ಕಡೆಗೆ ಪುಂಡರ ಹಾವಳಿಯು ಹೆಚ್ಚಾಗಿದ್ದಿತು. ಆಗ ಹಗಲು-ಹಾಡಿನಲ್ಲಿ ಒಬ್ಬೊಂಟಿಗರಾದ ಹೆಣ್ಣುಮಕ್ಕಳು ರಾಜಬೀದಿಯಿಂದ ಹೋಗುವದು ಕೂಡ ದುಸ್ತರವಾಗಿತ್ತು. ದಿನಾಲು ಹೊಸ ಹೊಸ ಪುಂಡಾಟಿಕೆಯ ಶ್ರವಣದಿಂದ ಜನರೆಲ್ಲರೂ ಹೌಹಾರಿ ಹೋಗಿದ್ದರು. ಇಂದು ಇಂಥವನ ತರುಣ ಹೆಂಡತಿಯನ್ನು ಪುಂಡರು ಓಡಿಸಿದರು; ಮೊನ್ನೆ ಅಂಥವನನ್ನು ಖೂನಿ ಮಾಡಿದರು; ನಿನ್ನೆ ಆ ಓಣಿಯಲ್ಲಿ ದರವಡೆ ಹಾಕಿದರು. ಇಂತಹ ಅಕ್ರಾಳ-ವಿಕ್ರಾಳ ಸಂಗತಿಗಳಿಂದ ಜನರು ಭಯಪಡುತ್ತಿದ್ದರು. ಬಳ್ಳಾರಿಯ ಕಡೆಯ ಪೋಲೀಸರ ಕರ್ತವ್ಯದಕ್ಷತೆಯು ಸುಪ್ರಸಿದ್ಧವಾದದ್ದೇ; ಆದರೆ ಆ ಪುಂಡರು ಅವರನ್ನೂ ಜೇರಿಗೆ ತಂದಿದ್ದರು. ಪೋಲೀಸರು ಹಗಲು-ರಾತ್ರಿಯೆನ್ನದೆ ಒಂದೇಸವನೆ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕುಳಿತಿದ್ದರೂ, ಪುಂಡರ ತಾಂಡವ ನೃತ್ಯವು ಏರಿಕೆಯ ಸ್ಥಿತಿಯಲ್ಲೇ ಇದ್ದಿತು.

ನಿರ್ಮಲೆಯು ಕುಮುದಿನಿಯನ್ನು ವಲ್ಲಭರಾಯನ ಮನೆಯಿಂದ ಕರಕೊಂಡು ನಡೆದಾಗ ಇಬ್ಬರು ಪುಂಡರು ಅವರ ಹಿಂದಿನಿಂದಲೇ ನಡೆದರು. ಕುಮುದಿನಿಗೆ ವಸ್ತ್ರಾಭರಣಗಳ ಬಗ್ಗೆ ಹೆಚ್ಚು ಹವ್ಯಾಸವಿರದಿದ್ದರೂ ವಲ್ಲಭರಾಯನಿಗೆ ತಮ್ಮ ಯೋಗ್ಯತೆಗೆ ತಕ್ಕಂತೆ ಮನೆಯೊಳಗಿನ ಹೆಂಗಸರು ಬಂಗಾರ-ಮುತ್ತು-ರತ್ನಗಳಿಂದ ಹೊಳೆಯುತ್ತಿರಬೇಕೆಂಬ ಹವ್ಯಾಸವಿದ್ದದರಿಂದ, ಆತನು ಕುಮುದಿನಿಯ ಮೈಮೇಲೆ ಎರಡು-ಮೂರು ಸಾವಿರ ಬೆಲೆಯ ಅಲಂಕಾರಗಳನ್ನಿಟ್ಟಿದ್ದನು. ಆದರಿಂದ ಆ ಆಭರಣ

ಗಳು ಆ ಪುಂಡರ ಕಣ್ಣುಗಳನ್ನು ಕುಕ್ಕಿಸಿದವು. ಆಗ ಕುಮುದಿನಿಯು ಸ್ವಸ್ಥಚಿತ್ತಳಾಗಿ ರದ್ದರಿಂದ ತನ್ನನ್ನು ಅನುಸರಿಸಿ ಬರುತ್ತಿರುವ ಆ ಪುಂಡರ ಕಡೆಗೆ ಅವಳ ಲಕ್ಷ್ಯವಿರಲಿಲ್ಲ. ಇಂದು ತಮ್ಮ ಬೇಟೆಯು ಅನಾಯಾಸವಾಗಿ ಕೈಸೇರಿತೆಂಬ ಸಂತೋಷದಲ್ಲಿದ್ದ ನಿರ್ಮಲೆಯು ಒಮ್ಮೆಯೂ ಹಿಂದಿರುಗಿ ನೋಡಲಿಲ್ಲ. ಹಾಗೆ ಅವರು ಕಮಲಾಕಾಂತ ಸಾಧುವಿನ ಮಠವನ್ನು ಪ್ರವೇಶಿಸಿದೊಡನೆಯೇ ಒಬ್ಬ ಪುಂಡನು ತನ್ನ ಸಹಾಯಕನ ಕಿವಿಯಲ್ಲಿ ಏನೇನೋ ಹೇಳಲು, ಆತನು ಅಲ್ಲಿಂದ ಹೊರಟು ಹೋದನು. ಅಲ್ಲಿ ಉಳಿದವನು ಕಮಲಾಕಾಂತನ ಮಠದಿಂದ ಹೊರಹೊರಡುತ್ತಿರುವ ರಮಣಿಯರನ್ನು ನೋಡುತ್ತ ಒತ್ತಟ್ಟಿಗೆ ಸಹಜವಾಗಿ ನಿಂತುಕೊಂಡನು. ಇಷ್ಟರಲ್ಲಿ ಅಲ್ಲಿಂದ ಹೊರಟು ಹೋಗಿದ್ದ ಪುಂಡನು ಒಂದು ಟ್ಯಾಕ್ಸಿಯನ್ನು ತಂದನು. ಡ್ರಾಯವ್ಹರನ ಹಾಗು ಆ ಪುಂಡರ ಸಲಿಗೆಯ ವರ್ತನದಿಂದ ಆತನು ಅವರ ಕಟ್ಟಿನೊಳಗಿನವನೇ ಎಂದಂತಾಯಿತು. ಇಂಥ ಪುಂಡರು ತಮ್ಮ ಕೃಷ್ಣಕೃತ್ಯಗಳನ್ನು ಬೊಬ್ಬಾಟವಾಗದಂತೆ ನಿರ್ವಹಿಸಲಿಕ್ಕೆಂದು ತಮ್ಮ ಸ್ವಂತದ ಮೋಟರ-ಟ್ಯಾಕ್ಸಿಗಳನ್ನಿಟ್ಟಿರುತ್ತಾರೆ. ಈ ಜನರು ಎಲ್ಲಿಯಾದರೂ ಲಾಗ ಸಾಧಿಸುವದೇನೆಂದು ಸೂಕ್ಷ್ಮವಾಗಿ ನಿರೀಕ್ಷಿಸ ಹೊರಟೊಡನೆಯೆ, ಇವರ ಟ್ಯಾಕ್ಸಿಗಳು ಹಿಂದಿನಿಂದಲೇ ಬರುತ್ತಿರುತ್ತವೆ. ಯಾವದೊಂದು ಬೇಟೆಯು ಬಲೆಯೊಳಗೆ ಸಿಕ್ಕೊಡನೆಯೇ ಅವರು ಆ ತಮ್ಮ ಟ್ಯಾಕ್ಸಿಗಳ ನೆರವಿನಿಂದ ಅದನ್ನು ತಮ್ಮ ಗುಪ್ತಸ್ಥಳಕ್ಕೆ ಸಾಗಿಸಿಬಿಡುವರು. ಈ ಪುಂಡರು ತಮ್ಮ ಟ್ಯಾಕ್ಸಿ-ಮೋಟರುಗಳ ಬಗ್ಗೆ ಪೋಲೀಸರಿಗೆ ಸಂಶಯ ಬರಬಾರದೆಂದು ಅವುಗಳ ನಂಬರು-ಬಣ್ಣಗಳನ್ನು ಆಗಾಗ್ಗೆ ಬದಲಿಸುತ್ತಿರುತ್ತಾರೆ.

ಮಿಕ್ಕ ಎಲ್ಲ ಹೆಂಗಳೆಯರು ಹೊರಟು ಹೋದ ಬಳಿಕ ನಿರ್ಮಲೆಯು ಬಾಗಿಲವನ್ನಿಕ್ಕಿಕೊಂಡಳು. ಆಗ ಆ ಇಬ್ಬರು ಪುಂಡರು ದಾರಿಯ ಪಕ್ಕದಲ್ಲಿ ತಮ್ಮ ಟ್ಯಾಕ್ಸಿಯನ್ನು ನಿಲ್ಲಿಸಿಕೊಂಡು ಒಳಗೆ ಹೋದವರ ಮಾರ್ಗನಿರೀಕ್ಷಿಸುತ್ತ ನಿಂತವರ ಮಿಷದಿಂದ ಟ್ಯಾಕ್ಸಿಯ ಬಳಿಯಲ್ಲಿ ನಿಂತುಕೊಂಡರು. ಕಮಲಾಕಾಂತನ ಬಿಡಾರವು ಬ್ರೂಸಪೇಟೆಯ ಒಂದು ಮೂಲೆಯಲ್ಲಿದ್ದುದರಿಂದ ಅತ್ತ ಕಡೆಗೆ ಜನಸಂದಣಿಯು ಹೆಚ್ಚಾಗಿರಲಿಲ್ಲ. ಇದೇ ಕಾರಣವ ಮೂಲಕ ಅಲ್ಲಿಯ ಆ ಪುಂಡರ ಕಡೆಗೆ ಜನರ ಲಕ್ಷ್ಯವು ಅಷ್ಟೊಂದಿರಲಿಲ್ಲ; ಅಲ್ಲದೆ ಆ ಪುಂಡರ ಉಡಿಗೆ-ತೊಡಿಗೆಗಳು ಟ್ಯಾಕ್ಸಿಯ ಡ್ರಾಯವ್ಹರ-ಕ್ಲೀನರರಂತಿದ್ದವಾದ್ದರಿಂದ, ಅವರ ಕಡೆಗೆ ಯಾರೂ ಸಂಶಯಿ ಮುದ್ರೆಯಿಂದ ನೋಡುವಂತಿರಲಿಲ್ಲ.

ಒಳಗೆ ಕುಮುದಿನಿಯು ಮೂಗಿನ ಮೇಲೊಮ್ಮೆ ಚೆನ್ನಾಗಿ ಗುದ್ದಿದೊಡನೆ ಸಾಧುವು ಕಿರಚಿಕೊಂಡ ದನಿಯ ಸದ್ದು ಹೊರಗೆ ದಾರಿಯಲ್ಲಿ ನಿಂತಿದ್ದ ಆ ಪುಂಡರ ಕಿವಿಗೆ ಕೇಳಿಸಿತು. ಆ ಕೂಡಲೆ ಅವರು ಬಾಗಿಲ ಬಳಿಗೆ ಬಂದು ನಿಂತು ಕಿವಿಯಾನಿಸಿಕೊಂಡು ಕೇಳಹತ್ತಿದರು; ಮತ್ತು ಒಳಗೆ ಏನೋ ಗಡಿಬಿಡಿ ನಡೆದಿದೆಯೆಂಬದನ್ನು ತಟ್ಟನೆ ಕಂಡುಕೊಂಡರು. ಆ ಬಳಿಕ ಕುಮುದಿನಿಯು ತೆಗೆದ

ಬಾಗಿಲ ಚಿಲಕಗಳ ಸಪ್ಪಳವನ್ನು ಕೇಳಿ ಒಬ್ಬನು ಇನ್ನೊಬ್ಬನಿಗೆ ಸನ್ನೆ ಮಾಡಿದನು. ಡ್ರಾಯವ್ಹರನು ಟ್ಯಾಕ್ಸಿಗೆ ಗತಿಕೊಡಲಿಕ್ಕೆಂದು ಸಜ್ಜಾದನು. ಇಷ್ಟರಲ್ಲಿ ಕುಮು ದಿನಿಯು ಬಿರಿ ಬಿರಿ ಎಂದು ಹೊರಗೆ ಬಂದಳು. ಬಾಗಿಲಲ್ಲಿ ತನ್ನನ್ನು ಕೊಂಡೊಯ್ಯಲಿಕ್ಕೆ ಯಾರಾದರೂ ನಿಂತುಕೊಂಡಿರುವರೆಂಬ ಕಲ್ಪನೆ ಕೂಡ ಆಕೆಗೆ ಆಗ ಬರಲಿಲ್ಲ. ಕುಮುದಿನಿಯು ಹೊರಬಿದ್ದೊಡನೆಯೇ ಪುಂಡರಲ್ಲಿಯ ಒಬ್ಬನು, "ಚಲೋಃ ಬಾಯಿಸಾಬ, ಜಲದೀ ಗಾಡಿಕೇ ಅಂದರ ಚಲೋಃ" ಎಂದೆನ್ನುತ್ತ ಅವಳ ಮೂಗಿನ ಹತ್ತರ ಕರವಸ್ತ್ರವನ್ನು ಹಿಡಿದನು. ಅದರಿಂದ ಅವಳಿಗೆ ಒಮ್ಮೆಲೆ ಬವಳಿ ಬಂದು ಅವಳು ನೆಲಕ್ಕೆ ಬೀಳುತ್ತಿರುವಷ್ಟರಲ್ಲಿ ಆತನು ಇನ್ನೊಬ್ಬನ ಸಹಾಯದಿಂದ ಅವಳನ್ನು ಟ್ಯಾಕ್ಸಿಯೊಳಗೆ ಎತ್ತಿಹಾಕಿ ಬಿಟ್ಟನು. ಕೂಡಲೆ ಆ ಟ್ಯಾಕ್ಸಿಯು 'ಘೊಂ-ಘೊಂ' ಎಂದು ಧ್ವನಿಗೈಯುತ್ತ ವಾಯುವೇಗದಿಂದ ಹೊರಟು ಹೋಯಿತು.

ಆ ಟ್ಯಾಕ್ಸಿಯು ಮಿತಿಮೀರಿದ ವೇಗದಿಂದ ಹೊರಟದ್ದರಿಂದ ದಾರಿಯಲ್ಲಿ ಅಂದು ಒಬ್ಬಿಬ್ಬ ಪಥಿಕರ ಆಹುತಿಯಾಗತಕ್ಕದ್ದೇ; ಆದರೆ ಸುದೈವದಿಂದ ಅವರು ಪಾರಾದರು. ಪೋಲೀಸರು ಆ ತಾಳಗೆಟ್ಟ ವೇಗದ ಟ್ಯಾಕ್ಸಿಯ ನಂಬರು ತಿಳಕೊಳ್ಳಬೇಕೆಂದು ಪ್ರಯತ್ನಿಸಿದರು; ಆದರೆ ಅದು ಸಾಧಿಸಲಿಲ್ಲ. ಅತ್ಯಂತ ವೇಗದಿಂದ ಹೊರಟ ಆ ಟ್ಯಾಕ್ಸಿಯು ಕೆಲ ನಿಮಿಷಗಳಲ್ಲಿಯೇ ಹತ್ತಿಪ್ಪತ್ತು ಮೈಲುಗಳನ್ನು ಹಿಂದೆ ಹಾಕಿ, ಲೋಹಾಚಲವೆಂಬ ಪರ್ವತದ ಬಳಿಯ ಘೋರಾರಣ್ಯವನ್ನು ಪ್ರವೇಶಿಸಿತು. ಆಗ ಸಂಜೆಯ ೫-೫॥ ಗಂಟೆಯಾಗಿರಬಹುದು. ಸಮೀಪದಲ್ಲೆಲ್ಲೂ ಮನುಷ್ಯರ ಸುಳಿವಿಲ್ಲ. ಅಂಥ ನಿರ್ಜನ ಸ್ಥಳದಲ್ಲಿ ಅವರು ತಮ್ಮ ಟ್ಯಾಕ್ಸಿಯನ್ನು ನಿಲ್ಲಿಸಿದರು; ಹಾಗು ಅವರಲ್ಲಿ ಒಬ್ಬನು ಕೆಳಗಿಳಿದನು. ಅವನು ಸುತ್ತಲೂ ದಿಟ್ಟಿಸಿ ನೋಡಿ ಯಾರೂ ಇರದ್ದನ್ನು ಖಾತ್ರಿ ಮಾಡಿಕೊಂಡು, ಕುಮುದಿನಿಯನ್ನು ಕೆಳಗಿಳಿಸಲು ಹೇಳಿದನು. ಕ್ಲೋರೋಫಾರ್ಮಿನ ಅಮಲು ಕುಮುದಿನಿಯ ಮೇಲೆ ಚೆನ್ನಾಗಿ ಆಗಿದ್ದರಿಂದ, ಅವಳಿಗಿನ್ನೂ ಸ್ಮೃತಿಯುಂಟಾಗಿರಲಿಲ್ಲ. ಅದರಿಂದ ಅವರು ಅವಳನ್ನು ಟ್ಯಾಕ್ಸಿಯೊಳಗಿಂದ ಇಳಿಸಿ ಸಮೀಪದ ಒಂದು ಗಿಡದ ಕೆಳಗೆ ಹುಲ್ಲ ಮೇಲೆ ಮಲಗಿಸಿದರು; ಹಾಗು ಕುಮಾರಿಕೆಯರು ಯಾವುದೊಂದು ಪ್ರಫುಲ್ಲಿತವಾದ ಹೂಬಳ್ಳಿಯ ಮೇಲಿನ ಹೂವುಗಳನ್ನೆತ್ತಲಿಕ್ಕೆ ನಾಮುಂದೆ ನಾಮುಂದೆ ಎಂದು ಹಾತೊರೆಯುತ್ತಿರುವಂತೆ, ಆ ಪುಂಡರು ಆ ತರುಣಿಯ ಮೈಮೇಲಿನ ಎಲ್ಲ ಆಭರಣಗಳನ್ನು ಬಿಚ್ಚಿಕೊಂಡರು. ತಮ್ಮ ಈ ಕೃಷ್ಣಕೃತ್ಯವನ್ನು ಯಾರೂ ನೋಡುತ್ತಿರುವದಿಲ್ಲೆಂಬ ಬಗ್ಗೆ ಅವರಿಗೆ ಸಂಪೂರ್ಣ ಖಾತ್ರಿಯಿದ್ದಿತು; ಆದರೆ ಸಾಧ್ವಿಯರ ಶೀಲ ರಕ್ಷಣದ ಸಲುವಾಗಿ ಪರಮೇಶ್ವರನು ಎಂಥೆಂಥ ಚಮತ್ಕಾರಗಳನ್ನುಂಟು ಮಾಡುತ್ತಿರುತ್ತಾನೆಂಬದು ಆ ಪಾಪಿಗಳಿಗೇನು ಗೊತ್ತು? ಆ ಪುಂಡರು ಕುಮುದಿನಿಯ ಮೈಮೇಲಿನ ಆಭರಣಗಳನ್ನಷ್ಟೇ ಸೆಳಕೊಂಡು ಬಿಡುತ್ತಿರಲಿಲ್ಲ; ಅವಳನ್ನು ಭ್ರಷ್ಟಗೊಳಿಸುವ ಇಚ್ಛೆಯೂ ಅವರದಾಗಿತ್ತು; ಆದರೆ ಜಗನ್ನಿಯಾಮಕನ ಅಖಂಡ ಶಕ್ತಿಯ ಎದುರಿಗೆ ಆ ಮಶ

ಕರ ಹೇತುವು ಸಿದ್ಧಿಸುವ ಬಗೆಯುಂಟೆ? ಅದೇ ಕಾಲಕ್ಕೆ ಸಮೀಪದ ಗ್ರಾಮದೊಳಗಿನ ಒಕ್ಕಲಿಗರ ಕೆಲ ಹುಡುಗರು ಆಟವಾಡುವದಕ್ಕೆಂದು ಪಕ್ಕದ ದಿನ್ನೆಗೆ ಬಂದವು. ಅದು ಅವರ ಕಣ್ಣಿಗೆ ಕಾಣಿಸಲು, ಅವರು ಆ ದಿನ್ನೆಯ ಇಳುಕಲಿನಲ್ಲಿಯ ಹೊಲಗಳಲ್ಲಿ ಕೆಲಸ ಮಾಡುತ್ತಿದ್ದ ತಮ್ಮ ಒಕ್ಕಲಿಗರಿಗೆ ಆ ಸಂಗತಿಯನ್ನು ತಿಳಿಸಿದರು. ಆ ಕೂಡಲೆ ೨೦-೨೫ ಜನ ರೈತರು ಕೈಗಳಲ್ಲಿ ಕುಡಗೋಲು, ಕೊಡ್ಲಿ, ಕೋಲುಗಳನ್ನು ಹಿಡಿದುಕೊಂಡು ಓಡುತ್ತೋಡುತ್ತ ಆ ಟ್ಯಾಕ್ಸಿಯ ಬಳಿಗೆ ಬರತೊಡಗಿದರು. ಆ ಪುಂಡರು ಕುಮುದಿನಿಯ ಅಲಂಕಾರಗಳನ್ನೆಲ್ಲ ಟ್ಯಾಕ್ಸಿಯಲ್ಲಿ ಭದ್ರವಾಗಿರಿಸಿ ಅವಳನ್ನು ಎಚ್ಚರಗೊಳಿಸಹತ್ತಿದರು. ಇಷ್ಟರಲ್ಲಿ ಆ ಪುಂಡರಲ್ಲಿಯ ಒಬ್ಬನ ಕಣ್ಣಿಗೆ ಆ ರೈತರ ತಂಡವು ಕಾಣಿಸಿತು. ಕೂಡಲೆ ಆತನು, "ಯಾರ, ಭಾಗೋ!" ಎಂದು ಕೂಗಿದನು. ಆಗ ಅವರಿಬ್ಬರೂ ಕುಮುದಿನಿಯನ್ನು ಅಲ್ಲಿಯೇ ಬಿಟ್ಟುಗೊಟ್ಟು, ಟ್ಯಾಕ್ಸಿಯನ್ನು ಸೇರಿ ಅದನ್ನು ಭರದಿಂದ ಬಿಟ್ಟುಬಿಟ್ಟರು!

"ಹಿಡಿಯಿರಿ, ಬಡಿಯಿರಿ" ಎಂದೆನ್ನುತ್ತ ಒಕ್ಕಲಿಗರ ತಂಡವು ಕುಮುದಿನಿಯು ಬಿದ್ದುಕೊಂಡಲ್ಲಿಗೆ ಬಂದರು; ಹಾಗು ಅವಳು ಹಾಗೆ ಅಸ್ತವ್ಯಸ್ತವಾಗಿ ಬಿದ್ದುಕೊಂಡದ್ದನ್ನು ಕಂಡು:—"ಇವಳನ್ನು ಈ ಪುಂಡರು ಕೊಂದು ಚೆಲ್ಲಿರುವರೇನು?" ಎಂದು ಅನ್ನಲು, ಅವರಲ್ಲಿಯ ಒಬ್ಬನು:—"ಎಲೇ, ಇವಳು ಜೀವಂತಳಿರುವಳು; ಇವಳಿಗೆ ಸ್ಮೃತಿಯಿಲ್ಲ" ಎಂದು ಹೇಳಲು, "ಹಾಗಾದರೆ ಇವಳನ್ನು ನಮ್ಮ ಗುಡಸಿಲಿಗೆ ಒಯ್ದು ಉಪಚರಿಸೋಣ; ಅಂದರೆ ಸಾವಧಗೊಂಡಾಳು" ಎಂದಂದು, ಅವರಲ್ಲಿಯ ಇಬ್ಬರು ಮೂವರು ಸೇರಿ ಕುಮುದಿನಿಯನ್ನು ಹೊತ್ತುಕೊಂಡು ತಮ್ಮ ಮನೆಗೆ ಒಯ್ದು ಒಂದು ಕಂಬಳಿಯ ಮೇಲೆ ಮಲಗಿಸಿದರು.

+ + + + + +

ವಾಚಕರೇ, ಕುಮುದಿನಿಗೆ ಸ್ಮೃತಿಯುಂಟಾಗುವ ವರೆಗೆ ನಾವು ವಿಜಾಪುರದ ಸರಸಿಯ ಕಡೆಗೆ ಹೋಗಿ ಬರೋಣ. ಸರಸಿಯು ತನ್ನ ಅಲ್ಲದ ಸಲ್ಲದ ಮನೀಷೆಗಳಿಗಾಗಿ ಕುಮುದಿನಿಯನ್ನು ಪೀಡಿಸುವದಕ್ಕೆಂದು ಗುಂಡನನ್ನು ತನ್ನ ಹಸ್ತಕನನ್ನಾಗಿ ಮಾಡಿಕೊಂಡಿದ್ದಳು; ಆದರೆ ಭವಾನರಾಯನು ತೀರಿಕೊಂಡ ಮೇಲೆ-ಗುಂಡನು ಸರಸಿಯ ಬೋಳದಲೆಯ ಮೇಲೆ ಚನ್ನಾಗಿ ಕೈಯಾಡಿಸಿದನು! ಗುಂಡನು ತಾನೇ ಸರಸಿಯ ಮನೆಯ ಮಾಲಕನೆಂದು ತಿಳಿದು, ಆಕೆಯ ಒಂದೊಂದೇ ವಸ್ತುಗಳನ್ನು ಮೆಲ್ಲಮೆಲ್ಲನೆ ಕಳ್ಳಪೇಟೆಗೆ ಸಾಗಿಸಹತ್ತಿದನು; ಹಾಗು ಆ ಬಗ್ಗೆ ಸರಸಿಯು ಏನಾದರೂ ಅಂದರೆ, ಅವಳಿಗೆ ಧಮುಕಿ ಕೊಡತೊಡಗಿದನು. "ಗುಂಡಾ, ನೀನು ಹೀಗೆ ಉಪದ್ವ್ಯಾಪಿಯಾದರೆ ನನ್ನಲ್ಲಿರಬೇಡ" ಎಂದು ಸರಸಿಯು ಅಂದರೆ "ಹಾಗಾದರೆ ನೀನು ನನ್ನಿಂದ ಬರೆಯಿಸಿದ ಪತ್ರದ ನಿಜ ಸಂಗತಿಯನ್ನು ನಾನು ಕುಮುದಿನಿಯ ಭಾವನಿಗೆ ಹೋಗಿ ಹೇಳುತ್ತೇನೆ ನೋಡು" ಎಂದು ಅಂಜಿಸಹತ್ತಿದನು. ಅದರಿಂದ ಸರಸಿಯು ಗುಂಡನಿಗೆ ಏನೂ ಅನ್ನದಾದಳು. ಮನೆಯೊಳಗಿನ ಜಿಗಟು ಕಡಿಮೆ

ಯಾಗ ಹತ್ತಲು, ಸರಸಿಯು ಕೈ ಬಿಗಿಯಾಗ ಹತ್ತಿತು. ಇನ್ನು ತನ್ನ ಹೊಟ್ಟೆ-ಬಟ್ಟೆಗಳ ಗತಿಯೇನೆಂದು ಅವಳು ಇತ್ತ ಕೊರಗುತ್ತಿದ್ದರೂ, ಅತ್ತ ಆಕೆಯ ಆಸುರೀ ಲಾಲಸೆ ಗಳು ಮಾತ್ರ ಅಣುಮಾತ್ರವೂ ಕಡಿಮೆಯಾಗಲೊಲ್ಲವು. ತಾನು ಕಳಿಸಿದ ಪತ್ರದ ಪರಿಣಾಮವು ಬಳ್ಳಾರಿಯಲ್ಲಿ ಏನು ಆಗಿರಬಹುದೆಂಬದನ್ನು ತಿಳಿಯುವ ಸಲುವಾಗಿ ಅವಳು ಹಗಲು-ರಾತ್ರಿಯೂ ತಳಮಳಿಸುತ್ತಿದ್ದಳು. ಒಂದು ದಿನ ಗುಂಡನು ರಂಗಿ ನಲ್ಲಿದ್ದುದನ್ನು ಕಂಡು ಸರಸಿಯು ಅನ್ನುತ್ತಾಳೆ:—"ಗುಂಡಾ, ನಾವು ಬಳ್ಳಾರಿಗೆ ಕಳಿಸಿದ ಪತ್ರದ ಪರಿಣಾಮವೇನಾಗಿರಬಹುದು?"

"ಅದನ್ನೆಲ್ಲ ಹೇಳಲಿಕ್ಕೆ ನಾನೇನು ಮಾಂತ್ರಿಕನೆ?" ಎಂದು ಗುಂಡನು ಒಳ್ಳೇ ಸಿಟ್ಟಿನಿಂದಲೇ ಕೇಳಿದನು.

"ಗುಂಡಾ, ನೀನು ಇತ್ತೀಚೆಗೆ ಇಷ್ಟೇಕೆ ಸಿಟ್ಟಗೇಳುತ್ತೀ?"

"ಸರಸಕ್ಕಾ, ನಿಮಗೆ ಅಲ್ಲಿಯ ಸಂಗತಿ ತಿಳಿಯುವ ಇಚ್ಛೆಯೇ ಇದ್ದರೆ, ಚೆಲ್ಲಿರಿ ನನ್ನೆದುರಿಗೆ ೨೫ ರೂಪಾಯಿಗಳನ್ನು. ಅಂದರೆ ಈಗಲೇ ಬಳ್ಳಾರಿಗೆ ಹೋಗಿ, ನಿಜ ಸಂಗತಿಯನ್ನು ತಿಳಿದು ಬರುತ್ತೇನೆ.

"ಎಲಾ ಗುಂಡಾ, ಹಣವನ್ನೇ ಖರ್ಚು ಮಾಡುವದಾದರೆ, ನಿನ್ನನ್ನೇಕೆ ಕಳಿಸ ಬೇಕು? ನಾನೇ ಒಮ್ಮೆ ಅಲ್ಲಿಗೆ ಹೋಗಿ ಬರುತ್ತಿದ್ದೆನು. ಆ ಮುಂಡೆಯು ನನ್ನೊ ಡನೆ ಹೇಗೆ ನಡಕೊಳ್ಳುತ್ತಿದ್ದರೂ, ವಲ್ಲಭರಾಯ-ನರ್ಮದಾಬಾಯಿಯವರಿಗೆ ನಾನೇ-ನೂ ಪರಕೀಯಳಲ್ಲ. ಹೇಗಿದ್ದರೂ ನಾನು ಅವರ ಬೀಗಿತ್ತಿಯೇ ಆಗಿರುತ್ತೇನೆ."

"ಹಾಗಾದರೆ ನಿನ್ನ ಬೀಗಿತ್ತಿಯ ಹೆಸರಿನಿಂದ ಕಲ್ಲು ಒಡೆಯುತ್ತ ಕೂಡ್ರು. ಸುಮ್ಮನೆ ಈ ಗುಂಡನ ತಲೆಯನ್ನೇಕೆ ಕೆಡಿಸುತ್ತೀ? ತಾನೇ ಹೋಗುತ್ತಿದ್ದಳಂತೆ ತಾನೆ! ಈ ಗುಂಡನೆಂದರೆ ನೀನೇನು ಮೂಲೆಯೊಳಗಿನ ಕಸ-ಕಡ್ಡಿ ಎಂದು ತಿಳಿದಿರು ತ್ತೀಯೇನು? ಈ ಗುಂಡನೆಂದೇ ನಿನಗಾಗಿ ಮಾಡಬಾರದ ಕೆಲಸಗಳನ್ನು ಮಾಡಿ ದನು. ಬೇರೆಯವನಾಗಿದ್ದರೆ, ಆತನು ಎಂದೋ ನಿನ್ನ ಉದೋ-ಉದೋ! ಮಾಡಿ ಬಿಡುತ್ತಿದ್ದನು."

"ಒಳ್ಳೇದಪ್ಪಾ ಗುಂಡಾ, ನೀನು ಏನಂದರೂ ಅನಿಸಿಕೊಳ್ಳುವ ಭಾಗವಿದೆ. ಈಗ ನನಗೆ ಅಂಥ ಹೀನ ದೆಸೆಯೇ ಪ್ರಾಪ್ತವಾಗಿದೆ.''

"ನೀವು ಹೀಗೆ ಸುಮ್ಮನೆ ಹುಚ್ಚರ ಹಾಗೆ ಕೇಳಿದರೆ ನಾನಾದರೂ ಏನು ಹೇಳಲಿ? ಇಲ್ಲಿಯೇ ಕುಳಿತು ತರ್ಕಿಸಿದರೆ, ಅಲ್ಲಿಯ ಸಮಾಚಾರ ತಿಳಿಯುವ ಬಗೆ ಹೇಗೆ? ಒಮ್ಮೆ ತಿರುಗಾಡಿ ಬಂದರೆ ಗೊತ್ತಾದೀತು."

"ಗುಂಡಾ, ನನಗದು ತಿಳಿಯುವದಿಲ್ಲವೇ? ಆದರೆ ನಾನು ಈಗ ದುಡ್ಡಿಗೆ ಎಷ್ಟು ಬರಗೆಟ್ಟಿರುವೆನೆಂದು ಹೇಳಲಿ? ನೀನು ನನ್ನ ಮನೆ-ಮಾರುಗಳನ್ನು ತೊಳೆಯುವ ಉದ್ಯೋಗ ನಡೆಸಿಬಿಟ್ಟಿರುತ್ತೀ. ತಮ್ಮಾ, ಗುಂಡಾ, ಇದರಿಂದ ನನ್ನ ಬಾಳು ಸಾಗುವ ಬಗೆ ಹೇಗೆ? ಎಲ್ಲವೂ ತೊಳೆದು ಹೋದ ಮೇಲೆ, ನೀನು ಕುಳಿತೀ ನಿನ್ನ

ಮನೆಯಲ್ಲಿ ಚಕ್ಕಂದದಿಂದ! ನಾನು ಮಾತ್ರ ಬಗಲೊಳಗೆ ಮಡಿಸೀರೆಯನ್ನಿಟ್ಟು ಕೊಂಡು ಮುಂದಿಯ ಮನೆಯ ಅಡಿಗೆ-ನೀರುಗಳನ್ನು ಹುಡುಕಬೇಕಾದೀತು.''

"ಹಾಗಾದರೆ ಸರಸಕ್ಕಾ, ನೀವು ಈ ಗುಂಡನನ್ನು ಇನ್ನೂ ಗುರುತಿಸಿಲ್ಲವೆಂದಂ ತಾಯಿತು. ನನ್ನ ಅಣ್ಣನು ತೀರಿದೊಡನೆಯೇ ನನಗೆ ವರ್ಷಕ್ಕೆ ಒಂದು-ಒಂದೂ ವರೆ ಸಾವಿರ ಆದಾಯದ ಭೂಮಿ ಸಿಗುವದು. ಆ ಮೇಲೆ ನಾನು ನಿಮ್ಮನ್ನು ನನ್ನ ತೋಟದೊಳಗಿನ ಮನೆಯಲ್ಲಿಯೇ ಒಯ್ದು ಇಡುವೆನು. ಆ ಬಗ್ಗೆ ನೀವು ಇಷ್ಟೇಕೆ ಅಂಜುತ್ತಿರುವಿರಿ?''

"ನೀನು ಧನಿಕನಾದ ಮೇಲೆ ಏನಾದರೂ ಮಾಡೀ; ಆದರೆ ಸದ್ಯಕ್ಕೆ ನಾನು ನಿಸ್ತರಿಸಿಕೊಳ್ಳುವ ಬಗೆ ಹೇಗೆ?''

"ಅದಿರಲಿ. ಸರಸಕ್ಕಾ, ಇಂದು ನಿಮ್ಮ ಪುರಾಣದ ವೇಳೆಯಾಗಲಿಲ್ಲವೆ?'' ಎಂದು ಗುಂಡನು ಉದ್ದೇಶಪೂರ್ವಕವಾಗಿ ಕೇಳಲು,

"ಹಾಗೆಯೋ? ಮಾತಿನ ಭರದಲ್ಲಿ ನನಗದು ಗೊತ್ತೇ ಆಗಲಿಲ್ಲ. ಒಳ್ಳೇದು, ನಡೆಯಿನ್ನು. ನಾನು ಬಾಗಿಲ ಮುಚ್ಚಿಕೊಂಡು ಪುರಾಣಕ್ಕೆ ತೆರಳುವೆನು.''

"ಅದೇಕೆ? ಈ ಗುಂಡನೇನೂ ಕಳ್ಳನಲ್ಲ. ನೀವು ನಿಮ್ಮ ಪುರಾಣ ಶ್ರವಣಕ್ಕೆ ನಡೆಯಿರಿ. ನನಗೆ ಬೇಸರಿಕೆ ಬಂದಿದೆ. ನಾನು ಇಲ್ಲಿಯೇ ತುಸ ಅಡ್ಡಾಗುತ್ತೇನೆ.'' ಎಂದಂದು, ಗುಂಡನು ಕೈಕಾಲು ಒಡ್ಡುಮುರಿಯುತ್ತ ಕುಳಿತಲ್ಲಿಯೇ ಅಡ್ಡಾದನು.

ಇತ್ತೀಚೆಗೆ ಮನೆಯೊಳಗಿನ ಕೈಗೆ ಸಿಕ್ಕ ವಸ್ತು-ಒಡವೆಗಳನ್ನೆತ್ತಿ ಹಾಕುವ ಚಾಳಿಯು ಗುಂಡನಿಗೆ ಬಿದ್ದದ್ದರಿಂದ, ಸರಸಿಯು ಆತನನ್ನು ಮನೆಯಲ್ಲಿ ಬಿಟ್ಟು ಹೊರಹೊರಡಲಿಕ್ಕೆ ಅಂಜುತ್ತಿದ್ದಳು. ಅಂತೆಯೇ ಅವಳು ಅವನನ್ನು ಮನೆಯಿಂದ ಹೊರಹೊರಡಿಸಿ, ಮನೆಗೆ ಬೀಗ ಹಾಕಿಕೊಂಡು ಹೋಗಬೇಕೆಂದಿದ್ದಳು; ಆದರೆ ಗುಂಡನು ಅಂದು ಬೇರೆಯೇ ಒಂದು ಸೋಗು ಹಾಕಿದ್ದನು. ಸರಸಿಯು ಏನು ಮಾಡಬೇಕೆಂಬವನ್ನು ತಿಳಿಯದೆ ಬಾಗಿಲ ಬಳಿಯಲ್ಲಿ ನಿಂತುಕೊಂಡಿರಲು, ಗುಂಡನು: "ಸರಸಕ್ಕಾ, ನೀವು ನಿಂತುಕೊಂಡಿರೇಕೆ? ನಿಮ್ಮ ಯಾವ ಜೀನಸಿಗೂ ಯಾರೂ ಕೈ ಹಚ್ಚುವದಿಲ್ಲ. ಕೇವಲ ನಿರಾಲೋಚನೆಯಿಂದ ಹೋಗಿರಿ. ಯಾರಾದರೂ ಒಯ್ಯ ತಕ್ಕಂಥ ಜೀನಸಾದರೂ ನಿಮ್ಮಲ್ಲಿರುವುದೇನು?''

ಗುಂಡನ ಈ ವಿವರಣದಿಂದ ಸರಸಿಯು ಮತ್ತಿಷ್ಟು ಪೇಚಿಗೊಳಗಾದಳು. ಇಂದು ಪುರಾಣಕ್ಕೆ ಹೋಗದಿದ್ದರೆ ಗುಂಡನು ಮತ್ತಿಷ್ಟು ರೇಗಿಗೇಳುವನು; ಹೋದರೆ ಮನೆಯೊಳಗಿನ ಮಿಕ್ಕ ಪದಾರ್ಥಗಳು ಕಳ್ಳಪೇಟೆಯ ದಾರಿ ಹಿಡಿಯುವ ಅಂಜಿಕೆ! ಆದರೆ ಆಗ ಆ ಬಡವೆಯು ಮಾಡುವುದೇನು? ಗುಂಡನಿಗೆ ಮನೆಯಲ್ಲಿ ಜೋಕೆಯಿಂದಿರೆಂದು ಮತ್ತೆ ಮತ್ತೆ ಹೇಳಿ, ನಿರುಪಾಯದಿಂದ ಅವಳು ಪುರಾಣಿಕರ ಸಮಾಚಾರಕ್ಕೆ ನಡೆದಳು. ಸರಸಿಯು ಅತ್ತ ಹೊರಟ ಕೂಡಲೆ, ಇತ್ತ ಗುಂಡನು ಎದ್ದು ಬಾಗಿಲ ಬಳಿಯಲ್ಲಿ ನಿಂತು ಸರಸಿಯು ಕಾಣದಾದಂತಾದ ಕೂಡಲೆ ಇಬ್ಬರು

ಕೂಲಿಯವರನ್ನು ಕರೆದು ಮನೆಯೊಳಗಿನ ಇದ್ದ-ಬಿದ್ದ ಸಾಮಾನುಗಳನ್ನೆಲ್ಲ ಅವರ ಮೇಲೆ ಹೊರಿಸಿಕೊಂಡು, ಸರಸಿಯ ಆ ಮನೆಗೆ ಕಡೆಯ ನಮಸ್ಕಾರ ಮಾಡಿ, ಕಳ್ಳ ಪೇಟೆಯ ದಾರೀ ಹಿಡಿದನು; ಹಾಗು ಅಲ್ಲಿ ಆಕೆಯ ಬೆಲೆಯುಳ್ಳ ಸೀರೆ, ಪಾತ್ರೆ ಮುಂತಾದ ಸಾಮಾನುಗಳನ್ನು ಕೈಗೆ ಬಂದ ಹಾಗೆ ಮಾರಿ, ಬಂದಷ್ಟು ದುಡ್ಡು ಕಟ್ಟಿಕೊಂಡು ಕಾಲಿಗೆ ಬುದ್ಧೀ ಹೇಳಿದನು.

ಸರಸಿಯು ಪುರಾಣಕ್ಕೆ ಹೋಗಿದ್ದರೂ ಅವಳ ಚಿತ್ತವೆಲ್ಲ ತನ್ನ ಮನೆಯ ಕಡೆಗೇ ಇದ್ದಿತು. ಪುರಾಣಿಕ ಶಾಸ್ತ್ರಿಗಳು ಹಾ, ಹೋ ಎಂದು ಗಟ್ಟಿಯಾಗಿ ಒದರುತ್ತ, ಹಾವಭಾವಯುಕ್ತವಾಗಿ ಪುರಾಣ ಹೇಳುತ್ತ ಶ್ರೋತೃಗಳಾದ ಹೆಂಗಳೆಯರನ್ನು ಹೊಟ್ಟೆ ಬಿರಿಯುವಂತೆ ನಗಿಸುತ್ತಿದ್ದರೂ ನಮ್ಮ ಸರಸಿಯು ಮಾತ್ರ ಅಂದು ಆ ಹಾಸ್ಯ-ವಿನೋದದಲ್ಲಿ ಭಾಗವಹಿಸಿರಲಿಲ್ಲ. ಅವಳು ಸುಮ್ಮನೆ ಯಾವುದೊಂದು ಕಲ್ಲು ವಿಗ್ರಹದಂತೆ ಆ ಗುಡಿಯೊಳಗಿನ ಒಂದು ಸ್ಥಳವನ್ನು ಆಕ್ರಮಿಸಿಕೊಂಡು ಕುಳಿತಿದ್ದಳು. ನಡುವೇ ಎದ್ದು ಮನೆಯ ದಾರೀ ಹಿಡಿಯಬೇಕೆಂದು ಅವಳಿಗೆಷ್ಟೋ ಸಾರೆ ಅನಿಸಿತು; ಆದರೆ ಅವಳ ಕಾಲುಗಳು ಪುರಾಣ ಮುಗಿಯುವ ವರೆಗೆ ಅವಳನ್ನು ಅಲ್ಲಿಯೇ ಕಟ್ಟಿಹಾಕಿದ್ದವು. ಸಂಜೆಯ ಏಳಕ್ಕೆ ಸರಸಕ್ಕನೊಮ್ಮೆ ಮನೆಗೆ ಬಂದಳು. ಮನೆಯ ಬಾಗಿಲಿಗೆ ಬೀಗಮುದ್ರೆಗಳೇನೂ ಹಾಕಿರದೆ, ಬಾಗಿಲವು ಮುಂದೆ ಮಾತ್ರ ಮಾಡಲ್ಪಟ್ಟಿತ್ತು. ಸರಸಕ್ಕನು ಅವನ್ನು ತಟ್ಟನೆ ದೂಡಿ, ಒಳಗೆ ಕತ್ತಲೆ ಗವಿದುದನ್ನು ಕಂಡು, "ಈ ಗುಂಡನು ಇಷ್ಟು ಕತ್ತಲಾದರೂ ಮಲಗಿರುವನಲ್ಲವೆ?" ಎಂದೆನ್ನುತ್ತ ಒಳಗೆ ಹೋಗಿ:—"ಗುಂಡಾ,-ಎಲಾ ಗುಂಡಾ" ಎಂದು ಕೂಗಿದಳು; ಆದರೆ ಅಷ್ಟರಲ್ಲಿ ಗುಂಡನ ಸವಾರಿಯು ಸುಮಾರು ಮೂರು ಮೈಲು ಅಂತರದ ಮೇಲಿದ್ದುದರಿಂದ ಸರಸಿಯ ಕೂಗಿಗೆ ಆತನಿಂದ 'ಓ' ಹೇಗೆ ದೊರೆಯಬೇಕು? 'ಅಂದರೆ ಈತನು ಮನೆಯನ್ನು ಹೀಗೆ ಹಾರು ಹೊಡೆದೇ ಹೋದನೇನು?' ಎಂದಂದು, ದೀಪ ಹಚ್ಚಿ ಅವಳು ಮನೆಯೊಳಗೆಲ್ಲ ತಿರುಗಾಡಿ ನೋಡಿದಳು. ಅವಳು ತನ್ನ ಮನೆಯ ಮುಖ್ಯ ಬೀರನ್ನು ತೆರೆದು ನೋಡಿ, ದೊಪ್ಪನೆ ನೆಲಕ್ಕೆ ಕುಸಿ ಕುಳಿತು, "ಈ ರಂಡೇಗಂಡನು ನನ್ನನ್ನು ಪೂರಾ ಸುಲಿದನಲ್ಲರೀ" ಎಂದು ಎಳೆ ಎಳೆದು ಅನ್ನುತ್ತ, ಹಣೆ-ಹಣೆ ಬಡಕೊಳ್ಳತೊಡಗಿದಳು; ಗುಂಡನ ಹೆಸರಿನಿಂದ ಬೈಗಳ ಮಳೆ ಸುರಿಸಹತ್ತಿದಳು; ಬೊಟ್ಟು ಮುರಿಯುತ್ತ ಸಾಪಳಿಸಲಾರಂಭಿಸಿದಳು; ಸಿಟ್ಟಿನ ಭರದಲ್ಲಿ ಅವಳು ತನ್ನನ್ನೂ ಅವಾಚ್ಯ ಶಬ್ದಗಳಿಂದ ಬೈದುಕೊಳ್ಳಹತ್ತಿದಳು; ಆದರೆ ಆಗಿನ ಆಕೆಯ ಸಂತಾಪಯುಕ್ತ ಚಡಪಡಿಕೆಯನ್ನು ಅಲ್ಲಿ ಕೇಳುವವರಾರಿದ್ದರು?

ಯಾಕೆ ಸರಸಕ್ಕಾ, ನಿಮ್ಮ ಸೇಡಿನ ಹವ್ಯಾಸವು ಈಗಲಾದರೂ ಪೂರೈಸಿತೇ? ಏನರೀ, ನೀವು ಸವತಿಮತ್ಸರವನ್ನು ತೀರಿಸಿಕೊಳ್ಳಬೇಕಾಗಿತ್ತಲ್ಲವೆ? ಅಂದಬಳಿಕ ಈಗ ಹೀಗೇಕೆ ಹಣೆ ಹಣೆ ಬಡಕೊಳ್ಳುತ್ತಿರುವಿರಿ? ಕಳಿಸಿರಿ, ಮತ್ತೆ ಬಳ್ಳಾರಿಗೆ ಪತ್ರಗಳನ್ನು;

ಮತ್ತು ಸೇರಿಸಿರಿ ಪಾಪ ಪಂಕಜದಲ್ಲಿ ನಿಮ್ಮ ಆ ಮುಸುಡಿಯನ್ನು; ಹಾಗು ಆ ನಿಷ್ಪಾಪ ಕುಮುದಿನಿಯ ಬಂಗಾರದಂತಹ ಸಂಸಾರದಲ್ಲಿ ಮಣ್ಣೆರಚಲಿಕ್ಕೆ ಸನ್ನದ್ಧರಾಗಿರಿ. ಎಲೈ, ಮಹಾ ಬುದ್ಧಿವಂತರಾದ ಸರಸಮ್ಮನವರೇ, ಈ ಲೋಕದಲ್ಲಿ ಜಗನ್ನಿಯಾಮಕನ ನ್ಯಾಯದ ತಕ್ಕಡಿಯೊಂದು ಚನ್ನಾಗಿರುವದರಿಂದ 'ಮಾಡಿದವನುಣ್ಣೋ ಮಣಿಯಂತಹ ಕಡಬು!' ಎಂದು ಆತನು ಆವರವರ ಕರ್ಮದ ಫಲಗಳನ್ನು ಅವರವರಿಗೇ ಕೊಟ್ಟು ಬಿಡುತ್ತಾನೆ. ನೀನು ಸವತಿಮತ್ಸರದಿಂದ ಆ ಬಡಹುಡುಗೆಯ ಸತ್ಯಾನಾಶವನ್ನು ಮಾಡಲಿಕ್ಕೆ ಪ್ರಯತ್ನಮಾಡಿದೆ. ಆಕೆಯ ಗಂಡನ ಮನೆಯವರಾದ ಮೂರ್ಖ ಭಾವ-ನೆಗೆಣ್ಣೆಯರೂ, ಬುದ್ಧಿಹೀನನಾದ ಗಂಡನೂ ಸಾರಾಸಾರ ವಿಚಾರ ಮಾಡದೆ, ಅವರೂ ಆ ಸಾಧ್ವಿಯ ಛಲನಕ್ಕೆ ಪ್ರವೃತ್ತರಾದರು; ಆದರೆ ಸತ್ಯಾಸತ್ಯತೆಯನ್ನು ಗೊತ್ತು ಮಾಡುವ ಆ ಈಶ್ವರೀ ಶಕ್ತಿಯು ಎಲ್ಲರಿಗೂ ಅವರವರ ಕರ್ಮದ ಫಲಗಳನ್ನು ಕೊಡದಿರುವದೇ? ನಿನ್ನ ಆಸುರೀ ಇಚ್ಛೆಯನ್ನು ತೃಪ್ತಿಗೊಳಿಸಿಕೊಳ್ಳುವ ಸಲುವಾಗಿ ಗುಂಡನಂತಹ ನೀಚನನ್ನು ನೀನು ಕೈಯಲ್ಲಿ ಹಿಡಿದೆ. ಅವನಿಂದ ನಿನಗೆ ತಕ್ಕ ಲಾಭವು ಆಗಿ ಹೋಗಿದೆ. ಆ ಗುಂಡನು ಇನ್ನು ನಿನ್ನ ಸಪಿಂಡಿಗೆ ಕೂಡ ಬರುವದಿಲ್ಲ. ತಿಳಿಯಿತೇ?

ಆ ಇಡೀ ರಾತ್ರಿಯನ್ನು ಸರಸಿಯು ಚಡಪಡಿಸುತ್ತ, ಧಡಪಡಿಸುತ್ತ, ಬಡಬಡಿಸುತ್ತ ಕಳೆದಳು. ಬೆಳಗಾಗುತ್ತಲೆ ಪೋಲೀಸ ಚೌಕಿಗೆ ಹೋಗಿ ಕಳವಿನ ವರದಿ ಕೊಡಬೇಕೆಂದು ಅವಳಿಗೆ ಒಮ್ಮೆ ಅನಿಸಿತು; ಮತ್ತು ಅದಕ್ಕಾಗಿ ಅವಳು ಮನೆಯಿಂದ ಹೊರಬಿದ್ದಳು ಸಹ. ಇಷ್ಟರಲ್ಲಿ ಗುಂಡನು ಆಕೆಗೆ ಈ ಮೊದಲು ತೋರಿಸಿದ ಆ ಪತ್ರಸ್ಫೋಟನದ ಬೆದರಿಕೆಯ ನೆನಪಾಗಲು, ಅವಳು ಸುಮ್ಮನೆ ಹಿಂದಿರುಗಿದಳು. ಮುಂದೇನು ಮಾಡಬೇಕೆಂಬುದು ಅವಳಿಗೆ ಹೊಳೆಯದಾಯಿತು. ಇನ್ನು ಅವಳು ವಿಜಾಪುರದಲ್ಲಿ ವಾಸಿಸುವದು ಅಶಕ್ಯವಾಯಿತು; ಅದರಿಂದ ಹೇಗಾದರೂ ಮಾಡಿ ಬಳ್ಳಾರಿಗೆ ಹೋಗುವದನ್ನು ನಿರ್ಧರಿಸಿ, ಬಳ್ಳಾರಿಯೊಳಗಿನ ತನ್ನ ಗುರ್ತು ಪರಿಚಯದವರ ಸ್ಮರಣಮಾಡಿಕೊಳ್ಳತೊಡಗಿದಳು. ಗುಂಡನು ಅಂದೇ ಬಳ್ಳಾರಿಗೆ ಹೋಗಿ, ಅಲ್ಲಿಯ ತನ್ನ ಗುರ್ತಿನ ವೇಶ್ಯೆಯಾದ ಚಂದ್ರಿಯಲ್ಲಿ ತಳವೂರಿದನು.

| | | | | |

ಕುಮುದಿನಿಯು ಕಮಲಾಕಾಂತನ ಜಾಲದೊಳಗಿಂದ ಹೊರಬಿದ್ದು ಹೋದ ಮೇಲೆ ಅವಳು ಯಾವ ಗಂಡಾಂತರಕ್ಕೊಳಗಾದಳೆಂಬದು ಕಮಲಾಕಾಂತನಿಗಾಗಲಿ ನಿರ್ಮಲೆಗಾಗಲಿ ಗೊತ್ತಿರಲಿಲ್ಲ. ನಿರ್ಮಲೆಯು ಮುಂದೆ ತುಸ ಹೊತ್ತಿನಲ್ಲಿಯೇ ಭರದಿಂದ ನರ್ಮದೆಯ ಆಟ್ಟಕ್ಕೆ ಹೋದಳು. ಆಗ ಮನೆಯಲ್ಲಿ ಯಾವ ಗಂಡಸರೂ ಇರಲಿಲ್ಲ. ನರ್ಮದೆಯೊಬ್ಬಳೇ ತನ್ನ ಕೋಣೆಯಲ್ಲಿ ಕುಳಿತಿದ್ದಳು. ಆಗ ನಿರ್ಮಲೆಯು ಒಮ್ಮೆಲೆ ಅವಳೆದುರಿಗೆ ಹೋಗಿ ಸಿಟ್ಟಿನಿಂದ:—"ನರ್ಮದಕ್ಕಾ, ನಿನ್ನ ನೆಗೆಣ್ಣೆಯು ನಮ್ಮ ಮೇಲೆ ಬಹು ದೊಡ್ಡ ಉಪಕಾರ ಮಾಡಿದಳವ್ವಾ!"

"ನಿರ್ಮಲವ್ವಾ, ಆದದ್ದಾದರೂ ಏನು? ನೀವು ಸಿಟ್ಟಿನಿಂದ ಇಷ್ಟೇಕೆ ಕೆಂಪ ಗಾಗಿರುತ್ತೀರಿ?" ಎಂದು ನರ್ಮದೆಯು ಭಯವಿಹ್ವಲಳಾಗಿ ಕೇಳಿದಳು.

"ಏನರೀ ನರ್ಮದಕ್ಕಾ, ನಾನು ನಿಮ್ಮ ಸಲುವಾಗಿ ಹಾಗು ನಿಮ್ಮ ಹಿತಕ್ಕಾಗಿ ಒಳಿತು ಮಾಡಹೋಗಲು, ನಿಮ್ಮ ನೆಗೆಣ್ಣಿಯು ನನಗೆ ಚೆನ್ನಾಗಿ ಕೈತೋರಿಸಿದಳಲ್ಲ!"

"ಮತ್ತೇನು ಮಾಡಿದಳ್ರೆವ್ವಾ ಆ ಸಾಡೇಸಾತಿಯು?"

"ನರ್ಮದಕ್ಕಾ, ನಮ್ಮ ಸಾಧುಗಳೆಂದರೆ ಎಂಥ ಪವಿತ್ರ ಪುರುಷರು! ಎಂಥ ಸಚ್ಛೀಲ ಮಹಾತ್ಮರು? ಅವರು ಕೇವಲ ನಮ್ಮ ಪಾಪಗಳ ಉದ್ಧಾರಕ್ಕಾಗಿಯೇ ನಮ್ಮಂತಹ ಹೆಂಗಸರ ನೆಳಲು ಕೆಡವಿಸಿಕೊಳ್ಳುವರು. ಇಲ್ಲದಿದ್ದರೆ ಅವರು ಕೇವಲ ಬಾಲಬ್ರಹ್ಮಚಾರಿಗಳು. ಅಂಥವರು ನಮ್ಮಂತಹರನ್ನೇಕೆ ತಮ್ಮ ಹತ್ತರ ಬರ ಗೊಡುವರು? ನಾನು ನಿಮ್ಮ ಕುಮುದಿನಿಯು ಅಡ್ಡ ಮಾರ್ಗವನ್ನು ತಿದ್ದಬೇಕೆಂದು ಕೇವಲ ನಿಮಗಾಗಿ, ನಿಮ್ಮ ಕೊರಳಾಣೆಯಾಗಿಯೂ ಹೇಳುತ್ತೇನೆ; ಸುಳ್ಳು ಹೇಳು ತ್ತಿದ್ದರೆ ನನ್ನ ನಾಲಿಗೆಯೇ ಉದುರಿ ಬೀಳಲಿ..........."

ನಿರ್ಮಲಕ್ಕಾ, ನಿಮ್ಮಂಥವರು ಆಣೆ ತಕ್ಕೊಳ್ಳಬೇಕೆ? ನನ್ನ ಮೇಲೆ ನಿಮ್ಮ ಪ್ರೇಮ-ವಿಶ್ವಾಸಗಳೆಷ್ಟಿರುವವೆಂಬದನ್ನು ನಾನರಿಯೆನೆ?" ಎಂದು ನರ್ಮದೆಯು ನಡುವೇ ಹೇಳಲು,

"ಏನರೀ ನರ್ಮದಕ್ಕಾ, ನಿಮ್ಮ ಕುಮುದಿನಿಗೆ ನಮ್ಮ ಸಾಧುಗಳ ಆಶ್ರಮ ವೆಂದರೆ, ಅವಳ ವಿಜಾಪುರವೆಂದು ತಿಳಿಯಿತೋ ಅಥವಾ ಅವಳ............ರ ಪ್ರೇಮ ಗೃಹವೆಂದು ತಿಳಿಯಿತೋ ಆದಾರು ಬಲ್ಲರು? ಛೇ-ಛೀ! ಆ ಮುಂದಿನ ಶಬ್ದಗಳನ್ನು ನಾನು ಉಚ್ಚರಿಸಲೂ ಬಾರದು; ನೀವು ಕೇಳಲೂ ಬಾರದು ಇಂಥದೇ ಪ್ರಕ ರಣವು ಅಲ್ಲಿ ಘಟಿಸಿತು ಅವಳು ಆ ಬಾಲಬ್ರಹ್ಮಚಾರಿಗಳೆದುರಿಗೆ ಮಾಡಬಾರದ ಅಂಗಚೇಷ್ಟೆಗಳನ್ನು ಮಾಡಹತ್ತಿದಳು. ನರ್ಮದಕ್ಕಾ, ನಾನು ಹುಟ್ಟಾ ಹೆಂಗಸು. ಸಾಧುಗಳ ಬಳಿಯಲ್ಲಿ ನಿಂತಾಗ ನನಗೂ ಕೂಡ ಅವಳ ಆ ಕೃತಿಯಿಂದ ನಾಚಿಕೆ-ಅಂಜಿಕೆಗಳುಂಟಾದವು. ಸಾಧುಗಳಂತೂ ನನ್ನ ಮೇಲೆ ಇಂತಿಂಥ ಕಣ್ಣಿನಿಂದ ಕೆಕ್ಕ ರಿಸಿ ನೋಡಹತ್ತಿದರು. ಅದರಿಂದ ಇನ್ನು ಆ ಜಮದಗ್ನಿಯು ನನ್ನನ್ನು ಸುಟ್ಟು ಸೂರೆಗೊಳ್ಳುವನೆಂದೇ ನಾನು ತಿಳಿದೆನು. ಆಗ ನಾನು ನಿಮ್ಮ ಕುಮುದಿನಿಯನ್ನು ಕುರಿತು:—'ಕುಮುದಿನೀ, ನೀನಿದೇನನ್ನು ಮಾಡುತ್ತಿರುವೆ? ಸಾಧುಗಳು ನಿನಗೆ ತಂದೆಯ ಸಮಾನರು, ದೇವರಂತಹರು, ಪೂಜ್ಯ ಗುರುಗಳು; ಆದರೆ ನೀನು?' ಎಂಬ ಅಕ್ಷರಗಳು ನನ್ನ ಬಾಯಿಂದ ಹೊರಹೊರಡುವಷ್ಟರಲ್ಲಿಯೇ ಅವಳು ಸಮೀಪದಲ್ಲಿದ್ದ ಸಾಣೆಯ ಕಲ್ಲನ್ನು ಎತ್ತಿಕೊಂಡು ನನ್ನ ಮೇಲೆ ಬೀಸಿ ಒಗೆದಳಲ್ಲರೀs!"

"ನಿರ್ಮಲಕ್ಕಾ, ನೀವು ಅನ್ನುವುದಾದರೂ ಏನು?" ನರ್ಮದೆಯು ಆಕಾಂತ ಮಾಡುತ್ತ ಕೇಳಿದಳು.

"ನರ್ಮದಕ್ಕಾ, ಆ ಸಾಣೆಯ ಕಲ್ಲು ನನ್ನ ಹಣೆಗೆ ಬಡೆದು, ನನ್ನ ಕಪಾಳ

ಮೋಕ್ಷವಾಗಿದ್ದರೆ, ನಾನು ಇಷ್ಟು ಅಂಜುತ್ತಿರಲಿಲ್ಲರೀ; ಆದರೆ ಅದು ನಮ್ಮ ಸಾಧುಗಳ ಮೂಗಿಗೆ ಚೆನ್ನಾಗಿ ಬಡಿಯಿತು; ಮತ್ತು ಆದರಿಂದ ಅವರ ಮೂಗು ಬಿಚ್ಚಿ ರಕ್ತ ಬಂಬಾಳರಾದರು! ದೇವರೇ, ಈ ಚಂಡಾಲಿನಿಯ ಕೈಯಿಂದ ಇದೆಂಥ ಘೋರ ಪಾತಕ ಘಟಿಸಿತಲ್ಲವ್ವಾ! ಆ ನಿಮ್ಮ ಸಾಡೇಸಾತಿಯನ್ನು ಶುದ್ಧಿಗೊಳಿಸಲಿಕ್ಕೆಂದು ಅಲ್ಲಿಗೆ ಕರೆದೊಯ್ಯುವ ದುರ್ಬುದ್ಧಿಯು ನನಗೇಕುಂಟಾಗಿದ್ದೀತವ್ವಾ? ನರ್ಮದಕ್ಕಾ, ನಾನಿನ್ನೇನು ಮಾಡಲ್ರೀ? ಪ್ರತ್ಯಕ್ಷ ನಾನೇ ನಮ್ಮ ಗುರುಗಳ ದುರ್ದೆಸೆಗೆ ಹೀಗೆ ಹೇಗೆ ಪಾತ್ರಳಾದೆನವ್ವಾ! ನನ್ನೀ ಪಾತಕದ ಪರಿಮಾರ್ಜನವು ಹೇಗಾದೀತ್ರೆವ್ವಾ?"

ಹೀಗೆಂದು ನಿರ್ಮಲೆಯು ಒಳ್ಳೇ ಹಗಣದ ಫಾರ್ಸ್ ಮಾಡಲು, ನರ್ಮದೆಯು ಆ ಪಾಪದ ಅಂಜಿಕೆಯಿಂದ ಥರಥರನೆ ನಡುಗಹತ್ತಿದಳು; ಮತ್ತು ಕುಮುದಿನಿಯನ್ನು ಕುರಿತು ಬೈದು, ಅಂದು, ಶಾಪಳಿಸತೊಡಗಿದಳು. ಕೆಲ ಹೊತ್ತಿನ ಮೇಲೆ ನರ್ಮದೆಯು ಅಂಜುತ್ತಂಜುತ್ತ:—"ನಿರ್ಮಲವ್ವನವರೇ, ಹಾಗಾದರೆ ಗುರುಗಳು ನಮ್ಮ ಮೇಲೆಯೂ ಕ್ರೋಧಗೊಂಡಿರಬಹುದು!"

"ಅವರು ದಯೆಯ ಮಹಾಮೇರುಗಳಾಗಿರುವರು! ಅವರು ಇಂಥ ಎಲ್ಲ ತಪ್ಪು-ತಡೆಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳತಕ್ಕವರೇ; ಆದರೆ ನಡೆದ ಸಂಗತಿಯು ಮಾತ್ರ ವಿಹಿತವಾಗಲಿಲ್ಲ. ಅವರು ನಾಳೆಯ ದಿನ ನನ್ನನ್ನು ತಮ್ಮ ಮಠದಿಂದ ಹೊರಗೆ ಹಾಕಿಸದಿದ್ದರೆ ಗೆದ್ದೆನೆನ್ನಬೇಕು."

"ಆ ಸೆಟವಿಗೆ ಏನು ಮಾಡಬೇಕರೆವ್ವಾ! ಇನ್ನು ಸಾಧುಗಳೆದುರಿಗೆ ಹೋಗಲಿಕ್ಕೆ ನಮಗೆ ಮೋರೆಯೇ ಉಳಿಯಲಿಲ್ಲವಲ್ಲ!" ನರ್ಮದೆಯು ತೀರ ಖಿನ್ನತೆಯಿಂದ ನುಡಿಯಲು,

"ನರ್ಮದಕ್ಕಾ, ಇದರಲ್ಲಿ ನಿಮ್ಮಗಳ ತಪ್ಪೇನು? ನೀವುಗಳೇನು ಕಳವು ಮಾಡಿರುವಿರಾ? ಅಥವಾ ಮತ್ತೇನು ಮಾಡಿರುವಿರೆಂದು ಬರಲಿಕ್ಕೆ ಅಂಜುವದು?"

"ನಿರ್ಮಲವ್ವಾ, ನೀವು ಇದೇನು ವಿಪರೀತನಾಡುವಿರಿ? ನಿರ್ಮಲವ್ವಾ, ಮಂದಿಯ ದೃಷ್ಟಿಯಿಂದಲಾದರೂ ನಾನು ಆಕೆಯ ಹಿರಿಯ ನೆಗೆಣ್ಣಿಯಲ್ಲವೆ? ಆ ಸೆಟವಿಯು ಏನು ಮಾಡಿದರೂ, ಅದನ್ನು ನಿಸ್ತರಿಸಿಕೊಳ್ಳುವ ಕೆಲಸವು ನಮ್ಮ ಪಾಲಿನದಾಗಿಲ್ಲವೇನು? ಸಾಧುಗಳು ಎಷ್ಟು ಮೃದು ಮನಸ್ಸಿನವರಿದ್ದರೂ, ಅವಳ ಇಷ್ಟು ದೊಡ್ಡ ಅಪರಾಧವು ಅವರಿಗೆ ಹೇಗೆ ಸಹನವಾಗಬೇಕು? ಇನ್ನು ನಾವು ಈ ಸಾಡೇಸಾತಿಗೇನು ಮಾಡಬೇಕರೆವ್ವಾ! ಇವಳು ನಮ್ಮನ್ನು ಲೋಕದವರೆದುರಿಗೆ ಮೋರೆ ತೋರಿಸದೆ ಹಾಗೆ ಮಾಡಿಬಿಟ್ಟಿರುವಳು!"

"ನೀವನ್ನುವದಂತೂ ನಿಜವೆ. ಸಾಧುಗಳ ಎದುರಿಗೆ ಹೋಗಲಿಕ್ಕೆ ನನಗೂ ಹೇಗೆ ಹೇಗೋ ಆಗಹತ್ತಿದೆ. ಅವರು ಎಲ್ಲಿಯುವರೆಗೆ ಸುಮ್ಮನಿರುವರೋ, ಅಲ್ಲಿಯುವರೆಗೇ ವಿಹಿತವು; ಇಲ್ಲದಿದ್ದರೆ ಅವರು ನಮ್ಮಗಳನ್ನು ಸುಟ್ಟು ಭಸ್ಮ ಸಹ ಮಾಡಿಬಿಟ್ಟಾರು!"

"ನಿರ್ಮಲಮ್ಮಾ, ನಾನು ನಿಮ್ಮ ಕಾಲಿಗೆ ಬೀಳುತ್ತೇನೆ. ಸಾಧುಗಳು ನಮ್ಮ ಮೇಲೆ ರೋಷಗೊಳ್ಳದಂತಹ ಯಾವದೊಂದು ಖಾತ್ರಿಯ ಉಪಾಯವನ್ನು ಹುಡು ಕಿರಿ. ಆ ಬಗ್ಗೆ ನಾನು ನಿಮಗೆ ಆಜನ್ಮ ಉಪಕೃತಳಾಗುತ್ತೇನೆ." ಎಂದು ನರ್ಮ ದೆಯು ದೀನ ಮುದ್ರೆಯಿಂದ ಪ್ರಶ್ನೆ ಮಾಡಲು,

"ಇಶ್ಯ! ಇದಕ್ಕಾಗಿ ನನ್ನ ಕಾಲುಗಳನ್ನೇಕೆ ಹಿಡಿಯುವಿರಿ? ಮತ್ತು ನನ್ನ ಉಪಕಾರವೇನು? ನೀವು ನನಗೇನು ಪರಕೀಯರೇ? ನರ್ಮದಕ್ಕನೆಂದರೆ, ನನ್ನ ಒಡ ಹುಟ್ಟಿದ ಭಗಿನಿಯು! ಅವಳಿಗಾಗಿ ನಾನು ತುಸ ಕಷ್ಟವಹಿಸಿದರೆ ನನಗೇನು ದುಃಖ ವಾಗುವದು?" ಎಂದು ನಿರ್ಮಲೆಯು ಅಳ್ಳಳ್ಳಿ-ಬಳ್ಳಳ್ಳಿಯಿಂದ ನುಡಿದಳು.

"ನಿರ್ಮಲಕ್ಕಾ, ನೀವು ಏನು ಬೇಕಾದರೂ ಮಾಡಿರಿ; ಆದರೆ ನಮ್ಮ ಮೇಲಿನ ಸಾಧುಗಳ ಸಂತಾಪವನ್ನಷ್ಟು ಶಾಂತಗೊಳಿಸಿರಿ."

"ನರ್ಮದಕ್ಕಾ, ಎಂಥ ಮುತ್ತಿನಂತಹ ಸಮಯ ಪ್ರಾಪ್ತವಾಗಿತ್ತಲ್ಲ! ನಿಮ್ಮ ಸಲು ವಾಗಿ ಗುರುಗಳು ಎಂಟು ದಿನಗಳಿಂದಲೂ ಸಮಾಧಿ ಏರಿಸುತ್ತಿದ್ದರು. ಆಗ ನಾನು ಅವ ರಿಗೆ ಸಹಜವಾಗಿ, "ಮಹಾರಾಜರೆ, ನಮ್ಮ ನರ್ಮದಕ್ಕನ ಪುತ್ರಕಾಮನೆಯನ್ನೆಂದು ಪೂರೈಸುವಿರಿ?" ಎಂದು ಕೇಳಿದೆನು. ಅದಕ್ಕೆ ಅವರು ವಿಷಣ್ಣವದನದಿಂದ:—"ನಿರ್ಮ ಲಮ್ಮಾ, ನಾವು ತೀರ ಬ್ರಹ್ಮಾಂಡದ ವರೆಗೂ ಸಮಾಧಿ ಹಚ್ಚಿ ನೋಡಿದೆವು; ಆದರೆ ನರ್ಮದಾಬಾಯಿಯ ವಿಧಿಲಿಖಿತದಲ್ಲಿ ಪುತ್ರಯೋಗವೇ ಇಲ್ಲ. ಅದಕ್ಕೆ ನಾವೇನು ಮಾಡೋಣ?"ಎಂದು ಹೇಳಲು, ಅವರ ಆ ವಚನಗಳನ್ನು ಕೇಳಿ ನನ್ನ ಎದೆಯೊಡೆದು ನೀರಾಯಿತು! ಕಣ್ಣುಗಳಿಂದ ಅಶ್ರುಗಳ ನದಗಳೇ ಹರಿಯತೊಡಗಿದವು! ಆಗ ನಾನು ಸಣ್ಣಮೋರೆ ಮಾಡಿ:—"ಮಹಾರಾಜರೇ, ಈ ನಿರ್ಮಲೆಯು ಇಂದಿನ ವರೆಗೆ ತಮ್ಮ ಸೇವೆಯನ್ನು ಕೇವಲ ಮನೋಭಾವದಿಂದಲೇ ಮಾಡಿದ್ದಾದರೆ, ತಾವು ನನ ಗಾಗಿಯಾದರೂ ಆ ನಮ್ಮ ನರ್ಮದಕ್ಕನ ಮೇಲೆ ದಯೆದೋರಿರಿ. ಆ ಬಡವೆಯು ಅತಿ ಭಕ್ತಿಯಿಂದಲೂ ಆಶೆಯಿಂದಲೂ ನಿಮ್ಮ ಚರಣಸನ್ನಿಧಿಗೆ ಬರುತ್ತಿರುತ್ತಾಳೆ. ಅವಳಿಗೀ ಸಂಗತಿ ತಿಳಿದರೆ, ಅವಳು ಕುಳಿತಲ್ಲಿಯೇ ಪ್ರಾಣಬಿಟ್ಟಾಳು!" ಎಂದೆನಲು, ಮಹಾರಾಜರು ಕ್ಷಣಕಾಲ ಯೋಚಿಸಿ:-"ನಿರ್ಮಲಮ್ಮಾ, ಆದರೆ ದೈವಘಟನೆಯನ್ನು ನಾನೆಂತು ಹೆಚ್ಚು ಕಡಿಮೆ ಮಾಡಲಿ?" ಎಂದರು. ಅದಕ್ಕೆ ನಾನು: —"ನಾನು ಅದನ್ನೇನೂ ತಿಳಿದವಳಲ್ಲ. ತಮಗೆ ಭಕ್ತರ ಅಭಿಮಾನವಿದ್ದರೆ ಮಾತ್ರ ನಮ್ಮ ನರ್ಮದಕ್ಕನಿಗೆ ಪುತ್ರಲಾಭವು ಆಗಲೇಬೇಕು. ಸಾಧುಮಹಾರಾಜರೆ, ಗೋಕುಲ ದೊಳಗಿನ ಗೋಪಿಗಳಿಗೆ ಕೃಷ್ಣನು ಹೇಗೆ ಬೆಂಗಾವಲಾಗಿದ್ದನೋ, ಹಾಗೆ ನೀವು ನಮಗೆಲ್ಲರಿಗೂ ಬೆಂಗಾವಲಾಗಿರುತ್ತೀರಿ." ಆಯಿತು. ನನ್ನ ಈ ಮಾತ್ರೆಯು ಚೆನ್ನಾಗಿ ಕೆಲಸ ಕೊಟ್ಟಿತು. ಆಗ ಗುರುಮಹಾರಾಜರು ನನ್ನ ಕಡೆಗೆ ನೋಡುತ್ತ ನಕ್ಕು: "ನಿರ್ಮಲಮ್ಮಾ, ನೀವು ಆ ನರ್ಮದಾಬಾಯಿಯ ಬಗ್ಗೆ ಇಷ್ಟೇಕೆ ಹಟ ಹಿಡಿಯು ವಿರಿ?" ಎಂದು ಕೇಳಲು, "ಮಹಾರಾಜರೆ, ನನಗೂ ಅವಳಿಗೂ ಅಂಥ ನಿಕಟ

ಸಂಬಂಧವೇ ಇರುತ್ತದೆ.” ಎಂದು ಹರಟೆ ಹಚ್ಚಿ, ಅದರ ಪರಿಣಾಮವು ನರ್ಮದೆಯ ಮೇಲೆ ಎಷ್ಟರಮಟ್ಟಿಗಾಯಿತೆಂಬದನ್ನು ತಿಳಿಯುವ ಸಲುವಾಗಿ ನಿರ್ಮಲೆಯು ನರ್ಮದೆಯ ಕಡೆಗೆ ನೋಡುತ್ತ ಆಕೆಯ ಅಂತಃಕರಣದ ನೆಲೆ ನೋಡತೊಡಗಿದಳು.

ಆಗ ನರ್ಮದೆಯು ಒಳ್ಳೇ ತವಕದಿಂದ:—“ನಿರ್ಮಲಮ್ಮಾ, ಬಳಿಕ ಮಹಾರಾಜರೇನು ಹೇಳಿದರು?”

“ಅವರೇನು ಹೇಳುವರು? ಭಕ್ತರ ಶುದ್ಧ ಭಾವನೆಗೆ ಅದಾವ ದೇವರು ಮೆಚ್ಚಲಾರನು? ಇಂದೇ ಅವರು ನಿಮ್ಮ ಉಡಿಯಲ್ಲಿ ತೆಂಗಿನಕಾಯಿಯನ್ನು ಹಾಕಿ, ನಿಮಗೆ ಫಲಾಶೀರ್ವಾದ ಕೊಡತಕ್ಕವರಿದ್ದರು; ಆದರೆ ಅಷ್ಟರಲ್ಲಿ ನಿಮ್ಮ ನೆಘೆಣ್ಣಿಯು ಈ ಬಗೆಯಾಗಿ ತನ್ನ ಗುಣಪ್ರದರ್ಶನಗೊಳಿಸಿದಳು!”

“ಬೆಂಕೀ ಹಚ್ಚಲಿ, ಆ ಮುಂಡೆಯ ಮುಸುಡಿಗೆ!” ನರ್ಮದೆಯು ಒಳ್ಳೇ ಸಂತಾಪದಿಂದ ಅನ್ನುತ್ತಾಳೆ:—“ಎಲ್ಲಿಯ ಈ ಸೆಟವಿಯು ನನ್ನ ಸಂತ್ರ ಕೈತೊಳಕೊಂಡು ಬೆನ್ನು ಹತ್ತಿರುವಳೋ ಅದಾರು ಬಲ್ಲರು? ನಿರ್ಮಲಮ್ಮಾ, ಹಾಗಾದರೆ ಗುರುಗಳು ಇನ್ನು ನನ್ನ ಮೇಲೆ ಅನುಗ್ರಹ ಮಾಡಲಾರರಷ್ಟೇ?”

“ನರ್ಮದಕ್ಕಾ, ಅದಕ್ಕಿನ್ನು ತುಸ ಹಂಚಿಕೆ ಮಾಡಬೇಕು; ಆದರೆ ಅದು ನಿಮಗೆ ಸಮ್ಮತವಾದರೆ ವಿಹಿತವು; ಇಲ್ಲದಿದ್ದರೆ ಧರ್ಮ ಮಾಡ ಹೋದವಂಗೆ ಕರ್ಮ ಬೆನ್ನ ಹತ್ತಿದಂತಾದೀತು. ಆದರಿಂದ ನೀವು ನನ್ನ ವಿಷಯದಲ್ಲಿಯೇ ಇಲ್ಲದ ಸಂಶಯ ವಹಿಸಿಗಿಹಿಸೀರಿ.”

“ನಿರ್ಮಲಮ್ಮಾ, ನಿಮ್ಮ ಬಗ್ಗೆ ನಾನು ಸಂಶಯಗೊಳ್ಳುವನೆಂಬದು ಸಂಭವವಾದರೂ ಇದೆಯೇ? ನೀವು ಇದೆಂಥ ವಿಪರೀತ ಕಲ್ಪನೆಯನ್ನು ಮಾಡಿಕೊಳ್ಳುತ್ತಿರುವಿರಿ? ನೀವು ಹೇಳಿದ್ದನ್ನು ಮಾಡುವೆನು; ಆದರೆ ಹೇಗಾದರೊಮ್ಮೆ ಗುರುಮಹಾರಾಜರಿಂದ ನನ್ನ ಉಡಿಯಲ್ಲಿ ಫಲವನ್ನು ಹಾಕಿಸಿರಿ.”

“ನರ್ಮದಕ್ಕಾ, ಮಹಾರಾಜರೆದುರಿಗೆ ಕಣ್ಣುಮುಚ್ಚಿನಾಟವಾಡುವದಂತೂ ಘೋರ ಪಾತಕವೆ; ಆದರೂ ನಾನು ಅದನ್ನು ನಿಮಗೋಸುಗ ನನ್ನ ತಲೆಯ ಮೇಲೆ ಹೋರುತ್ತೇನೆ” ಎಂದು ನಿರ್ಮಲೆಯು ಅನುಮಾನ-ಅನುಮಾನದಿಂದ ಹೇಳಹತ್ತಿದಳು: “ನರ್ಮದಕ್ಕಾ, ನಿಮ್ಮ ನಂಬಿಗೆಯು ನನ್ನಲ್ಲಿ ದೃಢವಾಗಿದ್ದರೆ ಮಾತ್ರ ನಿಮ್ಮ ಅಲಂಕಾರಗಳ ಡಬ್ಬಿಯನ್ನು ನನ್ನ ಕೈಯಲ್ಲಿ ಕೊಡಿರಿ. ನಾನು ಅದನ್ನು ತಕ್ಕೊಂಡು ಹೋಗಿ ಗುರುಮಹಾರಾಜರ ಎದುರಿನಲ್ಲಿ ಮುಡುಪಾಗಿಟ್ಟು, ‘ಮಹಾರಾಜರೆ, ಕುಮು ದಿನಿಯು ತಮ್ಮ ಬಳಿಯಲ್ಲಿ ಅಪರಾಧ ಮಾಡಿದ್ದಕ್ಕಾಗಿ ನರ್ಮದಕ್ಕನಿಗೆ ಬಹು ಲಾಂಛನವೆನಿಸಿದೆ. ಆ ಘೋರ ಅಪರಾಧದ ಪ್ರಾಯಶ್ಚಿತ್ತ ಪಡೆಯುವದಕ್ಕೆಂದು ನರ್ಮದಕ್ಕನು ತನ್ನ ಪ್ರಾಣವನ್ನೇ ನೀಗಿಕೊಳ್ಳಬೇಕೆನ್ನುತ್ತಾಳೆ. ಆದರಿಂದ ಅವಳು ತನ್ನ ಈ ಆಭರಣಗಳನ್ನು ಗುರುಚರಣಕ್ಕೆ ಕಳಿಸಿರುವಳು. ಇವುಗಳು ಧರ್ಮ ಕೃತ್ಯಕ್ಕಾಗಿ ವಿನಿಯೋಗಿಸಲ್ಪಡಬೇಕು; ಹಾಗು ತನಗೆ ಕ್ಷಮೆಯು ದೊರೆಯಬೇಕು.

ಎಂದು ಪ್ರಾರ್ಥಿಸಿ, ಅವಳು ಮನಸಾ ತಮ್ಮ ಚರಣಗಳ ಮೇಲೆ ಮಸ್ತಕವನ್ನಿರಿಸಿರುತ್ತಾಳೆ' ಎಂದು ಉಪ್ಪು-ಕಾರ ಹಚ್ಚಿ ನಾನು ಗುರುಗಳಿಗೆ ಹೇಳಿ, ಖಂಡಿತವಾಗಿಯೂ ಅವರ ದಯಾರ್ದ್ರ ಅಂತಃಕರಣವು ಕರಗುವಂತೆ ಮಾಡುವೆನು. ಅದರಿಂದ ಅವರು ನಿನ್ನನ್ನು ತಮ್ಮೆಡೆಗೆ ಕರತರಲಿಕ್ಕೆ ನನಗೆ ಆಜ್ಞೆ ಮಾಡಬಹುದಾಗಿದೆ.''

"ಹೀಗೆಯೋ? ಇದರಿಂದ ಗುರುಗಳು ಮತ್ತೆ ನಮ್ಮ ಮೇಲೆ ಕೃಪೆಮಾಡುವರೆ?'' ನರ್ಮದೆಯು ಉತ್ಸುಕತೆಯಿಂದ ಕೇಳಲು,

"ಹಾಗಿಲ್ಲದಿದ್ದರೆ ಅವರಿಗೆ ಸುಮ್ಮನೆ ಸಿದ್ಧಪುರುಷರೆನ್ನಬೇಕೆ? ಅವರು ಎಷ್ಟು ಸಿಟ್ಟಿನವರೋ, ಅಷ್ಟೇ ಮೃದುಸ್ವಭಾವದವರು. ಭಕ್ತರು ಕರುಣೆಯಿಂದ ಪ್ರಾರ್ಥಿಸಿದ ಕೂಡಲೆ ಸುದರ್ಶನ ಚಕ್ರದಂತೆ ಅವರು ಭಕ್ತರ ಇಷ್ಟಾರ್ಥ ಪೂರೈಸಲಿಕ್ಕೆ ಧಾವಿಸಿಯೇ ಬರುವರು."

ನರ್ಮದೆ:—"ಹಾಗಾದರೆ ನಿರ್ಮಲಮ್ಮಾ, ನೀವು ಇನ್ನು ನನ್ನ ಎಲ್ಲ ಆಭರಣಗಳನ್ನು ಕೊಂಡೊಯ್ಯುವಿರಷ್ಟೇ?''

"ನೀವೇ ತೆಗೆದುಕೊಂಡು ಬನ್ನಿರಿ.''

"ಒಲ್ಲೆನವ್ವಾ-ಒಲ್ಲೆ. ನನಗಲ್ಲಿಗೆ ಬರಲಿಕ್ಕೆ ಧೈರ್ಯವಾಗುವದಿಲ್ಲ. ಪುನಃ ಗುರುಗಳು ಪ್ರಸನ್ನರಾಗಿರುವರೆಂದು ನಿಮ್ಮ ಬಾಯಿಂದ ಕೇಳದ ಹೊರತು, ಅಲ್ಲಿಗೆ ಬರಲು ನನಗೆ ಧೈರ್ಯ ಸಾಲದು.''

"ಹೀಗೆನ್ನುವಿರಾ?—" ಎಂದು ಎಳೆದು ಅಂದು, ನಿರ್ಮಲೆಯು ಮುರುಕ ಮಾಡುತ್ತ:—"ಒಳ್ಳೇದು; ಹಾಗಾದರೆ ಬೇಗನೆ ತನ್ನಿರಿ. ನಮ್ಮ ನರ್ಮದಕ್ಕನ ಸಲುವಾಗಿ ನಾನು ಏನು ಬೇಕಾದರೂ ಮಾಡಬೇಕಾಗಿದೆ.''

ಆಯಿತು ನಿರ್ಮಲೆಯ ಹಂಚಿಕೆಯು ಸಂಪೂರ್ಣವಾಗಿ ಫಲಕಾರಿಯಾಯಿತು. ನರ್ಮದೆಯು ಅವಸರವಸರದಿಂದ ಎದ್ದು ತನ್ನವಾಗಿದ್ದ ಸುಮಾರು ಹತ್ತು ಸಾವಿರ ವರೆಗಿನ ಬೆಲೆಯ ಆಭರಣಗಳನ್ನು ಒಂದು ದೊಡ್ಡ ಹಿತ್ತಾಳಿಯ ಕರಂಡಕದಲ್ಲಿ ಹಾಕಿ, ಅದನ್ನು ನಿರ್ಮಲೆಯು ಎದುರಿಗೆ ತಂದಿಟ್ಟು:—"ಇಕ್ಕೊಳ್ಳಿರಿ, ನಿರ್ಮಲಮ್ಮನವರೇ; ಆದರೆ ಗುರುಮಹಾರಾಜರ ಕೋಪವು ಬೇಗನೆ ಶಾಂತವಾಗುವಂತೆ ಮಾತ್ರ ಪ್ರಯತ್ನ ಮಾಡಿರಿ.''

ನಿರ್ಮಲೆಯು ಆ ಕರಂಡಕವನ್ನು ತನ್ನ ಸೀರೆಯ ಸೆರಗಿನ ಕೆಳಗಡೆಗೆ ಮುಚ್ಚಿಕೊಳ್ಳುತ್ತ:—"ನರ್ಮದಕ್ಕಾ, ಈ ಒಡವೆಗಳ ಸುದ್ದಿಯನ್ನು ಮನೆಯವರ ಕಿವಿಗೆ ಮುಟ್ಟಗೊಡಬೇಡಿರಿ. ಈ ಮುಡುಪಿನ ಗುಟ್ಟು ನನ್ನ-ನಿಮ್ಮಲ್ಲಿಯೇ ಇರಲಿ. ನಮ್ಮ ಗುರುಗಳಿಗೆ ಈ ಒಡವೆಗಳಿಂದೇನಾಗಬೇಕಾಗಿದೆ? ಗುರುಗಳ ಕ್ರೋಧವು ಶಾಂತವಾಗಲಿಕ್ಕೆಂದು ನಾವುಗಳು ಇದೊಂದು ತಂತ್ರವನ್ನು ಮಾಡಿರುತ್ತೇವಷ್ಟೇ. ಗುರುಗಳು ಪ್ರಸನ್ನರಾದ ಬಳಿಕ ಅವರು ಇವುಗಳಲ್ಲಿ ಇನ್ನೂ ಕೆಲವು ಒಡವೆಗಳನ್ನು ತಮ್ಮ ಪ್ರಸಾದರೂಪದ ನೆನಪೆಂದು ಇರಿಸಿ, ಇವುಗಳೆಲ್ಲವನ್ನೂ ನಿಮಗೆ ತಿರುಗಿ ಕೊಟ್ಟಾರು.''

"ಅವರಿಗೇನು ಆರೆಯಾಗಿದೆ? ಇಡೀ ತ್ರೈಲೋಕ್ಯದ ಭಂಡಾರವೇ ಅವರ ಚರಣಗಳ ಬಳಿಯಲ್ಲಿ ಉರುಳಾಡುತ್ತಿದೆ." ಎಂದು ನರ್ಮದೆಯು ಹೇಳಿದಳು.

"ಒಳ್ಳೇದು. ನಾನಿನ್ನು ಹೊರಡುವೆನು; ಆದರೆ ನಿಮ್ಮ ಕುಮುದಿನಿಯೆಲ್ಲಿ?"

"ಏನೋ, ನಾನವಳನ್ನು ನೋಡಿಲ್ಲ"

"ಅವಳನ್ನೊಳ್ಳೇ ಹಿಡಿತದಲ್ಲಿ ಹಿಡಿಯಿರಿ." ಎಂದೆಂದು ನಿರ್ಮಲೆಯು ಧೃತಗತಿಯಿಂದ ಆ ಆಭರಣಗಳ ಕರಂಡಕದೊಡನೆ ನರ್ಮದೆಯು ಮನೆಯಿಂದ ಪಲಾಯನ ಹೇಳಿಸಿದಳು.

---

## ಪೂರ್ವ-ಪಶ್ಚಿಮಗಳ ಅಂತರ.

೨೦ನೆ 'ಪಿಶಾಚಿನೃತ್ಯ' ಪ್ರಕರ್ಣದಲ್ಲಿ ಹೇಳಿದಂತೆ ಕುಮುದಿನಿಯು ಜೀವದ ಗೆಳತಿಯಾದ ಕಮಲೆಯು ಸೀಮೊಗೆ ಹೋಗಿ ಎಷ್ಟೋ ದಿನಗಳಾಗಿದ್ದವು. ಅಲ್ಲಿ ಅವಳ ಅಭ್ಯಾಸವು ಬಹು ಚೆನ್ನಾಗಿ ನಡೆದಿತ್ತು. ಅತ್ತ ಕಡೆಯು ಹವೆಯು ಮೂಲಕ ಆಕೆಯು ಪ್ರಕೃತಿಯು ಒಳ್ಳೇ ಸದೃಢವಾಗಿ ತೋರಹತ್ತಿತ್ತು. ಆಕೆಯು ಸೀಮೊಗೆ ತಲುಪಿದ ಬಳಿಕ ಅವಳಿಗೆ ಕುಮುದಿನಿಯಿಂದ ಎರಡೇ ಪತ್ರಗಳು ಬಂದಿದ್ದವು. ತದನಂತರ ಅವಳಿಗೆ ಇವಳಿಂದ ಒಂದೂ ಪತ್ರ ಹೋಗಿರಲಿಲ್ಲ. ಕಮಲೆಯು ಒಂದರಹಿಂದೊಂದರಂತೆ ನಾಲ್ಕೈದು ಪತ್ರಗಳನ್ನು ಕಳಿಸಿದರೂ ಒಂದಕ್ಕೂ ಇವಳಿಂದ ಉತ್ತರ ದೊರೆಯಲಿಲ್ಲ. ಆದರಿಂದ ಕಮಲೆಯು ಮನಸ್ಸಿಗೆ ಬಹು ಚಡಪಡಿಕೆಯಾಗಿತ್ತು. ಕುಮುದಿನಿಯು ನೆಘಣ್ಣಿಯಾದ ನರ್ಮದಾಬಾಯಿಯು ಕಟುಸ್ವಭಾವದ ಪರಿಚಯವು ಕಮಲೆಗೆ ಬಹು ಚೆನ್ನಾಗಿ ಇದ್ದುದರಿಂದಲೂ, ಕುಮುದಿನಿಯು ಅತ್ಯಂತ ಸಹನಶೀಲ ವರ್ತನದ ಖಾತ್ರಿಯು ಚೆನ್ನಾಗಿ ಇದ್ದುದರಿಂದಲೂ ನೆಘಣ್ಣಿಯು ಎಷ್ಟು ಪೀಡಿಸಿ-ಕಾಡಿಸಿದರೂ ಅಥವಾ ಬೈದು-ಅಂದು ಛಲನ ಮಾಡಿದರೂ ಆ ಬಗ್ಗೆ ಕುಮುದಿನಿಯು ತನ್ನ ಭಾವನೆದುರಿಗೆ ಇಲ್ಲವೆ ಗಂಡನೆದುರಿಗೆ ಒಂದಿಷ್ಟೂ ಒಡನುಡಿಯಲಾರಳೆಂಬುದನ್ನು ಅವಳು ತಿಳಿದುಕೊಂಡಿದ್ದಳು; ಅಲ್ಲದೆ ಕುಮುದಿನಿಯು ಈ ಮೊದಲಿನ ಪತ್ರಗಳಿಂದ ಅವಳು ಸುಖಿಯಾಗಿಲ್ಲವೆಂಬದನ್ನೂ ಅರಿತಿದ್ದಳು; ಮತ್ತು ಅದಕ್ಕಾಗಿಯೇ ಕುಮುದಿನಿಯು ಪತ್ರಗಳ ಕಡೆಗೆ ಕಮಲೆಯು ದೃಷ್ಟಿಯು ಹೆಚ್ಚಾಗಿ ವೇಧಿಸಿದ್ದಿತು.

ಶುದ್ಧ ಪ್ರೇಮದಿಂದ ಆಬದ್ಧವಾದ ಎರಡು ಜನರ ಅಂತಃಕರಣಗಳು ಪರಸ್ಪರರಿಂದ ಸಾವಿರಾರು ಮೈಲುಗಳ ಅಂತರದ ಮೇಲಿದ್ದರೂ ಪರಸ್ಪರ ಅಂತಃಕರಣದ ಸಂದೇಶಗಳೂ, ಭಾವನೆಗಳೂ, ಸುಖ-ದುಃಖ ಪ್ರಸಂಗಗಳೂ ರೆಡಿಯೋದಂತೆ ಪರಸ್ಪರರ ಅಂತಃಕರಣಗಳಿಗೆ ಹೋಗಿ ಮುಟ್ಟುವವೂ, ಆ ಬಗೆಯಿಂದ ಅವರ ಮನೋಭಾವನೆಗಳನ್ನು ಜಾಗ್ರತಗೊಳಿಸುವದೂ ಪ್ರಕೃತಿ ಧರ್ಮದ ಸರ್ವಸಾಧಾರಣ ನಿಯಮವಾಗಿರುತ್ತದೆ. ಇತ್ತೀಚೆಗೆ ಇತ್ತ ಕುಮುದಿನಿಯು ಮೇಲೆ ಹೇಗೆ ಘೋರ ಪ್ರಸಂಗಗಳುಂಟಾಗಹತ್ತಿದವೋ ಹಾಗೆ ಅತ್ತ ಕಮಲೆಯು ಅಂತಃಕರಣವು ಹಲವು

ಬಗೆಯ ಸುಷ್ಟ-ದುಷ್ಟ ಕಲ್ಪನೆಗಳಿಂದ ಕ್ಲೇಶಪಡಹತ್ತಿತ್ತು. ಇಂದಾವರೂ ಕಮಲೆಯ ಲಕ್ಷ್ಯವು ತನ್ನ ಅಭ್ಯಾಸದ ಕಡೆಗೆ ಕೊಂಚವೂ ವೇಧಿಸಲೊಲ್ಲದು. ಇಂದು ಕುಮುದಿನಿಯು ಒಂದೇಸವನೆ ಅವಳೆನುರಿಗೆ ಬರುತ್ತಿದ್ದಳು. ಕುಮುದಿನಿಯು ಬಗ್ಗೆ ಕಮಲೆಗೆ ಅಶುಭ ಭಾಸವಾಗಹತ್ತಿತು. ಅವಳ ದೀನಮುದ್ರೆಯು ದೃಷ್ಟಿಯೆದುರಿಗೆ ಕಟ್ಟಿದ ಹಾಗಾಗಲು, ಕಮಲೆಯು ದುಃಖಾಕುಲಳಾಗಿದ್ದಳು. ಇಷ್ಟರಲ್ಲಿ ಮಿಸ್ ಮೇರೀ ಎಂಬ ಹೆಸರಿನ ಅವಳ ಸಹಪಾಠಿಯು ಅಲ್ಲಿಗೆ ಬಂದಳು; ಹಾಗು ಯಾವಾಗಲೂ ಗುಲಾಬಿಯ ಹೂವಿನಂತೆ ನಗೆಮೊಗದಿಂದ ಕಾಣುವ ಕಮಲೆಯು ಇಂದು ತೀರ ಮ್ಲಾನವದನೆಯಾದುದನ್ನು ಕಂಡು:—"ಮಿಸ್ ಕಮಲಾ, ಇಂದು ನೀವು ಇಷ್ಟು ದುಃಖಿಗಳೇಕಾಗಿರುತ್ತೀರಿ? ನಿಮಗೆ ನಿಮ್ಮ ಮನೆಯವರ ನೆನಪಾಗಿದೆಯೇನು?" ಎಂದು ಕೇಳಿದಳು.

ಮಿಸ್ ಮೇರಿಯು ಕಮಲೆಯು ವಯಸ್ಸಿನ ಹುಡುಗಿಯೇ ಆಗಿದ್ದಳು. ಅವಳು ಸುಶೀಲೆಯೂ ಪ್ರೇಮಲ ಸ್ವಭಾವದವಳೂ ಆಗಿದ್ದರಿಂದ ಕಮಲೆಗೂ ಆಕೆಗೂ ಹೆಚ್ಚು ಮೈತ್ರಿಯುಂಟಾಗಿದ್ದಿತು. ಅವರಿಬ್ಬರೂ ಗೆಳತಿಯರು ಒತ್ತಟ್ಟಿಗೆ ಕಲೆತರೆಂದರೆ, ಅವರು ಏನಾದರೂ ಗೊಡ್ಡು ಹರಟೆ ಹೊಡೆಯುವುದರಲ್ಲಿ ಕಾಲಹರಣ ಮಾಡುತ್ತಿರಲಿಲ್ಲ. ಮೇರಿಯು ನಮ್ಮ ಹಿಂದುಗಳ ಸಂಸ್ಕೃತಿಯು, ದೇಶದ ಹಾಗು ರೀತಿ-ರಿವಾಜುಗಳ ಬಗ್ಗೆ ದಿನಾಲು ಒಂದಿಲ್ಲೊಂದು ಬಗೆಯಿಂದ ಪ್ರಶ್ನೆಮಾಡಿ, ನಮ್ಮಗಳ ವಿಷಯದ ಹಲವು ಸಂಗತಿಗಳನ್ನು ಕಮಲೆಯಿಂದ ತಿಳಿದುಕೊಳ್ಳುತ್ತಿದ್ದಂತೆ, ಕಮಲೆಯಾದರೂ ಮೇರಿಯಿಂದ ಅವರ ಸಂಸ್ಕೃತಿ, ರೀತಿ-ರಿವಾಜುಗಳ ಮಾಹಿತಿಯನ್ನು ಪಡೆದುಕೊಳ್ಳುತ್ತಿದ್ದಳು. ದಿನದಂತೆ ಕಮಲೆಯು ಇಂದು ತಾನೇ ಮೇರಿಯ ಭೆಟಿಗೆ ಹೋಗದ್ದರಿಂದ, ಮೇರಿಯೇ ಇವಳಲ್ಲಿಗೆ ಬಂದಿದ್ದಳು. ಇಂದು ಅವರೀರ್ವರೂ ತೇಮ್ಸ ನದಿಯ ತಟಾಕದೊಳಗಿನ ಮೋಜನ್ನು ನೋಡುವ ಸಲುವಾಗಿ ಹೋಗಬೇಕೆಂದಿದ್ದರು; ಆದರೆ ಕಮಲೆಯು ಆಗಿನ ಉದಾಸ ಮುಖಮುದ್ರೆಯನ್ನು ಕಂಡ ಕೂಡಲೆ ಅವಳು ಚಕಿತಳಾಗಿ, ಕಳವಳದಿಂದ ಮೇಲಿನಂತೆ ಪ್ರಶ್ನೆ ಮಾಡಿದಳು. ಆ ಪ್ರಶ್ನೆಯನ್ನು ಕೇಳಿ ಕಮಲೆಯು ನೇತ್ರಗಳು ಅಶ್ರುಪೂರಿತವಾದವು. ಅವಳು ಮೇರಿಯು ಮುಖದ ಕಡೆಗೆ ಶೂನ್ಯದೃಷ್ಟಿಯಿಂದ ಅವಲೋಕಿಸುತ್ತ:—"ಮಿಸ್ ಮೇರಿ, ನನ್ನ ಜೀವದ ಗೆಳತಿಯಾದ ಕುಮುದಿನಿಯೆಂಬವಳು ಹಿಂದುಸ್ತಾನದಲ್ಲಿರುತ್ತಾಳೆಂದು ನಾನು ನಿನಗೆ ಈ ಮೊದಲೆಷ್ಟೋಸಾರೆ ಹೇಳಿರುವದಿಲ್ಲವೆ?"

"ಅಹುದು; ಈಗ ಅವಳಿಂದೇನಾದರೂ ಪತ್ರಬಂದಿದೆಯೋ?"

"ಅವಳಿಂದ ಬಹುದಿನಗಳಿಂದ ಪತ್ರಬಂದಿಲ್ಲವೆಂದೇ ನನ್ನ ಮನಸ್ಸಿನಲ್ಲಿ ನಾನಾ ಬಗೆಯ ವಿಕಲ್ಪಗಳುಂಟಾಗಹತ್ತಿವೆ."

"ನಾನು ನಿಮ್ಮ ಗೆಳತಿಯ ಬಗ್ಗೆ ನಾಲ್ಕು ಮಾತುಗಳನ್ನಾಡುತ್ತೇನೆಂದು ನೀವು ಸಿಟ್ಟಾಗಬೇಡಿರಿ. ನೀವು ಆಕೆಯ ಬಗ್ಗೆ ಇಲ್ಲಿ ಇಷ್ಟು ತಳಮಳಿಸುತ್ತಿರಲು, ನಿಮಗೆ

ಪತ್ರ ಬರೆಯಲಿಕ್ಕೆ ಅವಳು ಹೀಗೆ ಸೋಮಾರಿತನ ಮಾಡುವದು ತುಸ ಖೇದದ ಸಂಗತಿಯೇ ಸರಿ.''

''ಇಲ್ಲ; ಮೇರೀ, ಅವಳಷ್ಟು ದಕ್ಷಳಾದ ಹುಡುಗಿಯು ಸಿಗುವದು ದುರ್ಲಭವೆಂದೇ ಅನ್ನಬಹುದು; ಆದರೆ ಅವಳು ನನ್ನಂತೆ ಸ್ವತಂತ್ರಳಾಗಿರುವದಿಲ್ಲ. ಅವಳ ಮದುವೆಯಾಗಿದೆ. ಅವಳು ತನ್ನ ಸಂಸಾರದ ಭಾರವನ್ನು ವಹಿಸಿರುತ್ತಾಳೆ.''

''ಮಿಸ್ ಕಮಲಾ, ಅವಳ ಲಗ್ನವಾದ ಮಾತ್ರಕ್ಕೆ ಇಲ್ಲವೆ ಅವಳು ಸಂಸಾರ ಭಾರ ವಹಿಸಿದ್ದರಿಂದ ನಿನಗೆ ಪತ್ರ ಬರೆಯಲಿಕ್ಕೆ ಆತಂಕವೇನು?''

''ಮೇರೀ, ಅವಳ ಸ್ಥಿತಿಯು ತೀರ ಭಿನ್ನವಾಗಿದೆ. ಅವಳ ಮನೆಯಲ್ಲಿ ಹಿರಿಯರಿರುತ್ತಾರೆ.''

''ಮಿಸ್ ಕಮಲಾ, ನಾನು ತುಸ ಸ್ಪಷ್ಟಮಾತಾಡುತ್ತೇನೆ; ಆ ಬಗ್ಗೆ ಕ್ಷಮಿಸಿರಿ. ಮನೆಯಲ್ಲಿ ಹಿರಿಯರಿದ್ದ ಮಾತ್ರಕ್ಕೆ ತಮ್ಮ ಇಷ್ಟ-ಮಿತ್ರ ಜನರಿಗೆ ಪತ್ರಕಳಿಸಲಿಕ್ಕೆ ಕಳವೇನು? ನನಗಂತೂ ಆ ನೆವವು ತೀರ ಕೈಲಾಗದ್ದೆಂದು ಅನಿಸುತ್ತದೆ.''

''ಅದು ನಿಜ; ಯಾಕಂದರೆ, ನಮ್ಮ-ನಿಮ್ಮಗಳ ರೀತಿ-ರಿವಾಜುಗಳಲ್ಲಿ ಪೂರ್ವಪಶ್ಚಿಮದಷ್ಟು ಅಂತರವಿದೆ.''

''ಅದು ಹೇಗೆ?''

''ಮಿಸ್ ಮೇರಿ, ಅತ್ತೆಯ ಮನೆಯ ಸೊಸೆಯಂದಿರು-ನಮ್ಮ ಆರ್ಯ ತರುಣಿಯರು ತಮ್ಮ ಅತ್ತೆಯಮನೆಯವರಿಗೆ ತಿಳಿಸದ ಹೊರತು ಬೇರೆಯವರಾರಿಗೂ ಪತ್ರಕೂಡ ಬರೆಯಲಿಕ್ಕೆ ಬಾರದು. ನಮ್ಮ-ನಿಮ್ಮಗಳ ನಡವಳಿಕೆಗಳು ತೀರ ವಿಪರೀತವಾಗಿರುತ್ತವೆ. ಮನೆಯಲ್ಲಿ ಹಿರಿಯರಾದ ಅತ್ತೆ-ಮಾವ, ಹಿರಿಯ ಭಾವ-ನೆಗೆಣ್ಣಿ, ನಾದಿನಿ ಮೊದಲಾದವರಿರುವವರೆಗೂ ನಮ್ಮ ಕಡೆಯ ತರುಣಿಯರಿಗೆ ಯಾವ ಸಂಗತಿಯನ್ನು ಸ್ವತಂತ್ರವಾಗಿ ಮಾಡಬರುವದಿಲ್ಲ. ನಮ್ಮ ಕಡೆಯ ಕೌಟುಂಬಿಕ ಬಂಧನಗಳು ನಿಮ್ಮ ದೇಶಕ್ಕಿಂತ ತೀರ ವಿರುದ್ಧವಾಗಿರುತ್ತವೆ. ನೀವು ಯಾವನೊಬ್ಬ ಅಪರಿಚಿತ ಗಂಡಸಿಗೂ ಹಸ್ತಾಂದೋಲನ ಮಾಡುವಿರಿ. ಅವರೊಡನೆ ಏಕಾಂತದಲ್ಲಿ ಕೂಡ್ರುವಿರಿ. ಯಾವನೊಬ್ಬ ಪರಪುರುಷನೊಡನೆ ನೀವು ಡ್ಯಾನ್ಸಿಗೆ ಹೋಗುವಿರಿ; ಆದರೆ ನಾವುಗಳು ಪರಪುರುಷರ ಸ್ಪರ್ಶವೆಂದರೆ, ತೀರ ಅಪವಿತ್ರವೆಂದು ತಿಳಿಯುತ್ತೇವೆ. ಅವರೊಡನೆ ಏಕಾಂತದಲ್ಲಿ ಕೂಡ್ರುವದೂ, ಆಡ್ಡಾಡಲಿಕ್ಕೆ ಹೋಗುವದೂ, ಸುಮ್ಮನೆ ಹರಟೆ ಕೊಚ್ಚುವದೂ ನಾವು ನಿಷೇಧವೆಂದು ಗ್ರಹಿಸುತ್ತೇವೆ. ಮೇರೀ, ಗೆಳತೀ, ನಿಮ್ಮ ಹಾಗೆ ನಮ್ಮ ಆರ್ಯಾಂಗನೆಯರೆಂದೂ ಸ್ವತಂತ್ರರಾಗಿ ನಡೆಯುವದಿಲ್ಲ.''

''ಕಮಲಾ, ಪರಪುರುಷರೊಡನೆ ಮಾತು-ಕಥೆಯಾಡಿದರೆ ನೀತಿಗೆ ಬಾಧಕ ಬಂದೀತೆಂದು ನನಗನಿಸುವದಿಲ್ಲ. ನಮ್ಮ ಮನಸ್ಸು ಖಂಬೀರವಿದ್ದರೆ, ಯಾರೇನು ಮಾಡುವರು?''

''ಮೇರೀ, ನಿನ್ನೀ ಪ್ರಶ್ನೆಗೆ ಉತ್ತರ ಕೊಡುವದರಿಂದ ನಿನ್ನ ಮನಸ್ಸು ನೋ-

ಯಿಸಿದಂತಾಗುವದು; ಅಲ್ಲದೆ ಇದು ಅತ್ಯಂತ ಸೂಕ್ಷ್ಮವಿಚಾರವೂ ಆಗಿದೆ. ಆದ್ದರಿಂದ ಈ ಬಗ್ಗೆ ಅಭಿಪ್ರಾಯ ಕೊಡುವ ಅಧಿಕಾರವು ನನ್ನದಲ್ಲ; ಆದರೆ ನೀನು ನನಗೆ ಪರಕೀಯಳಿರದ್ದರಿಂದಲೇ ನಾನು ನಿನ್ನೆಡೆಯಲ್ಲಿ ನಿಜಸ್ಥಿತಿಯನ್ನು ಸಂಕೋಚವಿಲ್ಲದೆ ಹೇಳುತ್ತೇನೆ. ತಂಗೀ, ಮೇರೀ, ಹರೆಯದ ಕಾಲಕ್ಕೆ ಪ್ರತಿಯೊಬ್ಬರ ಮನೋವಿಕಾರಗಳು ಬಹು ಸೂಕ್ಷ್ಮವಾಗಿರುತ್ತವೆ. ಅದರಿಂದ ಯಾವನೊಬ್ಬ ತರುಣನ ಅಥವಾ ಯಾವಳೊಬ್ಬ ತರುಣಿಯ ದೃಷ್ಟಿಯು ಪರಸ್ಪರರನ್ನು ನೋಡಿದ ಮಾತ್ರಕ್ಕೆ ಅವರವರ ಮನೋವೃತ್ತಿಗಳು ಉಚ್ಛೃಂಖಲವಾಗುತ್ತವೆ. ಅಂದಬಳಿಕ ಕೈಯಲ್ಲಿ ಕೈಯಿರಿಸಿ, ಏಕಾಂತದಲ್ಲಿ ಕುಳಿತು ಮಾತುಕತೆಯಾಡಹತ್ತಿದರೆ ಇಲ್ಲವೆ ಮೈಗೆ ಮೈ ಹಚ್ಚಿಕೊಂಡು ಡ್ಯಾನ್ಸುಗಳಲ್ಲಿ ಕುಣಿಯಹತ್ತಿದರೆ, ಅದರಿಂದ ನನ್ನ ನಿನ್ನಂತಹ ತರುಣಿಯರಿಗೆ ಎಷ್ಟು ಘಾತವಾದೀತೆಂಬದನ್ನು ನೀನು ಮನಸ್ಸಿನಲ್ಲಿಯೇ ಯೋಚಿಸಿ ನೋಡು. ಮೇರೀ, ಸ್ತ್ರೀಯರ ಮನಸ್ಸು ಹುಟ್ಟಾ ಬಹು ಖಂಬೀರವಾಗಿರುತ್ತದೆ. ಯಾವುದೊಂದು ಕೆಲಸವನ್ನು ಮಾಡಕೂಡದೆಂದು ನಾವು ನಮ್ಮ ಮನಸ್ಸಿನಿಂದ ನಿಶ್ಚಯಿಸಿಕೊಂಡೆವೆಂದರೆ, ಪ್ರತಿ ಬ್ರಹ್ಮನಿಂದಲೂ ನಮ್ಮ ಮನಸ್ಸನ್ನು ತಿರುಗಿಸಲಾಗುವುದಿಲ್ಲ; ಆದರೆ ಗಂಡಸರ ಸ್ಥಿತಿಯು ಇದಕ್ಕೆ ತೀರ ವಿಪರೀತವಾಗಿರುತ್ತದೆ. ಅವರ ಮನಸ್ಸು ಯಾವುದೊಂದು ವಿಷಯದ ಕಡೆಗೆ ಒಮ್ಮೆಲೆ ಎಳಿಸುತ್ತದೆ. ಅವರಿಂದ ತಮ್ಮ ಮನಸ್ಸು ಬಿಗಿಹಿಡಿಯುವದು ಸಹಸಾ ಆಗುವದಿಲ್ಲ. ಅಂತೆಯೇ ಸಮಾಜದಲ್ಲಿ ಅನರ್ಥಗಳುಂಟಾಗಕೂಡದೆಂದು ಪರಸ್ತ್ರೀಯರ ಯಾವುದೊಂದು ಅರಿವೆ-ಅಂಚಡಿಗೂ ಕೂಡ ಗಂಡಸರು ಕೈ ಹಚ್ಚಕೂಡದೆಂದು ನಮ್ಮ ಸೂಜ್ಞ ಆರ್ಯರು ಪ್ರತಿಬಂಧಿಸಿ ಹೇಳಿರುತ್ತಾರೆ. ನನ್ನ ಈ ಮಾತಿನಿಂದ ಎಲ್ಲ ಗಂಡಸರೂ ಪಾಪಿಷ್ಠರೇ ಎಂದು ಮಾತ್ರ ಸರ್ವಥಾ ಗ್ರಹಿಸಬಾರದು; ಆದರೆ ಹರೆಯದ ಕಾಲದಲ್ಲಿ ಮನಸ್ಸಿನ ಪ್ರವೃತ್ತಿಯು ಅತಿ ಸೂಕ್ಷ್ಮವಾಗಿರುವದರಿಂದ, ವಿಷದ ಪರೀಕ್ಷೆ ಮಾಡಹೋಗದೆ, ಯೋಗ್ಯರೀತಿಯಿಂದ ನಡೆಯುವದಕ್ಕಾಗಿಯೇ ನಮ್ಮ ಹಿಂದು ಜನರ ಆಚಾರ ಧರ್ಮಗಳಿವೆ ಅದರಿಂದಲೇ ನಮ್ಮ ಕಡೆಯ ಹೆಂಗಳೆಯರು ನಿಮ್ಮ ಕಡೆಯವರಷ್ಟು ಸ್ವತಂತ್ರ ರೀತಿಯಿಂದ ವರ್ತಿಸುತ್ತಿರುವುದಿಲ್ಲ."

"ಕಮಲಾ, ನಿಮ್ಮ ಈ ರೀತಿಯು ಕೆಲ ಮಟ್ಟಿಗೆ ನನಗೂ ಸರಿಯೆನಿಸುತ್ತಿದೆ. ನಮ್ಮ ಸಮಾಜದಲ್ಲಿ ಸ್ತ್ರೀಯರಿಗೆ ಯಾವ ಪ್ರತಿಬಂಧವನ್ನೂ ಇಡದ್ದರಿಂದ ಪರಿಣಾಮದಲ್ಲಿ ವಿಶೇಷ ಹಾನಿಯಾಗುತ್ತದೆಂಬದು ಬಹು ಜನರ ಅನುಭವಕ್ಕೆ ಬರತೊಡಗಿದೆ. ಅದರಿಂದ ನಮ್ಮ ಸಾಮಾಜಿಕರೂ ಈ ಸಂಗತಿಯ ಬಗ್ಗೆ ಇತ್ತೀಚೆಗೆ ಯೋಚಿಸಲಾರಂಭಿಸಿರುತ್ತಾರೆ."

"ಮೇರೀ, ನಿನ್ನೆದುರಿಗೆ ಮುಚ್ಚುಮರೆ ಮಾಡಲಿಕ್ಕೆ ಕಾರಣವೇ ಇಲ್ಲ. ನಮ್ಮ ಕುಮುದಿನಿಯ ಸ್ಥಿತಿಯು ಬಹು ವಿಲಕ್ಷಣವಾಗಿದೆ. ಅವಳು ಒಳ್ಳೇ ಸುಶಿಕ್ಷಿತಳಿದ್ದು, ಸುಶೀಲೆಯೂ ಸದ್ವರ್ತನಿಯೂ ಆಗಿರುತ್ತಾಳೆ. ದೈವ ಬಲದಿಂದ ಅವಳಿಗೆ ಯೋಗ್ಯ

ಗಂಡನೂ ದೊರೆತಿದ್ದು, ಆಕೆಯ ಭಾವನು ಅವಳನ್ನು ಮಮತೆಯಿಂದ ನೋಡಿಕೊಳ್ಳುತ್ತಾನೆ. ಅವರ ಮನೆತನವು ಉಂಡುಟ್ಟು ಸುಖಿಯಾಗಿರುವುದು; ಆದರೆ...."

"ಆದರೆ ಏನು ಕಮಲಾ? ನೀನು ಹೀಗೆ ನಡುವೇ ನಿಂತೆಯೇಕೆ? ನಾನು ಜಾತಿಯಿಂದ ಪರಕೀಯಳಾಗಿದ್ದರೂ ನನ್ನ ನಿನ್ನ ಪ್ರೇಮದಲ್ಲಿ ಸ್ವಲ್ಪವೂ ಭೇದ ಭಾವವಿರುವದಿಲ್ಲ. ಆದರಿಂದ ನೀನು ನಿನ್ನ ಹೃದ್ಗತವನ್ನು ನನ್ನೆದುರಿಗೆ ಉಸುರಲಿಕ್ಕೆ ಕೊಂಚವೂ ಅನುಮಾನಿಸಬೇಡ."

"ಮೇರೀ, ನಿನಗೆ ನಿಜಸಂಗತಿ ತಿಳಿಸಲಿಕ್ಕೆ ನಾನು ಸಂಕೋಚ ಪಡುವುದಿಲ್ಲ; ಆದರೆ ನಮ್ಮ ಕುಮುದಿನಿಯು ಈ ಕಾಲಕ್ಕೆ ಯಾವ ಸ್ಥಿತಿಯಲ್ಲಿರುವಳೋ ಎಂಬ ಕಲ್ಪನೆಯಿಂದ ನನ್ನ ಹೃದಯವು ಧಡಧಡನೆ ಹಾರಹತ್ತಿದೆ. ತಂಗೀ, ಮೇರೀ, ನನ್ನ ಮನಸ್ಸು ಅಷ್ಟೊಂದು ಹೇಡಿಯಾಗಿರುವದಿಲ್ಲ. ನನ್ನ ಮನಸ್ಸಿನಲ್ಲಿ ಸುಮ್ಮ ಸುಮ್ಮನೆ ಅಲ್ಲದ ಸಲ್ಲದ ಕಲ್ಪನೆಗಳೆಂದೂ ಬರಲಾರವು. ಇಂದಿಗೆರಡು ದಿನಗಳಿಂದ ನಮ್ಮ ಕುಮುದಿನಿಯ ಮೇಲೆ ಯಾವುದೋ ಒಂದು ಘೋರ ಪ್ರಸಂಗವುಂಟಾಗಿರಲೇ ಬೇಕೆಂದು ನನ್ನ ಮನಸ್ಸಿಗೆ ಅನಿಸಿ, ಅಸ್ವಸ್ಥತೆಯುಂಟಾಗಿದೆ."

"ಛೇ! ಛೇ! ಬಹು ದಿನಗಳಿಂದ ಅವರ ಕಡೆಯ ಪತ್ರ ಬಾರದ್ದರಿಂದ ಇಲ್ಲದ ತರ್ಕ ವಿತರ್ಕಗಳನ್ನು ಮಾಡುತ್ತ ಕೂಡ್ರುವದು ಸರಿಯಲ್ಲ. ಯಾವುದೊಂದು ಅಡಚಣಿಯ ಮೂಲಕ ಸಮಯ ದೊರೆಯದ್ದರಿಂದ, ಅವರು ಪತ್ರ ಕಳಿಸಿರಲಿಕ್ಕಿಲ್ಲ. ನಿಷ್ಟೇ. ಬೇಗನೆ, ಅವರಿಂದ ನಿಮಗೆ ಪತ್ರ ಬರುವದೋ ಇಲ್ಲೊಂಬದನ್ನು ನೋಡಿರಿ. ಇದು ಈ ಮಿಸ್ಸಳ ಭವಿಷ್ಯವಾಣಿಯಾಗಿದೆ."

"ಓಹೋ! ಹಾಗಾದರೆ ನೀನೂ ಭವಿಷ್ಯಗಾರ್ತಿಯಾದಂತಾಯಿತು."

"ಭವಿಷ್ಯವೆಂತಹದು? ನನ್ನ ಗೆಳತಿಯು ಗೆಳತಿಯ ಕಡೆಗೆ ನನ್ನ ಮನಸ್ಸೂ ಹೆಚ್ಚಾಗಿ ಎಳೆಯುತ್ತಿರುವದರಿಂದ, ಆ ನನ್ನ ಮನಸ್ಸಿಗೆ ಈಗ ಏನು ಹೊಳೆಯಿತೋ ಅದನ್ನೇ ನಾನು ನಿನಗೆ ಹೇಳಿದೆನು. ಅದಿರಲಿ. ಕಮಲಾ, ಕುಮುದಿನಿಯು ಲಗ್ನವಾಗಿರುತ್ತಾಳೆಂಬನ್ನುವಿ. ಅಂದಮೇಲೆ ಅವಳು ತನ್ನ ನೆಗೆಣ್ಣಿಯ ಹತ್ತರ ಆಕೆಯ ಪಿಸುಣಾ ನುಡಿಗಳನ್ನಾಡಿಸಿಕೊಳ್ಳಲಿಕ್ಕೇಕೆ ಇರುವಳು? ನಿಮ್ಮ ಜನರಲ್ಲಿ ಇದೇನು ಹುಚ್ಚುಚ್ಚಾರವು!"

"ಮೇರೀ, ಕುಟುಂಬ ಶಬ್ದದ ವ್ಯಾಖ್ಯೆಯು ನಮ್ಮ ಹಿಂದುಸ್ತಾನದಲ್ಲಿ ಬಹು ವಿಸ್ತೃತವಾಗಿದೆ. ನಿಮ್ಮ ಪಾಶ್ಚಿಮಾತ್ಯರಂತೆ ಲಗ್ನವಾದೊಡನೆಯೇ ಗಂಡ-ಹೆಂಡಿರು ಬೇರೆ ಇರುವ ನಡತೆಯು ನಮ್ಮಲ್ಲಿರುವದಿಲ್ಲ. ಯಾವನೊಬ್ಬ ಹುಂಬ ತರುಣನು ಮದುವೆಯಾದೊಡನೆಯೆ ಹೆಂಡತಿಯೊಡನೆ ಬೇರೆ ಇರಹತ್ತಿದರೆ, ನಮ್ಮ ಸಮಾಜವು ಆತನನ್ನು ಹೀನವರ್ಗದಲ್ಲಿ ಸೇರಿಸುತ್ತದೆ. ಯಾವ ಕುಟುಂಬದಲ್ಲಿ ನಾಲ್ಕೈದು ಜನ ಅಣ್ಣ-ತಮ್ಮಂದಿರೂ, ನಾದಿನಿ-ನೆಗೆಣ್ಣಿಯರೂ, ಅವರೆಲ್ಲರ ಹುಡುಗರು-ಹುಪ್ಪಡಿಗಳೂ ಸುಖ ಸಮಾಧಾನದಿಂದಿರುತ್ತಿರುವರೋ, ಅವರಿಗೆ ನಾವು ಮನೆತನಸ್ಥರೆಂದು ಅಂದು,

ಅವರನ್ನು ಹೆಚ್ಚಾಗಿ ಆದರಿಸುತ್ತೇವೆ. ಮೇರೀ, ಕುಟುಂಬ ಸಂಘಟನವು ನಮ್ಮಲ್ಲಿ ಅತ್ಯಂತ ಶ್ರೇಷ್ಠವೆಂದೆನಿಸಿದೆ"

"ಕಮಲಾ, ನಿಮ್ಮಗಳ ಈ ಕುಟುಂಬ ಸಂಘಟನೆಯ ಕಲ್ಪನೆಯನ್ನು ಕೇಳಿ ನನ್ನ ಎದೆಯು ಧಸ್ಸೆನ್ನುತ್ತದೆ. ನಮ್ಮ ಜನಗಳಲ್ಲಿ ಒಬ್ಬ ಗಂಡ ಹೆಂಡಂದಿರ ಸಂಸಾರವೇ ಸುಸೂತ್ರವಾಗಿ ನಡೆಯಬೇಕಾದರೆ ಎಷ್ಟೋ ತೊಂದರೆಗಳುಂಟಾಗುತ್ತಿರಲು, ೨೦-೨೫ ಜನರುಳ್ಳ ಕುಟುಂಬಗಳು ನಿಮ್ಮಲ್ಲಿ ಹೇಗೆ ಸಂಬಾಳಿಸುವವವ್ವಾ!"

"ನಮ್ಮ-ನಿಮ್ಮಗಳಲ್ಲಿ ಇದೇ ಪ್ರಾಮುಖ್ಯವಾದ ಭೇದವು. ನಮ್ಮಲ್ಲಿ ಈ ಕುಟುಂಬ ಸಂಘಟನೆಯಿದ್ದುದರಿಂದಲೇ 'ಹತ್ತರ ಹಲ್ಲು ಕಡ್ಡಿ ಒಬ್ಬರ ತಲೆ ಹೊರೆ' ಎಂಬಂತೆ, ಮನೆಯಲ್ಲಿ ಮಾಡುವರು ಮಟ್ಟನದು ನಾಲ್ಕಾರೇ ಜನರಿದ್ದರೂ ಯಾರ ಮೇಲೆಯೂ ವಿಶೇಷ ಭಾರ ಬೀಳುವದಿಲ್ಲ. ಅವರೆಲ್ಲರೂ ಹೆಚ್ಚು ಕಡಿಮೆ ಪ್ರಮಾಣದಿಂದ ಸಂಪಾದಿಸುವವರಿದ್ದರೂ ಎಲ್ಲರೂ ಏಕತ್ರಿತವಿರುವುದರಿಂದ ಎಲ್ಲರಿಗೂ ಸುಖ-ಸಮಾಧಾನವು ಲಭಿಸುತ್ತದೆ. ಅವರಲ್ಲಿಯ ಯಾರೊಬ್ಬರ ಮೇಲೆ ಎಂಥದೊಂದು ಕಠಿಣ ಪ್ರಸಂಗ ಬಂದರೂ ಅವರು ಅದಕ್ಕೆ ಅಂಜುವ ಕಾರಣವಿರುವದಿಲ್ಲ; ಏಕೆಂದರೆ, ಉಳಿದವರೆಲ್ಲರೂ ಆತನ ಆ ಪ್ರಸಂಗಕ್ಕೆ ಭಾಗಿದಾರರಾಗಿ, ಅದರಿಂದ ಅವನನ್ನು ತೀವ್ರವೇ ಪಾರುಮಾಡುವ ಪ್ರಯತ್ನ ಪಡುತ್ತಾರೆ ಅದರಿಂದ ಆ ಕುಟುಂಬದವರೆಲ್ಲರಿಗೂ ಸುಖ, ಶಾಂತಿ, ಸಮಾಧಾನ, ಪ್ರೇಮಗಳನ್ನು ಬೇಕಾದ ಹಾಗೆ ಉಪಭೋಗಿಸಲಿಕ್ಕೆ ಬರುತ್ತದೆ. ಮೇರೀ, ನಮ್ಮ ಹಿಂದುಗಳಲ್ಲಿಯು ಈ ಕುಟುಂಬ ಸಂಘಟನೆಯ ಮೂಲಕವೇ ವಿಶ್ವ ಬಂಧುತ್ವದ ಕಲ್ಪನೆಯು ಅಸ್ತಿತ್ವಕ್ಕೆ ಬಂದಿದೆ; ಹಾಗು ಅದನ್ನು ನಿಮ್ಮ ಸಮಾಜವೂ ಎತ್ತಿ ಹಿಡಿಯ ತೊಡಗಿದೆ. ಗಂಡನೇ ರಾಜನು, ಹೆಂಡತಿಯೇ ರಾಣಿಯು. ಅತ್ತೆ-ಮಾವಂದಿರ ಹೆದರಿಕೆ ಇಲ್ಲ; ನಾದಿನಿ-ನೆಗೆಣ್ಣಿಯರ ಹೇವ-ನಾಚಿಕೆಗಳಿಲ್ಲ. ಗಂಡ-ಹೆಂಡಿರಿಬ್ಬರೂ ಮನೆಯಲ್ಲಿ ಮಾಡಿದ್ದೇ ಮಟ್ಟು! ಹಾಕಿದ್ದೇ ಗೊಂದಲ! ಈ ವಾತಾವರಣದಿಂದ ನಿಮ್ಮ ಸಮಾಜದಲ್ಲಿ ಘಟಸ್ಫೋಟದ ಪ್ರಸಂಗಗಳು ವಿಪರೀತಗಳಾಗುವವು; ಆದರೆ ನಮ್ಮ ಹಿಂದೂ ಜನಾಂಗದಲ್ಲಿ ತೀರ ಕೀಳು ಜಾತಿಯವರಲ್ಲಿ ಕೂಡ ಆ ಪ್ರಮಾಣವು ಅತ್ಯಲ್ಪವಾಗಿದೆ. ನಿಮ್ಮಂತೆ ಮಾತು ಮಾತಿಗೂ ಘಟಸ್ಫೋಟಗಳಿಗೆ ನಮ್ಮಲ್ಲಿ ಕೊಂಚವೂ ಅಸ್ಪದವಿಲ್ಲ.

"ಕಮಲಾ, ಈ ಬಗ್ಗೆ ನಾನು ತುಸ ಸ್ಪಷ್ಟವಾಗಿ ಕೇಳುತ್ತೇನೆ. ತೊಂದರೆಯ ಬಗ್ಗೆ ಕ್ಷಮಿಸು. ನಾಲ್ಕೈದು ದಂಪತಿಗಳು ಒತ್ತಟ್ಟಿಗಿದ್ದರೂ ೪-೫ ಒಲೆಗಳನ್ನು ಹೂಡಬೇಕಲ್ಲವೆ? ಅಂದರೆ ಅದೊಂದು ಭೋಜನ ಗೃಹವೇ ಆಗುವದೆಂದೆನ್ನಿರಿ."

"ಛೇ! ಛೇ! ಮೇರೀ, ಹಾಗಲ್ಲ. ನಮ್ಮಗಳ ಕುಟುಂಬ ಸಂಘಟನೆಯಲ್ಲಿ ಅದೇ ಬಹು ಸೋಜಿಗದ ಸಂಗತಿಯಾಗಿದೆ. ಮನೆಯಲ್ಲಿ ನಾಲ್ಕೆಂಟು ಜನ ಅಣ್ಣ-ತಮ್ಮಂದಿರಿದ್ದರೂ ಅವರ ಹೆಂಡಂದಿರು ಒಂದೇ ಒಲೆಯಲ್ಲಿ ಅಡುವರು. ಮನೆಯೊಳಗಿನ ಎಲ್ಲಕ್ಕೂ ಹಿರಿಯ ಅಥವಾ ದಕ್ಷನಾದವನ ಕಡೆಗೆ ಉಳಿದ ಗಳಿಸುವ ಅಣ್ಣ-ತಮ್ಮಂದಿರೆಲ್ಲರೂ

ತಮ್ಮ ತಮ್ಮ ಗಳಿಕೆಯ ಮಾನದಿಂದ ಕೆಲ ನಿಶ್ಚಿತ ಹಣವನ್ನು ಒಪ್ಪಿಸುವರು. ಆ ಹಿರಿಯನು ಮನೆಯ ಖರ್ಚನ್ನೆಲ್ಲ ಸಾಗಿಸುವನು. ಅದರಿಂದ ಯಾರಿಗೂ ಸಂಸಾರದ ಬಗ್ಗೆ ತೊಂದರೆಯೆನಿಸದೆ, ಎಲ್ಲರಿಗೂ ಸುಖ-ಸಮಾಧಾನವೆನಿಸುವದು. ಪೂರ್ವ-ಪಶ್ಚಿಮಗಳಲ್ಲಿಯ ನಿಜವಾದ ಅಭ್ಯಂತರವೇ ಇದಾಗಿದೆ. ಮೇರೀ, ನಿಮ್ಮಗಳ ಸಂಸಾರ ಪದ್ಧತಿಯು ಕೃತ್ರಿಮವಾದುದು. ಅದು ರುಕ್ಷವೂ ಪರಾವಲಂಬಿಯೂ ಇರುತ್ತದೆಂದೇ ನಿಮಗೆ ಕೌಟುಂಬಿಕ ಸೌಖ್ಯದ ಕಲ್ಪನೆಯಿರುವದಿಲ್ಲ. ನೀವು ನಮ್ಮಗಳಿಗಿಂತ ಒಳ್ಳೇ ಆಡಂಬರದಿಂದಿರುತ್ತಿದ್ದರೂ, ನಮ್ಮಗಳ ಸಹಜವಾದ ಇರುವಿಕೆಯಿಂದಲೂ ಕುಟುಂಬ ಸಂಘಟನೆ-ಸ್ವಾವಲಂಬನಗಳಿಂದಲೂ ಯಾವ ಸುಖ-ಶಾಂತಿಗಳನ್ನು ನಾವು ಉಪಭೋಗಿಸುತ್ತಿರುವೆವೋ ಅವುಗಳ ಕಲ್ಪನೆಯೇ ನಿಮ್ಮಗಳಿಗಿರುತ್ತಿರುವದಿಲ್ಲ."

"ಕಮಲಾ, ನಿಮ್ಮ ಈ ಯಥಾರ್ಥ ವಿವೇಚನವನ್ನು ಕೇಳಿ ನನಗೆ ಬಹು ಆನಂದವಾಯಿತು. ಪ್ರತಿಯೊಬ್ಬನಿಗೆ ತಮ್ಮ ದೇಶದ, ತಮ್ಮ ಭಾಷೆಯ, ತಮ್ಮ ಸಂಸ್ಕೃತಿಯ ಅಭಿಮಾನವಿರಲೇಬೇಕು; ಅಂದರೇ ಅವನು ಮನುಷ್ಯನು! ಹಿಂದುಸ್ತಾನದೊಳಗಿನ ಬಹುಜನ ತರುಣರು ಶಿಕ್ಷಣಕ್ಕೆಂದು ಈ ದೇಶಕ್ಕೆ ಬರುವರು; ಆದರೆ ಅವರಲ್ಲಿಯ ಬಹು ಜನರು ತಮ್ಮ ರೀತಿ ರಿವಾಜುಗಳನ್ನು ಹಿಂದುಸ್ತಾನದ ದಂಡೆಯಲ್ಲೇ ಬಿಟ್ಟು ಬಂದು, ಇಲ್ಲಿ ನಮ್ಮನ್ನು ನಾಚಿಸುವಂತಹ ಆಡಂಬರಕ್ಕೊಳಗಾಗುತ್ತಾರೆ! ನಮ್ಮಗಳ ಅನುಕರಣ ಮಾಡಿದ ಮಾತ್ರಕ್ಕೆ ನಾವು ಅವರನ್ನು ಹೆಚ್ಚಾಗಿ ಪ್ರೀತಿಸುತ್ತೇವೆಂದು ಅವರು ತಿಳಿಯುತ್ತಿರುವರು; ಆದರೆ ವಸ್ತುಸ್ಥಿತಿಯು ಇದಕ್ಕೆ ತೀರ ವಿಪರೀತವಾಗಿದ್ದು, ಅಂಥ ಸ್ವಾಭಿಮಾನಶೂನ್ಯರನ್ನು ನಾವು ಹೆಚ್ಚಾಗಿ ತಿರಸ್ಕರಿಸುವೆವು. ಯಾರಿಗೆ ಸ್ವಂತದ ಸಂಸ್ಕೃತಿಯ ಅಭಿಮಾನವಿರುವದಿಲ್ಲವೋ, ಅಂಥವರನ್ನು ನಾವು ಕೊಂಚವೂ ಮನ್ನಿಸುವದಿಲ್ಲ"

"ಮಿಸ್ ಮೇರೀ, ನಮ್ಮ ಹಿಂದುಸ್ತಾನದಲ್ಲಿ ನೀನು ಹೇಳುವಂತಹ ಒಣ ದಿಮಾಕದ ಜನರು ಹೆಚ್ಚಾಗಿರುವರು. ಅವರು ತಮ್ಮ ದೊಡ್ಡಿಸ್ತಿಕೆ ಬೆಳಿಸುವದಕ್ಕಾಗಿ ಸಾಹೇಬೀ ಥಾಟಿನ ಇರವನ್ನಿಡುವರು; ಆದರೆ ಕಡೆಗೆ ಅವರಿಗೆ ಅದರಿಂದ ಪ್ರಯೋಜನವಿಲ್ಲೆಂದು ತಿಳಿದು ಬರಲು, ಅವರು ಮತ್ತೆ ಮೊದಲಿನ ಮನೆಗೇ ಬರುವರು. ಮೇರೀ, ನೀನು ಸ್ವಾಮಿ ವಿವೇಕಾನಂದರ ಹೆಸರನ್ನು ಕೇಳಿರಬಹುದು; ಹಾಗು ಅವರ ಉಪನ್ಯಾಸಗಳನ್ನೂ ಓದಿರಬಹುದು. ತಮ್ಮ ಅಧಿಕಾರಯುಕ್ತವಾಣಿಯಿಂದ ಅವರು ಅಮೇರಿಕೆಯ ಜನರನ್ನು ನಡುಗಿಸಿಬಿಟ್ಟರು! ಅವರಿಂದಲೇ ಅಮೇರಿಕನ್ನರಿಗೆ ಆರ್ಯಸಂಸ್ಕೃತಿಯ ಮಹತ್ತತ್ವಗಳು ರೋಮರಂಧ್ರಗಳಲ್ಲಿ ಬಿಂಬಿಸಲ್ಪಟ್ಟವು."

ಈ ಪ್ರಕಾರವಾಗಿ ಆ ಗೆಳತಿಯರಲ್ಲಿ ಸಂಭಾಷಣ ನಡೆದಿರಲು, ಪೋಸ್ಟಮನ್ನನು ಕಮಲೆಯ ಹೆಸರಿನದೊಂದು ಪತ್ರವನ್ನು ತಂದು ಕೊಟ್ಟನು. ಆ ಪತ್ರದ ಮೇಲ್ವಿಳಾಸದ ಅಕ್ಷರಗಳನ್ನು ದೃಷ್ಟಿಸುತ್ತಲೇ ಕಮಲೆಯ ಮುಖದ ಮೇಲಿನ ಉದ್ವೇಗದ ಕಳೆಯು ಬದಲಾಗಿ, ಅದು ಪ್ರಸನ್ನಪೂರ್ಣವಾಯಿತು. ಆಗ ಮೇರಿಯು:-ಕಮಲಾ,

ಈ ಮಿಸ್ಸಳ ಭವಿಷ್ಯವಾಣಿಯು ನಿಜವಾಯಿತಷ್ಟೇ? ಎಂದು ಕೇಳಲಿಕ್ಕೆ ಮರೆಯಲಿಲ್ಲ.

ಕಮಲೆಯು ಮುಗುಳು ನಗೆಯಿಂದ ಆ ಪತ್ರವನ್ನು ತಕ್ಕೊಂಡು ಒಡೆದು, ಉತ್ಸುಕತೆಯಿಂದ ಓದತೊಡಗಿದಳು.

ಶ್ರೀ

ಪ್ರಿಯ ಕುಮಾರಿ ಕಮಲಕ್ಕನಿಗೆ—ಸೌ|ವತಿ ಕುಮುದಿನಿಯ ಅನಂತ ಪ್ರಣಾಮಗಳು. ತರುವಾಯ,

ನೀನು ಕಳಿಸಿದ ಒಂದರ ಹಿಂದೊಂದಿನ ಎರಡು-ಮೂರು ಪತ್ರಗಳು ಸಕಾಲದಲ್ಲಿ ತಲುಪಿದವು. ನನ್ನಿಂದ ಕೂಡಲೆ ಉತ್ತರ ಬಾರದ್ದರಿಂದ ನೀನು ನನ್ನ ಮೇಲೆ ಸಿಟ್ಟಾಗಿರಬಹುದು; ಮತ್ತು ಹಾಗೆ ನೀನು ಸಿಟ್ಟಾಗುವುದೂ ಸ್ವಾಭಾವಿಕವು. ನಿನ್ನ ಹೊರತು ನನ್ನ ಮೇಲೆ ಪ್ರೇಮ ಪೂರ್ವಕವಾಗಿ ಸಿಟ್ಟಾಗುವ ಗೆಳತಿಯು ಮತ್ತೆ ಯಾರಿರುವರು? ಕಮಲಕ್ಕಾ, ಎಲ್ಲಿ ಶುದ್ಧಪ್ರೇಮವಿದೆಯೋ ಅಲ್ಲಿಯೇ ಸಿಟ್ಟು-ಸೆಡವುಗಳಿಗೆ ಮಹತ್ವವು. ಬಹು ದಿನಗಳಿಂದ ನನ್ನ ಪತ್ರವು ನಿನಗೆ ಬಾರದ್ದರಿಂದ ನೀನು ಕಡು ಚಿಂತೆಗೊಳಗಾಗಿರಬಹುದು; ಆದರೆ ನನ್ನ ಬಗ್ಗೆ ಯೋಚಿಸಲಿಕ್ಕೆ ಪರಮೇಶ್ವರನಿರುವನು. ನಾನು ಆತನ ಮೇಲೆಯೇ ಸಂಪೂರ್ಣ ಭಾರ ಹಾಕಿರುವೆನು. ಅದರಿಂದ ನೀನು ನನ್ನ ವಿಷಯದ ಯೋಚನೆಯನ್ನು ಬಿಟ್ಟುಬಿಡು. ನಿನ್ನ ಅಮೂಲ್ಯ ಸಮಯವನ್ನು ನನಗಾಗಿ ಹಾಳುಮಾಡಿಕೊಳ್ಳಬೇಡ.

ಕಮಲಕ್ಕಾ, ನೀನು ನಿನ್ನ ಪ್ರತಿಯೊಂದು ಪತ್ರದಲ್ಲಿ "ನಿನ್ನ ನೆಗೆಣ್ಣಿಯು ನಿನಗೇನಾದರೂ ಬಿರಿ ಮಾತನಾಡಿದರೊ ನೀನು ಶಾಂತಳಾಗಿರೆ"ಂದು ಉಪದೇಶಿಸುತ್ತಿರುತ್ತೀ; ಆದರೆ ಆ ವಿಷಯದ ನನ್ನ ವಿಚಾರಗಳನ್ನು ನಿನಗೆ ಸಮಕ್ಷವೇ ತಿಳಿಸಿರುತ್ತೇನೆ. ಇನ್ನು ಆ ಬಗ್ಗೆ ಮತ್ತೆ ಯೋಚಿಸಬೇಕಾದ ಅವಶ್ಯಕತೆಯೇ ಇರುವುದಿಲ್ಲ. ಅಕ್ಕಾ, ನನ್ನ ನೆಗೆಣ್ಣಿಯರು ತಮ್ಮ ತಿಳುವಳಿಕೆಯ ಮೇರೆಗೆ ತುಸ ಹೆಚ್ಚು ಮಾತನಾಡಿದರೆ ಇಲ್ಲವೆ ಮನೆಯೊಳಗಿನ ಹಿರಿಯರು ನಮ್ಮ ಕಿವಿಗೆ ಹರಳು ಹಚ್ಚಬಂದರೆ, ಅದನ್ನು ನಾವು ಶಾಂತಚಿತ್ತದಿಂದ ಸಹಿಸದಿದ್ದರೆ ಸುಶಿಕ್ಷಿತರಾದ ನಾವು ಏನು ಮಾಡಿದಂತಾಗುವದು? ಕಮಲಕ್ಕಾ, ಏನಾದರೂ ನಾನು ಅತ್ತೆಯ ಮನೆಯ ಸೊಸೆಯಾಗಿದ್ದೇನೆ. ನಮ್ಮ ಮನೆಯಲ್ಲಿ ಹಿರಿಯರಾದ ಭಾವ-ನೆಗೆಣ್ಣಿಯರಿರುತ್ತಾರೆ. ನಾವು ಬಹು ಕಲಿತವರೆಂದೂ ಸ್ವಂತದ ಮಟ್ಟಿಗೆ ಬಹು ಬುದ್ಧಿವಂತರೆಂದೂ ತಿಳಕೊಳ್ಳುತ್ತಿದ್ದರೂ, ಹಿರಿಯರ ಅನುಭವವು ಒಂದು ವಿಶಿಷ್ಟ ಪ್ರಕಾರದ್ದೇ ಆಗಿರುತ್ತದೆ. ಅದು ಕೇವಲ ಪುಸ್ತಕ ಪಠಿಸುವದರಿಂದ ಬರುವದಲ್ಲ. ಇತ್ತೀಚೆಗೆ ನಮ್ಮ ಜನರಲ್ಲಿ ವಿಭಕ್ತವಿರಬೇಕೆಂಬ ಹವ್ಯಾಸವು ಮಿತಿಮೀರತೊಡಗಿದೆ. ಅದಕ್ಕೆ ಕಾರಣವಾದರೂ ನಮ್ಮಗಳ ಜಾಗತಿಕ ಅನುಭವದ ಅಭಾವವೇ ಆಗಿದೆ. ಅಲ್ಪ ಸ್ವಲ್ಪ ಇಂಗ್ಲಿಷ ಓದು-ಬರೆಯಲಿಕ್ಕೆ ಬರಹತ್ತಿತೆಂದರೆ, ಈಗಿನ ಹುಡುಗೆಯರಿಗೆ ತಾವು ಮಹಾ ಪಂಡಿತೆಯರಾದೆವೆಂದೆನಿಸಹತ್ತುತ್ತದೆ. ಅಂಥ ಹುಡುಗೆಯರು ಮೊದಲನೇ ಸಾರೆ ಅತ್ತೆಯ ಮನೆಗೆ

ಹೋದಕೂಡಲೆ ಅಲ್ಲಿಯ ಹಿರಿಯರು ಅವರ ದೃಷ್ಟಿಯಿಂದ ತೀರ ಕಾಡು ಮೃಗ ಗಳಂತೆ ತೋರುವರು. ಆ ಮನೆಯೊಳಗೆ ಬುದ್ಧಿವಂತಳೂ ಪ್ರಗಲ್ಭ ವಿಚಾರದವಳೂ ಆದ ಹೆಂಗಳೆಯು ತಾನೊಬ್ಬಳೇ ಎಂದು ಅವಳಿಗೆ ಅನಿಸಹತ್ತುತ್ತದೆ. ಆ ಬಳಿಕ ರೀತಿ-ರಿವಾಜುಗಳಿಗಾಗಿ ಮನೆಯ ಹಿರಿಯರು ಅವಳಿಗೆ ಏನಾದರೂ ಹೇಳಹತ್ತಲು, "ನಾನು ಇಷ್ಟು ಕಲಿತ ಮಹಿಳೆಯು. ಇಂಥ ನನಗೆ ಈ ಕಾಡು ಮೃಗಗಳೇನು ಕಲಿಸ ಬರುವರು?" ಎಂಬದಾಗಿ ತಮ್ಮ ಕಿರಿಬುದ್ಧಿಗೆ ತೋಚಿದಂತೆ ಅನ್ನುತ್ತ, ಒಳಗಿಂದೊ ಳಗೆ ಚಡಪಡಿಸಹತ್ತುತ್ತಾರೆ. ಕರ್ಮಧರ್ಮ ಸಂಯೋಗದಿಂದ ಅವರ ಗಂಡಂದಿರ ಸವಾರಿಯೂ ಅಷ್ಟೇ ಅರೆ ದಡ್ಡ ಅಥವಾ ಹೆಣ್ಣುಗಳ್ಳನದಾಗಿದ್ದರಂತೂ ಮುಗಿದೇ ಹೋಯಿತು! ನಾಲ್ಕು ದಿನ ಆ ನೂತನ ದಂಪತಿಗಳು ಯಾವುದೊಂದು ಬಾಡಿಗೆಯ ಮನೆಯಲ್ಲಿ ಒಳ್ಳೇ ಶಿಸ್ತಿನಿಂದಿರುವಂತೆ ಕಂಡರೂ, ಕಡೆಗೆ ಹಿಂಡಿನಿಂದಗಲಿದ ಕುರೀ ಮರಿಗಳಂತೆ ಅವರ ದುರ್ದಸೆಯಾಗುತ್ತದೆ. ಮನೆಯ ಹಿರಿಯ ಜನರು ಈ ಸಂಸಾರವೆಂಬ ಸಾಗರದಲ್ಲಿ ಹಲವು ಸಾರೆ ಗುಟುಕು ನೀರು ಕುಡಿದು ಅನುಭವ ಗಂಡಿರುತ್ತಾರೆ. ಅವರ ಸಾಂಸಾರಿಕ ಅನುಭವದ ಶತಾಂಶವು ಕೂಡ ನಮ್ಮ ಬಿ. ಏ, ಎಂ. ಏ. ಗಳ ವರೆಗೆ ಕಲಿತ ಹೆಂಗಳೆಯರಿಗೆ ಬರಲಿಕ್ಕಿಲ್ಲ. ಕಮಲಕ್ಕಾ, ನೀನು ನನ್ನ ಬಗ್ಗೆ ಕೊಂಚವೂ ಚಿಂತಿಸಬೇಡ. ನಾನು ಹಿಂಡನ್ನಗಲಿ ಹೋದ ಕುರೀ ಮರಿ ಯಂತೆ ತಾಳಗೆಟ್ಟಿರುವದಿಲ್ಲ. ನಾನು ಅಲ್ಪ ಸ್ವಲ್ಪ ಕಲಿತ ಹುಡುಗೆಯು. ನನ್ನ ನೆಗೆಣ್ಣಿಯರು ಕಲಿತವರಿರದಿದ್ದರೂ, ಸಂಸಾರದ ಅನುಭವವನ್ನು ಹೆಚ್ಚಾಗಿ ಹೊಂದಿ ದವರು. ನನ್ನ ಸಂಸಾರದ ಅನುಭವಕ್ಕೆ ಈಗ ತಾನೇ ಪ್ರಾರಂಭವಾಗಿದೆ.

ಕಮಲಕ್ಕಾ, ನಾನು ನಿನಗೆ ಒಂದು ಮಾತು ಹೇಳುವೆನು. ನಮ್ಮ ಕೊರಳಲ್ಲಿ ಮಾಂಗಲ್ಯವು ಬಂಧಿಸಲ್ಪಡುವ ವರೆಗೆ ನಮ್ಮ ಹುಡುಗೆಯರ ಜನ್ಮವು ಹಾರುವ ಹಕ್ಕಿ ಯಂತಿರುತ್ತದೆ. ನಾವು ಆ ಕೌಮಾರ್ಯಕಾಲವನ್ನೇ ನಿರಾಲೋಚನೆಯಲ್ಲಿ ಕಳೆಯುವ ದಿರುತ್ತದೆ; ಆದರೆ ಅಕ್ಕಾ, ನಮ್ಮಗಳ ತಲೆಯ ಮೇಲೊಮ್ಮೆ ಮಂಗಲಾಕ್ಷತೆಗಳು ಬಿದ್ದವೆಂದರೆ ಹಾಗು ಕಿವಿಗೆ ಗೊಗ್ಗರ ಧ್ವನಿಯ ಆ ಭಟ್ಟರ "ಸುಮುಹೂರ್ತೇ ಸಾವಧಾನ" ಎಂಬ ಶಬ್ದಗಳು ಕೇಳಿಸಿ ಈ ಸಂಸಾರವು ನಮ್ಮ ಡುಬ್ಬಕ್ಕೆ ಹತ್ತಿತೆಂದರೆ, ಆ ಮೇಲೆ ನಾವುಗಳು ಸುಖ-ದುಃಖಗಳ ಬಗ್ಗೆ ಕೊಂಚವೂ ಯೋಚಿಸಲಾಗದು. ಈ ಸಂಸಾರದಲ್ಲಿ ತೊಡಗಿಕೊಂಡವರಲ್ಲಿ ಇದು ವರೆಗೆ ಅದಾರು ಸುಖಿಗಳಾಗಿರುತ್ತಾರೆ? ಅಂತೆಯೇ ಸಂಸಾರತಾಪದಿಂದ ತೊಳಲಿದ ಹಲವರು ದೇವರೇ, ಸ್ವಾಮಿ, ನನ್ನನ್ನು ಕೃಪಾದೃಷ್ಟಿಯಿಂದ ನೋಡೆಂದು ಅಡಿಗಡಿಗೂ ಪ್ರಾರ್ಥಿಸಿರುತ್ತಾರೆ. ಈ ಸಂಸಾರ ವೆಂದರೆ, ನಾನಾ ಪ್ರಕಾರದ ದುಃಖಗಳಿಂದ ಕೂಡಿದ ಮಾಯೆಯ ಸಂತೆಯು! ಅಂ ತೆಯೇ ಅದರ ಲೋಭವನ್ನು ತ್ಯಜಿಸಬೇಕೆಂದು ಇದುವರೆಗೆಷ್ಟೋ ಮಹಾನ್ ಮಹಾನ್ ಸತ್ಪುರುಷರು ಜಗತ್ತಿಗೆ ಉಪದೇಶ ಮಾಡಿರುತ್ತಾರೆ. ಅಂದ ಬಳಿಕ ಕಮಲಕ್ಕಾ, ನೀನು ನನ್ನ ಬಗ್ಗೆ ಇನ್ನು ಯೋಚಿಸುವ ಕಾರಣವೇನು? ಸಂಸಾರ

ಸಾಗರದಲ್ಲಿ ಈಸಬಿದ್ದ ನನ್ನ ಜೀವನ ನೌಕೆಯು ಪ್ರಸಂಗಗಳೆಂಬ ವಾಯುವಿನ ತರಂಗಗಳಿಂದ ಅಲೆದಾಡುತ್ತ ಹೇಗಾದರೊಮ್ಮೆ ಪರತೀರವನ್ನು ಹೊಂದತಕ್ಕದ್ದೇ. ಆದರಿಂದ ಅದರ ಬಗ್ಗೆ ಯೋಚಿಸುತ್ತ ಕೂಡ್ರುವದರಲ್ಲಿ ಏನೂ ಅರ್ಥವಿಲ್ಲ; ಆದರೆ ಕಮಲಕ್ಕಾ, ನಿನ್ನ ಕ್ಷೇತ್ರವು ಮಾತ್ರ ತೀರ ಭಿನ್ನವಾಗಿದೆ. ನೀನು ನಿನ್ನ ಉಚ್ಚ ಧ್ಯೇಯ ಸಾಧನೆಗಾಗಿ ಮಾಯೆಯ ಎಲ್ಲ ಪಾಶಗಳನ್ನು ಬದಿಗಿರಿಸಿ, ಸ್ವದೇಶದಿಂದ ಸಾವಿರಾರು ಮೈಲು ದೂರದ ಪ್ರದೇಶಕ್ಕೆ ಹೋಗಿರುತ್ತೀ. ಆದರಿಂದ ನಿನ್ನ ಚಿತ್ತಕ್ಕೆ ನನ್ನಂತಹ ಸಾಂಸಾರಿಕರ ಚಿಂತೆಯು ಸ್ಪರ್ಶವಾಗಗೊಳಿಸಕೂಡದು. ಕಮಲಕ್ಕಾ, ನನ್ನಂತಹಳು ಇದ್ದರೇನು-ಸತ್ತರೇನು? ಎಲ್ಲವೂ ಒಂದೇ. ನನ್ನ ಇರುವಿಕೆಯಿಂದ ಜಗತ್ತಿಗೆ ಆವ ಉಪಯೋಗವೂ ಇರುವದಿಲ್ಲ; ಅಥವಾ ನನ್ನ ಮರಣದಿಂದಲೂ ಜಗತ್ತಿಗೆ ಯಾವ ಹಾನಿಯೂ ಆಗುವಂತಿಲ್ಲ; ಆದರೆ ಯಾವ ಧ್ಯೇಯವನ್ನು ಸಂಕಲ್ಪಿಸಿ ಕೊಂಡು ನೀನು ಪರದೇಶಕ್ಕೆ ಹೋಗಿರುತ್ತೀಯೋ, ಆ ಧ್ಯೇಯ ಸಾಧನೆಗಾಗಿ ನಿನ್ನ ರಕ್ತದ ಪ್ರತಿಯೊಂದು ಬಿಂದುವೂ ಅಮೂಲ್ಯವಾಗಿದೆ. ನೀನು ನಿನ್ನ ತಂದೆ-ತಾಯಿಗಳಿಗೆ ಒಬ್ಬಳೇ ಒಬ್ಬಳಾದ ಪ್ರೀತಿಯ ಕುಮಾರಿಯು. ನೀನು ಈ ಕುಮುದಿನಿಯೊಬ್ಬಳ ಜೀವದ ಗೆಳತಿಯಂತಾಗಿರದೆ, ಸಾವಿರಾರು ಅನಾಥ ಜೀವಿಗಳನ್ನು ದುಃಖದಿಂದ ಮುಕ್ತಗೊಳಿಸುವ ಭಾವೀ ಕಾಲದ ಒಬ್ಬ ಮಾನವ ಸೇವಿಕೆಯಾಗಿರುತ್ತೀ. ನಿನ್ನಿಂದ ನಿನ್ನ ಕುಲವನ್ನುದ್ಧರಿಸುವಂತಹ ಒಂದು ಬಹು ದೊಡ್ಡ ಕಾರ್ಯವು ಜರುಗಬೇಕಾಗಿದೆ. ನಿನಗೆ ದೇವತ್ವದ ಕಳೆಯುಂಟಾಗಬೇಕಾಗಿದೆ. ಆದುದರಿಂದ ಕಮಲಕ್ಕಾ, ನೀನು ಕುಮುದಿನಿಯ ಅಥವಾ ಇನ್ನಾರ ವಿಷಯದ ಆಲೋಚನೆಯಲ್ಲಿ ನಿನ್ನ ಸುಸಮಯವನ್ನು ಕಳೆಯಲಾಗದು. ನೀನು ನಿನ್ನ ಅಭ್ಯಾಸದ ಕಡೆಗೆ ಚಿತ್ತವಿರಿಸು. ಸುಜ್ಞಾನವನ್ನು ಸಂಪಾದಿಸು; ಮತ್ತು ಪರಕೀಯರು ನಿನ್ನ ವರ್ತನದ ಕಡೆಗೆ ನೋಡಿ:—"ಆರ್ಯ ಕುಮಾರಿಯರು ನಿಜವಾಗಿಯೂ ಆದರ್ಶಪ್ರಾಯರಾಗಿರುತ್ತಾರೆ"ಂದು ಅನ್ನುವಂತೆ ನಿನ್ನ ವರ್ತನವನ್ನಿಟ್ಟುಕೋ. ಯಾವ ಜನತಾಜನಾರ್ದನನ ಸೇವೆಯ ಸದಿಚ್ಛೆಯಿಂದ ನೀನು ಇಷ್ಟು ದೂರ ಹೋಗಿರುವೆಯೋ, ಆ ಸದಿಚ್ಛೆಯೇ ನಿನ್ನ ಮೇಲೆ ಎಡಬಿಡದೆ ಪಹರೆ ಮಾಡುವದು; ಮತ್ತು ಅದೇ ನಿನ್ನನ್ನು ಬೇಗನೆ ವಿದ್ಯಾಭೂಷಿತೆಯನ್ನಾಗ ಮಾಡಿ ಸ್ವದೇಶಕ್ಕೆ ತಿರುಗಿ ತಂದೀತು. ಕಮಲಕ್ಕಾ, ನೀನು ಇನ್ನು ಈ ಕುಮುದಿನಿಯ ಬಗ್ಗೆ ಹೆಚ್ಚು ಯೋಚಿಸಬೇಡ. ನಿನ್ನ ನನ್ನ ಅವಲಂಬನಗಳಲ್ಲಿ ಭೂಮ್ಯಾಕಾಶದಷ್ಟು ಅಂತರವಿದೆ. ನನ್ನ ಧ್ಯೇಯದಂತೆ ನಾನು ಸುಖ-ದುಃಖಗಳನ್ನನುಭವಿಸಬೇಕಾಗುವದು. ನಾನು ಈಗಾಗಲೇ ಜಗಚ್ಚಕ್ರದಲ್ಲಿ ಸಿಲುಕಿಬಿಟ್ಟಿರುವೆನಾದುದರಿಂದ, ಇನ್ನು ನನ್ನ ಬಗ್ಗೆ ಯೋಚಿಸುವುದೇನು? ಆದರೆ ನೀನು ಮಾತ್ರ ನಿನ್ನ ಮನಸ್ಸನ್ನು ಅದಾವ ಕಾರಣದಿಂದಲೂ ಚಲಿಸಗೊಡಬೇಡ; ಮತ್ತು ಅದಕ್ಕೆ ಸುಲಭವಾದ ಉಪಾಯವೆಂದರೆ, ಕೆಲ ಕಾಲದ ವರೆಗೆ ನೀನು ನಮ್ಮಗಳನ್ನು ಸಂಪೂರ್ಣವಾಗಿ ಮರೆತುಬಿಡು. ನನಗೋಸ್ಕರ ನೀನು ಎಷ್ಟು ಕಳವಳಪಡುತ್ತೀ

ಎಂಬದು ನಿನ್ನ ಪ್ರತಿಯೊಂದು ಪತ್ರದಿಂದ ನನಗೆ ತಿಳಿಯುತ್ತಿದೆ; ಆದರೆ ಕಮಲಕ್ಕಾ, ನೀನು ಹಾಗೆ ಮಾಯಾಪಾಶದಲ್ಲಿ ತೊಡಗಿಕೊಳ್ಳಬೇಡ. ಲೋಕಕಾರ್ಯಕ್ಕಾಗಿ ಮೀಸಲಾದ ಆತ್ಮವು ಈ ಸಂಸಾರದೊಳಗಿನ ಮಾಯೆಯ ಬಂಧನಗಳಿಂದ ಸಾಧ್ಯವಾದಷ್ಟು ಪ್ರತ್ಯೇಕನಾಗಿರಬೇಕು. ನಾನು ಒಳ್ಳೇ ಸುಖಿಯಾಗಿರುತ್ತೇನೆ. ನನ್ನ ವಿಷಯದ ಯಾವ ಚಿಂತೆಯನ್ನೂ ನೀನು ಮಾಡಬೇಡ. ನನ್ನನ್ನು ಸಂಸಾರ ಬಂಧನವು ವೇಷ್ಟಿತನಾಗಿರುವುದರಿಂದ ನನ್ನಿಂದ ಪತ್ರ ಬರೆಯಲಿಕ್ಕೆ ತಡವಾದರೆ ಇಲ್ಲವೆ ಅದು ಬಾರದಿದ್ದರೂ ನೀನು ಕೊಂಚವೂ ಯೋಚಿಸಬೇಡ. ನಾನು ನನ್ನ ದೇಶದಲ್ಲಿ, ನನ್ನ ಜನರೊಳಗೆ, ನನ್ನ ಮನೆಯಲ್ಲಿ ಇರುತ್ತೇನೆ. ಆದರಿಂದ ನನ್ನ ಬಗ್ಗೆ ಚಿಂತಿಸುವ ಆವಶ್ಯಕತೆಯೇ ಇರುವದಿಲ್ಲ. ನಿನ್ನ ಯೋಚನೆಯನ್ನೇ ನಾವು ಮಾಡಬೇಕಾಗುವುದು. ಆದರಿಂದ ನಿನ್ನ ಕ್ಷೇಮ ಸಮಾಚಾರದ ನಾಲ್ಕು ಸಾಲುಗಳನ್ನು ನಿನಗೆ ಅವಕಾಶ ದೊರೆತಾಗ ತಿಂಗಳು ಹದಿನೈದು ದಿನಗಳಿಗೊಮ್ಮೆ ಬರೆದು ತಿಳಿಸುತ್ತಿರು ಕಮಲಕ್ಕಾ, ನಾನಿನ್ನು ನಿನ್ನ ಹೆಚ್ಚು ಸಮಯವನ್ನು ಹಾಳು ಮಾಡುವುದಿಲ್ಲ. ನೀನು ನಿನ್ನ ತನುಮನಗಳನ್ನೆಲ್ಲ ನಿನ್ನ ಅಭ್ಯಾಸದ ಕಡೆಗೇ ಹಚ್ಚು; ಹಾಗು ಪರೀಕ್ಷೆಯಲ್ಲಿ ಉತ್ತಮರೀತಿಯಿಂದ ಉತ್ತೀರ್ಣಳಾಗಿ ಸ್ವದೇಶಕ್ಕೆ ಹೊರಟು ಬಾ. ನೀನು ಮರಳಿ ಬರುವ ಮೊದಲೇ ಭವಿತವ್ಯವು ನನ್ನ ಜೀವನ ಪ್ರವಾಸವನ್ನು ಮುಗಿಸಿ, ನನ್ನನ್ನು ಪರಂಧಾಮಕ್ಕೆ ಒಯ್ದರೆ, ನೀನು ನನಗಾಗಿ ದುಃಖಿಸಕೂಡದು. ಈ ಲೋಕದ ಅಸ್ಥಿರ ವಾತಾವರಣದಲ್ಲಿ ಶಾಶ್ವತವಾದುದಾವುದೂ ಇರುವುದಿಲ್ಲವೆಂಬದನ್ನು ಲಕ್ಷ್ಯದಲ್ಲಿಟ್ಟು, ನೀನು ನನಗಾಗಿ ಹಳಹಳಿಸಬೇಡ. ನಿನ್ನ ಉತ್ಕರ್ಷದ ಕೀರ್ತಿಗೀತಗಳನ್ನು ಈ ಜಗತ್ತಿನಲ್ಲಿ ಆಲಿಸುವ ಸುಯೋಗವಿರದಿದ್ದರೂ, ಸ್ವರ್ಗದೊಳಗಿದ್ದ ನನ್ನ ಆತ್ಮವು ನಿನ್ನ ಉತ್ಕರ್ಷವನ್ನು ಕೇಳಿ ಆನಂದದಿಂದ ನಲಿದಾಡಿ, ನಿನ್ನ ಮೇಲೆ ಶುಭಾಶೀರ್ವಾದಗಳ ವೃಷ್ಟಿಗರೆದೀತು. ಕಮಲಕ್ಕಾ, ನಾನು ಹೇಳಿದುದೆಲ್ಲವನ್ನೂ ಚೆನ್ನಾಗಿ ಲಕ್ಷ್ಯದಲ್ಲಿಡು; ಹಾಗು ನೀನು ನಿನ್ನ ಧ್ಯೇಯದಿಂದ ಒಂದಿಷ್ಟೂ ಚಲಿಸಬೇಡ. ದೇವರು ನಿನ್ನನ್ನು ಚಿರಸುಖಿಯನ್ನಾಗಿರಿಸಲಿ! ನಿನ್ನ-ಕುಮುದಿನಿ.

ಪತ್ರ ಓದುವುದಾದ ಕೂಡಲೆ ಕಮಲೆಯ ಅಂತಃಕರಣವು ಉಕ್ಕೇರಿಬಂತು; ಮತ್ತು ಆವಳ ಕಣ್ಣುಗಳಿಂದ ಅಶ್ರುಗಳು ಧಾರೆಗಟ್ಟಿ ಸುರಿಯತೊಡಗಿದವು ಅದನ್ನು ಕಂಡು ಮಿಸ್ ಮೇರಿಯು ಭಯವಿಹ್ವಲಳಾಗಿ: ಕಮಲಾ ನೀನು ಅಳುವದೇಕೆ? ಈ ಪತ್ರದಲ್ಲಿ ಅಂಥದೇನು ಸಂಗತಿಯಿದೆ?

ಬಳಿಕ ಕಮಲೆಯು ಮಿಸ್ ಮೇರಿಗೆ ಆ ಪತ್ರದ ಇಂಗ್ಲಿಷ ಭಾಷಾಂತರ ಮಾಡಿ ಹೇಳಿ, ಈ ಪತ್ರದೊಳಗಿನ ಪ್ರತಿಯೊಂದು ಶಬ್ದಕ್ಕಾಗಿ ನಾನು ಒಂದೊಂದು ತಾಸು ಯೋಚಿಸಿದರೂ ಸಾಕಾಗದು, ಮತ್ತು ನಮ್ಮ ಕುಮುದಿನಿಯ ಗುಣಪೂರ್ಣತೆಯ ಮರ್ಮವು ತಿಳಿಯಲಾರದು, ಎಂದೆನ್ನಲು, ಆ ಪತ್ರದ ಸಂಗತಿ ಕೇಳಿ ಮೇರಿಗೂ ಬಹು ಸಮಾಧಾನವಾಯಿತು.

ಅಷ್ಟರಲ್ಲಿ ಕ್ಲಬ್ಬಿಗೆ ಹೋಗುವ ಹೊತ್ತಾಗಲು, ಕಮಲೆಯೂ ಮೇರಿಯೂ ಕ್ಲಬ್ಬಿಗೆ ಹೋದರು. ಕಮಲೆಯು ಹುಟ್ಟಾ ಸುಶೀಲಳೂ ಪ್ರೇಮಲ ಸ್ವಭಾವದವಳೂ ಇದ್ದುದರಿಂದ, ಅವಳ ಬಗ್ಗೆ ಕ್ಲಬ್ಬಿನೊಳಗಿನ ಪ್ರತಿಯೊಬ್ಬ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ವಿಶೇಷ ಆದರವೆನಿಸುತ್ತಿತ್ತು. ಆದರಿಂದ ಅಂದಿನ ಅವಳ ಮ್ಲಾನವದನವನ್ನು ನೋಡಿ ವಿಶೇಷ ಪ್ರಕಾರವೇನೆಂದು ಅವರೆಲ್ಲರೂ ಅವಳಿಗೆ ಕೇಳಹತ್ತಿದರು. ಆಗ ಮೇರಿಯು ಕುಮುದಿನಿಯಿಂದ ಬಂದ ಪತ್ರದ ಸಂಗತಿಯನ್ನು ಅವರೆಲ್ಲರಿಗೂ ತಿಳಿಸಿದಳು. ಆದನ್ನು ಕೇಳಿ ಒಬ್ಬ ವಿದ್ಯಾರ್ಥಿಯು:—'ಮಿಸ್ ಕಮಲಾ, ನಾವು ಇಂಥ ವೃತ್ತಿಯ ಜನರನ್ನೇ ವಿಶೇಷವಾಗಿ ಆದರಿಸುತ್ತೇವೆ. ನಿಮ್ಮ ಗೆಳತಿಯು ತನ್ನ ಪತ್ರದಲ್ಲಿ ಬರೆದ ವಿಚಾರಗಳು ಎಷ್ಟು ಉದಾತ್ತವಿರುವವು! ಯಾವ ದೇಶದಲ್ಲಿ ಇಂಥ ವೃತ್ತಿಯ ಸ್ತ್ರೀಯರು ಹುಟ್ಟಿಬರುವರೋ, ಅದೇ ದೇಶವು ಉತ್ಕರ್ಷಗಾಮಿಯಾಗುವದು. ಭಲೆ! ನಿಮ್ಮ ಗೆಳತಿಯ ವಿಚಾರಗಳಿಂದ ನಿಮ್ಮ ಆರ್ಯಸಂಸ್ಕೃತಿಯು ಎಷ್ಟು ಶ್ರೇಷ್ಠವಿದೆಯೆಂಬದು ಸಹಜವಾಗಿ ತಿಳಿಯುವಂತಿದೆ.'' ಎಂದು ಅಂದನು.

''ನಮ್ಮ ವಿಷಯಕ್ಕೆ ನಿಮಗಿಷ್ಟು ಆದರವೆನಿಸುವದನ್ನು ನೋಡಿ ನನಗೆ ಪರಮ ಸಂತೋಷವೆನಿಸುತ್ತದೆ.'' ಕಮಲೆಯು ಹೇಳಿದಳು.

''ಮಿಸ್ ಕಮಲಾ, ನಮಗೆ ನಿಮ್ಮಗಳ ಬಗ್ಗೆ ಆದರವೇಕೆನಿಸಬಾರದು? ನೀವು ನಿಮ್ಮ ದೇಶವನ್ನು ಬಿಟ್ಟು ನಮ್ಮ ದೇಶಕ್ಕೆ ಬಹು ವಿಶ್ವಾಸಪೂರ್ವಕವಾಗಿ ಬರುತ್ತಿರಲು, ನಾವು ನಿಮ್ಮೊಡನೆ ಆದರಪೂರ್ವಕವಾಗಿ ವರ್ತಿಸುವದು ನಮ್ಮ ಪವಿತ್ರ ಕರ್ತವ್ಯವೇ ಆಗಿದೆ''.

ಆ ವಿದ್ಯಾರ್ಥಿಯ ಆ ನುಡಿಗಳನ್ನು ಕೇಳಿ ಕಮಲೆಯು:—''ಆದರೆ ನಮ್ಮ ಹಿಂದುಸ್ಥಾನಕ್ಕೆ ಬಂದ ನಿಮ್ಮ ಜನಗಳ ವರ್ತನವು ಇದಕ್ಕೆ ತೀರ ವಿಪರೀತವಾಗಿ ಅನುಭವಕ್ಕೆ ಬರುತ್ತದೆ.''

ಅದಕ್ಕೆ ಮೇರಿಯು ಮೆಲ್ಲನೆ:—''ಅಲ್ಲಿಯ ನಮ್ಮ-ನಿಮ್ಮಗಳ ಸಂಬಂಧವೇ ಬೇರೆಯಾಗಿರುವುದಲ್ಲವೇ? ಅದಕ್ಕೇ ಪೂರ್ವ ಮತ್ತು ಪಶ್ಚಿಮಗಳ ಅಂತರವೆನ್ನಬಹುದು.''

---

## ದೂಡಿವಳನ್ನು ಹೊರಗೆ!

ನಿರ್ಮಲೆಯು ನರ್ಮದೆಯ ಮನೆಗೆ ಹೋಗಿ ಆಕೆಗೆ ಕುಮುದಿನಿಯ ಬಗ್ಗೆ ಇಲ್ಲದ್ದೊಂದು ಹೇಳಿ ಆಕೆಯನ್ನು ಗಾಬರಿಗೊಳಿಸಿ, ಅವಳಿಂದ ಅವಳ ಸ್ವಂತದ ಆಭರಣಗಳ ಡಬ್ಬಿಯನ್ನು ಎತ್ತಿಹಾಕಿಕೊಂಡು ಬಂದ ಸಂಗತಿಯನ್ನು ನಮ್ಮ ವಾಚಕರು ಈ ಮೊದಲೇ ತಿಳಿದಿರುವರು. ಬಳಿಕ ನಿರ್ಮಲೆಯು ಆ ಡಬ್ಬಿಯನ್ನು ಕಮಲಾಕಾಂತನಿಗೆ ತೋರಿಸಿ, ಅಲ್ಲಿ ತಾನು ಮಾಡಿ ಬಂದ ಕಾರಸ್ಥಾನವನ್ನು ತಿಳಿಸಿದಳು. ಅದನ್ನು

ಕೇಳಿ ಕಮಲಾಕಾಂತನು ಪ್ರಸನ್ನಚಿತ್ತದಿಂದ ನಿರ್ಮಲೆಯನ್ನು ಹತ್ತರ ಎಳೆದು ಕೊಂಡು ಚುಂಬಿಸಿ: ನಿರ್ಮಲೇ, ನೀನು ಇದೇನು ಹೊಸ ಗೊಂದಲವೆಬ್ಬಿಸಿದೆ? ಹೋಗು, ಮೊದಲು ಆ ತಲೆಬಾಗಿಲವನ್ನಿಕ್ಕಿಕೊಂಡು ಬಾ. ಯಾರಾದರೂ ನೋಡಿ ದರೆ, ನಿನ್ನೊಡನೆ ನನ್ನ ಕೈಗೂ ಕಬ್ಬಿಣ ಬಳೆಗಳು ಬಂದಾವು!

'ಸಾಧುಗಳೇ....' ನಿರ್ಮಲೆಯು ಕಮಲಾಕಾಂತನ ಮುಖದ ಕಡೆಗೆ ತುಚ್ಛತಾ ಪೂರ್ವಕವಾಗಿ ನೋಡುತ್ತ:—"ನೀವು ಇಷ್ಟು ಹೇಡಿಗಳು ಹೇಗೆ ಆದಿರಿ? ನಾನು ಹುಟ್ಟಾಹೆಂಗಸಾದರೂ ನಿಮಗಿಂತ ಎಷ್ಟೋ ಮೇಲೆನ್ನಬಹುದು. ನಿಮಗೆ ಎಲ್ಲವೂ ಬೇಕು; ಆದರೆ ಅವುಗಳನ್ನು ಸಂಪಾದಿಸಿ ದಕ್ಕಿಸಿಕೊಳ್ಳುವ ಧೈರ್ಯವು ಮಾತ್ರ ನಿಮ್ಮಲ್ಲಿಲ್ಲವಲ್ಲ!"

"ನಿರ್ಮಲೇ, ಖೊಟ್ಟಿ ನಾಣ್ಯವು ಖಣ್ಣಖಣ್ಣೆಂದು ಹೇಗೆ ಶಬ್ದವಾದೀತು? ಕಳ್ಳನು ಬೇಕಾದಷ್ಟು ಧೈರ್ಯದಿಂದ ಮಂದಿಯ ಮನೆಗೆ ಕನ್ನ ಹಾಕಿ ಅಲ್ಲಿಯ ಒಡವೆಗಳನ್ನು ಎತ್ತಿ ಹಾಕುತ್ತಿದ್ದರೂ ಆತನ ಮನಸ್ಸಿಗೆ ಸ್ವಾಸ್ಥ್ಯವಿರುವುದೇ? ಗಾಳಿ ಯಿಂದ ಯಾವುದೊಂದು ಮರದ ಎಲೆ ಉದುರಿ ಬಿದ್ದ ಸಪ್ಪಳವಾದರೂ ಅದರಿಂದ ಕೂಡಲೆ ಆತನ ಮನಸ್ಸು ಸಂಶಯಗೊಳ್ಳುತ್ತದೆ. ನಿರ್ಮಲೇ, ಇದ್ದಲಿಯ ವ್ಯಾಪಾರ ದಿಂದ ಕೈ ಕಪ್ಪೇ ಆಗುವದು ಸ್ವಾಭಾವಿಕವು; ಆದರೆ ಮಾಡುವದೇನು? ಈಗ ಧರಿ ಸಿದ ವೃತ್ತಿಯನ್ನುಬಿಡಲಾಗುವದಿಲ್ಲ; ಮತ್ತು ಹಚ್ಚಿಕೊಂಡ ಚಟವನ್ನೂ ಬಿಡಲಾ ಗುವದಿಲ್ಲ."

"ಸಾಧುಗಳೇ ಹಾಗಾದರೆ ನಾನು ನಿಮ್ಮೊ ಮಠಕ್ಕೆ ಬೆಂಕೀ ಹಚ್ಚಲ್ಯಾ?"

"ನಿರ್ಮಲೇ, ಇಂದಿಲ್ಲದಿದ್ದರೂ ಇನ್ನು ತುಸ ದಿನಗಳಲ್ಲಿಯೇ ಈ ನನ್ನ ಮಠದ ಅವಸ್ಥೆಯು ಹಾಗೆಯೇ ಆಗಲಿರುವದು. ನಾನು ನನ್ನ ಆಯುಷ್ಯದ ಉತ್ತರಾರ್ಧವನ್ನು ಶ್ರೀ ಕಾಶೀ ವಿಶ್ವೇಶ್ವರನ ಚರಣ ಸನ್ನಿಧಿಯಲ್ಲಿಯೇ ಕಳೆಯಬೇಕೆಂದಿರುತ್ತೇನೆ. ಅದಿ ರಲಿ. ಇನ್ನು ಈ ಆಭರಣಗಳನ್ನೇನು ಮಾಡಬೇಕೆಂದಿರುತ್ತೀ? ನನ್ನ ಕೈಯಿಂದ ನರ್ಮದೆಗೆ ಕೊಡಿಸಬೇಕೆಂದಿರುವೆಯಾ?"

"ಇವುಗಳನ್ನು ತಿರುಗಿ ಕೊಡುವದಕ್ಕೆಂದು ನಾನಿಷ್ಟು ಕಾರಸ್ಥಾನ ನಡಿಸಿರು ತ್ತೇನೇನು? ಇನ್ನು ಈ ಬಂಗಾರದೊಳಗಿನ ಒಂದು ಗುಂಜಿ ತೂಕ ಬಂಗಾರವು ಕೂಡ ಆ ನರ್ಮದೆಯ ಕಣ್ಣಿಗೆ ಬೀಳಲಿಕ್ಕಿಲ್ಲ. ಸಾಧುಗಳೇ, ಈ ನಿರ್ಮಲೆಯು ನಿಮ್ಮಂತೆ ಇನ್ನೂ ಬಿಕ್ಕೆಬೇಡ ಹೊರಟಿಲ್ಲ."

"ನಿರ್ಮಲೇ, ನಾನಾದರೂ ಕೈಗೆ ಬಂದದ್ದನ್ನು ಕಳೆಯಲಿಕ್ಕೆಲ್ಲಿ ಸಿದ್ಧನಿರುವೆನು? ಆದರೆ ಈ ಆಭರಣಗಳನ್ನು ದಕ್ಕಿಸಿಕೊಳ್ಳುವ ಬಗೆ ಹೇಗೆ? ವಲ್ಲಭರಾಯನಿಗೆ ತಿಳಿದರೆ ಆ ಮೇಲೇನು ಮಾಡುವೆ?"

"ಅದೇ ಮುಖ್ಯ ಕೀಲವಿದೆ. ನರ್ಮದಕ್ಕನನ್ನು ಹೇಗೆ ಉಬ್ಬಿಸಬೇಕೆಂಬದೂ ವಲ್ಲಭರಾಯನಿಗೆ ಈ ಸಂಗತಿ ತಿಳಿಯದ ಹಾಗೆ ಹೇಗೆ ಯುಕ್ತಿ ಮಾಡಬೇಕೆಂಬದೂ

ನಾನು ಚೆನ್ನಾಗಿ ಅರಿತಿದ್ದೇನೆ. ನೀವು ಆ ಬಗ್ಗೆ ಕೊಂಚವೂ ಯೋಚಿಸುವ ಕಾರಣ ವಿಲ್ಲ. ಆ ನರ್ಮದೆ ಇದ್ದಾಳೆ; ನಾನಿದ್ದೇನೆ. ಈ ವಸ್ತುಗಳು ಹೇಗೆ ದಕ್ಕುವುದಿಲ್ಲೆಂಬ ದನ್ನು ನೋಡಿಕೊಳ್ಳುತ್ತೇನೆ."

"ಆದರೆ ನಿರ್ಮಲೇ, ಕುಮುದಿನಿಯ ಬಗ್ಗೆ ನೀನೇನು ಮಾಡಿದೆ? ಆ ಕುಮುದಿ ನಿಯ ಹೆಮ್ಮೆಯನ್ನೊಮ್ಮೆ ಇಳಿಸಬೇಕು. ಹಾಗೆ ಮಾಡದ ಹೊರತು ನನ್ನ ಅವ ಮಾನದ ಸೇಡು ತೀರಲಿಕ್ಕಿಲ್ಲ. ಅದರ ಹೇವವು ನನ್ನ ಪರಮ ಭಕ್ತಳಾದ ನಿನಗೆ ಇದ್ದೇ ಇರುವದು."

"ಮಹಾರಾಜರೇ, ನಾನು ಅವಳ ಗರ್ವವನ್ನು ಹೇಗಿಳಿಸುತ್ತೇನೆಂಬದನ್ನಾ ದರೂ ನೋಡಿರಿ."

'ನಿರ್ಮಲೇ, ಅದು ಹೇಗೆಯೋ ಆಗಲಿ; ಆದರೆ ಅವಳ ಗರ್ವವು ಈ ನಮ್ಮ ಮಠ ದಲ್ಲಿ ನನ್ನಿಂದಲೇ ಇಳಿಯಬೇಕು."

"ಸಾಕು-ಸಾಕು; ನಿಮ್ಮ ಬಾಯಿ ಮುಚ್ಚಿರಿ. ನಿಮ್ಮ ಕರಾಮತ್ತು ತಿಳಿದೇ ಹೋಗಿದೆ."

"ನಿರ್ಮಲೇ, ಇಂದು ನರ್ಮದೆಯು ಇಲ್ಲಿಗೆ ಬರುವಳೇನು?"

"ನಾನು ಕರೆಯಲಿಕ್ಕೆ ಹೋಗದ ಹೊರತು ಅವಳೇನು ಬರುವಳು? ಅವಳು ಬಂದ ಮೇಲೆ ಏನೇನು ಮಾತಾಡಬೇಕು? ಹೇಗೆ ಹೇಗೆ ವರ್ತಿಸಬೇಕು? ಎಂಬದನ್ನು ನಾನು ನಿಮಗೆ ಆ ಮೇಲೆ ಕಲಿಸಿಕೊಡುತ್ತೇನೆ."

"ಹಾಗಾದರೆ ನಿರ್ಮಲೆ, ಇಂದು ನಾನೂ ನೀನೂ ಬಹಳ ದಣಿದಿರುತ್ತೇವೆ. ಆದರಿಂದ ಇಂದು ನಮ್ಮ ಮಠದ ಬಾಗಿಲಿಗೆ ಬೀಗ ಹಾಕಿ, ನಾವು ಒಳಗೆ ಶ್ರಮಪರಿ ಹಾರದ ಸಂಜೀವಿನಿಗಳನ್ನು ಸೇವಿಸೋಣ ನಡೆ."

ನಿರ್ಮಲೆಯು ಸಾಧುವಿನ ಆಜ್ಞೆಯನ್ನು ಶಿರಸಾವಹಿಸಿದಳು.

† † † † † †

ನಿರ್ಮಲೆಯು ಆಭರಣಗಳ ಡಬ್ಬಿಯನ್ನು ತಕ್ಕೊಂಡು ಹೋದಬಳಿಕ ನರ್ಮ ದೆಯು ಅಟ್ಟದಿಂದ ಕೆಳಗಿಳಿದು ಬಂದು ಅಡಿಗೆಮನೆ, ನಡುಮನೆ ಮುಂತಾದವು ಗಳಲ್ಲಿ ಕುಮುದಿನಿಯನ್ನು ಶೋಧಿಸಿದಳು. ಎಲ್ಲಿಯೂ ಆಕೆಯು ಭೇಟಿಯಾಗ ದಾಗಲು, ಕುಮುದಿನಿಯ ಬಗ್ಗೆ ತಮ್ಮ ಮನೆಯ ದಾಸ-ದಾಸಿಯರನ್ನು ಕೇಳಿದಳು. ಅವರಾರಿಗೂ ಆಕೆಯ ವಿಷಯವು ತಿಳಿಯದ್ದರಿಂದ ಎಲ್ಲರೂ ಗೊತ್ತಿಲ್ಲವೆಂದರು. ಬಳಿಕ ಅವಳು ಬಾಗಿಲ ಬಳಿಗೆ ನಿಂತು, ಕುಮುದಿನಿಯು ಕಮಲಾಕಾಂತ ಸಾಧುಗಳ ಆಶ್ರಮವನ್ನು ಬಿಟ್ಟು ಮತ್ತಾರ ನಿವಾಸಕ್ಕೆ ತೆರಳಿದಳೋ ಎಂದು ಯೋಚಿಸತೊಡ ಗಿದಳು. ಅವಳು ಬಹಳ ಹೊತ್ತಿನ ವರೆಗೆ ಯೋಚಿಸಿದರೂ ಕುಮುದಿನಿಯು ಎತ್ತ ಹೋದಳೆಂಬದರ ಸುಳಿವು ಆಕೆಗೆ ಹತ್ತಲೊಲ್ಲದು. ಕಡೆಗೆ ಅವಳು ಒಳ್ಳೇ ಸಿಟ್ಟಿ ನಿಂದ ಮತ್ತೆ ಅಟ್ಟವನ್ನೇರುವ ಆಲೋಚನೆ ಮಾಡಿದಳು. ಅಷ್ಟರಲ್ಲಿ ಗುಂಡನು

ತನ್ನ ಮನೆಯನ್ನು ಸಂಪೂರ್ಣವಾಗಿ ಸುಲಿದದ್ದರಿಂದ, ಬೇರೆ ಗತಿಗಾಣದ ಸರಸಕ್ಕನು ತನ್ನೂರಿಂದ ಹೊರಟು ವಲ್ಲಭರಾಯನ ಮನೆಗೆ ಬಂದು, ನರ್ಮದೆಯ ಎದುರಿಗೆ ನಿಂತಳು. ಸರಸಕ್ಕನ ಬಗಲಲ್ಲಿ ಒಂದು ಸಣ್ಣ ಗಂಟಿದ್ದಿತು. ಅವಳನ್ನು ಆ ಅವಸ್ಥೆ ಯಲ್ಲಿ ಕಂಡು ನರ್ಮದೆಯು ಚಕಿತಳಾದಳು; ಹಾಗು ಮನಸ್ಸಿನಲ್ಲಿ ತುಸ ಗಾಬರಿ ಯೂ ಆದಳು; ಆದರೆ ಬಹಿರಂಗದಲ್ಲಿ ಅದನ್ನು ತೋರಿಸದಂತೆ ನಗುಮುಖದಿಂದ:- "ಸರಸಕ್ಕಾ, ನೀವು ಇಂದು ಇತ್ತೆತ್ತ ಬಂದಿರಿ? ಮೊದಲು ಪತ್ರ ಕಳಿಸಿದ್ದರೆ ರೈಲು ಬಳಿಗೆ ಯಾರನ್ನಾದರೂ ಕಳಿಸಲಾಗುತ್ತಿದ್ದಿಲ್ಲವೇ? ಒಳ್ಳೇದು. ಬನ್ನಿರಿ ಅಟ್ಟದ ಮೇಲೆ" ಎಂದಂದು, ನರ್ಮದೆಯು ಸರಸಕ್ಕನನ್ನು ಅಟ್ಟದ ಮೇಲಿನ ತನ್ನ ಕೋಣೆಗೆ ಕರೆದೊಯ್ದಳು.

ಸರಸಿಯು ಕುಳಿತು ವಿಶ್ರಮಿಸಿದ ಬಳಿಕ, ನರ್ಮದೆಯು:--"ಸರಸಕ್ಕಾ, ನೀವು ಎಷ್ಟು ಸೊರಗಿರುವಿರವ್ವಾ" ಎಂದು ಕೇಳಲು,

"ನರ್ಮದಕ್ಕಾ, ದೇವರೇ ನನ್ನ ಮೇಲೆ ಕೋಪಿಸಿಕೊಂಡ ಬಳಿಕ ನಾನಿನ್ನು ಧಷ್ಟಪುಷ್ಟಳಾಗಿದ್ದು ಮಾಡುವುದೇನು?" ಎಂದಂದು ಸರಸಕ್ಕನು ಒಂದು ದೀರ್ಘ ನಿಶ್ವಾಸಗರೆದಳು.

"ಸರಸಕ್ಕಾ, ನಿಮಗೀ ದೆಸೆಯು ಪ್ರಾಪ್ತವಾದ ಸುದ್ದೀ ಕೇಳಿ ನಿಮ್ಮೂರಿಗೆ ಬಂದು, ನಿಮ್ಮನ್ನೊಮ್ಮೆ ಕಾಣಬೇಕೆಂದು ನಾವೀರ್ವರೂ ಸಾವಿರು ಸಾರೆ ಯೋಚಿಸಿ ದ್ದೇವು; ಆದರೆ ಈ ಮನೆಯನ್ನು ಬಿಟ್ಟು ಬರಲಿಕ್ಕೆ ಹಲವು ವಿಘ್ನಗಳುಂಟಾದವು. ಅವುಗಳನ್ನೆಲ್ಲ ನಿಮ್ಮೆದುರಿಗೆ ಹೇಳಿದರೆ ಅವು ನಿಮಗೆ ನಿಜವೆಂದು ಕೂಡ ತೋರ ಲಿಕ್ಕಿಲ್ಲ. ನಿಮ್ಮ ಸ್ಥಿತಿಯು ತೀರ ಶೋಚನೀಯವಾಯಿತು. ನಿಮ್ಮ ಹೊಟ್ಟೆ ಯಲ್ಲೊಂದು ಪುತ್ರರತ್ನವಾಗುವ ವರೆಗಾದರೂ ಭವಾನರಾಯರು ಜೀವಿಸಿದ್ದರೆ ಒಳಿ ತಾಗುತ್ತಿತ್ತು; ಆದರೆ ಅದೆಲ್ಲ ದೇವರ ಇಚ್ಛೆಯ ಮಾತು. ನಮ್ಮ ನಿಮ್ಮಗಳ ಕೈಯಲ್ಲೇನಿದೆ? ಏನೇ ಆದರೂ ಭವಾನರಾಯರು ಸುದೈವಿಗಳೆಂದೇ ಅನ್ನಬೇಕು; ಯಾಕಂದರೆ ಅವರು ತಮ್ಮ ಮಗಳ ಬೊಬ್ಬಾಟವನ್ನು ಕೇಳದೆ ಕಣ್ಣುಮುಚ್ಚಿ ಕೊಂಡರು!"

"ಅಂದರೆ? ನರ್ಮದಕ್ಕಾ, ಇದೇನು ಮತ್ತೆ ಹೊಸದು? ಕುಮುದಿನಿಯು ಯಥಾಸಿ ತಳಿರುವಳಷ್ಟೇ?" ಸರಸಕ್ಕನು ಕೇಳಿದನು.

"ಸರಸಕ್ಕಾ, ನಿಮ್ಮ ಮಗಳ ವರ್ತನವು ನಿಮಗೆ ಗೊತ್ತೇ ಇದೆ. ಆ ಬಗ್ಗೆ ಮತ್ತೆ ನನ್ನನ್ನೇಕೆ ಕೇಳುತ್ತಿರುವಿರಿ? ನೀವು ತಾಯಿ! ಅವಳು ಮಗಳು!"

"ನರ್ಮದಕ್ಕಾ, ನಮ್ಮ ತಾಯಿ-ಮಗಳ ಸಂಬಂಧವನ್ನು ತಕ್ಕೊಂಡೇನು ಮಾಡುತ್ತೀರಿ? ಏಳೇಳು ಜನ್ಮಗಳ ವೈರತ್ವವನ್ನು ಸಾಧಿಸಿಕೊಳ್ಳುವದಕ್ಕೆಂದು ಆಕೆಯು ನನ್ನ ಮಲಮಗಳಾಗಿ ಹುಟ್ಟಿದ್ದಾಳೆ. ನರ್ಮದಕ್ಕಾ, ಆ ಸೆಟವಿಯು ನಿಮ್ಮನ್ನು ಸಾಕು ಸಾಕು ಮಾಡಿರಬಹುದಲ್ಲವೆ? ಅಂತೆಯೇ ನಾನು ನಮ್ಮವರಿಗೆ

ಹುಡುಗಿಯನ್ನು ಸಾಲೆಗೆ ಕಳಿಸಬೇಡಿರೆಂದು ಹಗಲಿರುಳೂ ಹೇಳುತ್ತಿದ್ದೆನು. ಅವಳನ್ನು ಗಂಡುಹುಡುಗರಲ್ಲಿ ಬೆರೆಯಗೊಡಬೇಡಿರೆಂದು ಒದರಿಕೊಳ್ಳುತ್ತಿದ್ದೆನು. ಬಂದ ದಾರಿಯಿಂದ ಅವಳನ್ನು ಅತ್ತೆಯ ಮನೆಗೆ ತಿರುಗಿ ಕಳಿಸಿರೆಂದು ಸಾರಿ ಸಾರಿ ಹೇಳಿದ್ದೆನು; ಆದರೆ ನರ್ಮದಕ್ಕಾ, ನನ್ನ ಮಾತು ಯಾರು ಕೇಳುವರು? ಯಾಕಂದರೆ, ನಾನು ಆಕೆಯ ಮಲತಾಯಿಯಲ್ಲವೆ? ನಾನು ಆಕೆಯ ಬಗ್ಗೆ ಎಷ್ಟು ಜೀವ ಸಣ್ಣ ಮಾಡಿಕೊಂಡರೂ ನಾನು ಅವಳ ಮಲತಾಯಿಯೇ! ನರ್ಮದಕ್ಕಾ, ನಮ್ಮ ಕುಮುದಿನಿಯು ನಿಮ್ಮ ಮನೆತನಕ್ಕೆ ಕಲಂಕ ಹತ್ತುವ ಯಾವುದೊಂದು ಕೃತ್ಯಕ್ಕೆ ಮನಸ್ಸು ಮಾಡಿಲ್ಲವಷ್ಟೆ? ಈ ಕಲಿತ ಮಡಮ್ಮಗಳು ಏನು ಮಾಡಿಯಾರು ಏನು ಮಾಡಲಿಕ್ಕಿಲ್ಲೆಂಬದನ್ನು ಹೇಳಬರುವಂತಿಲ್ಲ. ಅವರು ನಮ್ಮ-ನಿಮ್ಮಗಳ ಮಾತನ್ನು ಎಳ್ಳಷ್ಟೂ ಕೇಳಲಾರರು ಜಗತ್ತು ಈ ಮುಂಡೆಯ ಕಡೆಗೆ ನೋಡಲಿಕ್ಕಿಲ್ಲ. ಇವಳಿಗಾಗಿ ನಾವು ನೀವು ಆಡಿಸಿಕೊಳ್ಳಬೇಕಾಗುವದು. ಅಂತೆಯೇ ನಾನೀಗ ನನ್ನ ಮನೆ ಬಿಟ್ಟು ಇಲ್ಲಿಗೆ ಧಾವಿಸಿ ಬಂದಿರುತ್ತೇನೆ. ನಾನು ಇಷ್ಟು ಧಾವಿಸಿ ಬಂದರೂ ಈ ನಮ್ಮ ಸೆಟವಿಯು ನನ್ನ ಭೇಟಿಗೆ ಬಂದಳೇನೆಂಬದನ್ನು ನೀವೇ ನೋಡಿರಿ. ಇವಳು ನನಗೆ ಸುಖಕೊಡಲಿಕ್ಕೆ ಜೀವಿಸಿಲ್ಲ.''

''ಸರಸಕ್ಕಾ, ನಿಮ್ಮ ಮಗಳು ನಮ್ಮ ಮನೆಗೆ ಕಪ್ಪೇ ಬಡೆದಳು. ಅವಳ ಒಂದೊಂದೇ ಕೃತಿಗಳನ್ನು ಕೇಳಿದಿರೆಂದರೆ............''

''ನರ್ಮದಕ್ಕಾ, ಅದಕ್ಕಾಗಿಯೇ ನಾನು ಧಾವಿಸಿ ಬಂದಿರುತ್ತೇನೆ. ದೇವರೇ, ನನ್ನ ಹಣೆಯಬರಹದಲ್ಲಿ ಏನೇನು ಬರೆದಿರುವೆಯೋ ತಿಳಿಯದು!'' ಎಂದಂದು ಸರಸಕ್ಕನು ಹಣೆ-ಹಣೆ ಬಡಕೊಳ್ಳತೊಡಗಿದಳು.

''ಸರಸಕ್ಕಾ, ಭವಾನರಾಯರು ತೀರಿಕೊಂಡ ಬಳಿಕ ಕುಮುದಿನಿಯು ನಿಮ್ಮೂರಿಗೆ ಬಂದಾಗಲಾದರೂ ನಿಮ್ಮೊಡನೆ ಚೆನ್ನಾಗಿ ನಡಕೊಂಡಳೇನು?''

''ನರ್ಮದಕ್ಕಾ, ಅವಳು ನನ್ನ ಕಡೆಗೆಲ್ಲಿ ಬಂದಿದ್ದಳು? ಆ ಪ್ರಭಾಕರನೊಡನೆ ಬಂದು ಆತನ ಮನೆಯಲ್ಲಿ ಎಂಟು-ಹತ್ತು ಗಿನಗಳ ವರೆಗಿದ್ದರೂ, ನನಗೆ ಅವಳ ಸುದ್ದಿಯೇ ಇರಲಿಲ್ಲ. ನಾನು ನನ್ನ ದುಃಖದಲ್ಲಿ ಮುಳುಗಿ ಹೋಗಿದ್ದೆನು. ನೀವಾದರೂ ಅವಳನ್ನು ಇಂಥ ವೇಳೆಯಲ್ಲೇಕೆ ಕಳಿಸಿರಲಿಕ್ಕಿಲ್ಲವೆಂದು ಅಂದುಕೊಳ್ಳುತ್ತಿರಲು, ಒಂದು ದಿನ ಮುಂಜಾನೆ ರೈಲಿಗೆ ಹೊರಡುವ ಸಮಯದಲ್ಲಿ ಆ ಸೆಟವಿಯು ಪ್ರಭಾಕರನೊಡನೆ ನನ್ನಲ್ಲಿಗೆ ನನ್ನ ಮುಸುಡೆಯ ಮೇಲೆ ಕೈಯೆಳೆಯಲಿಕ್ಕೊಮ್ಮೆ ಬಂದಿದ್ದಳಷ್ಟೇ. ಆಗಿನ ಆಕೆಯನ್ನು ಕಂಡು ನಾನು ಬೆರಗಾಗಿ ಹೋದೆನು! ಏನಿರೀ ನರ್ಮದಕ್ಕಾ, ನಾನು ಅವಳ ಪ್ರತ್ಯಕ್ಷ ತಾಯಿಯು ಅದೇ ಊರಲ್ಲಿರುತ್ತಿರಲಿಕ್ಕೆ ಮತ್ತು ನನ್ನ ಮೇಲೆ ಅಂಥ ದುರ್ಘಟ ಪ್ರಸಂಗ ಒದಗಿರುವಾಗ ಅವಳು ಆ ಊರಿಗೆ ಬರುತ್ತಾಳೇನು? ಹಾಗು ಆ ಪರಕೀಯ ಗೃಹಸ್ಥನಲ್ಲಿದ್ದಳೇನು? ಇದೆಲ್ಲ ಸೋಜಿಗವೇ ಸರಿ. ಆಕೆ ಹಾಗೆ ಆಕಸ್ಮಿಕವಾಗಿ ಬಂದರೂ ನಾನು ಅವಳಿಗೆ ಒಂದೆರಡು ದಿನಗಳಾದರೂ ಇದ್ದು

ಹೋಗೆಂದು ಪರಿಪರಿಯಿಂದ ಹೇಳಿದೆನು; ಆದರೆ ಅವಳು ಅಲ್ಲಿ ೧-೨ ಗಳಿಗೆ ಕೂಡ ನಿಲ್ಲದೆ, ನಿಂತ ಕಾಲಿಲೆ ಆ ಪ್ರಭಾಕರನೊಡನೆ ಹೊರಟೇ ಹೋದಳು! ಅವರವರಲ್ಲಿ ಒಳಗಿಂದೊಳಗೆ ಏನೇನು ನಡೆದಿತ್ತೋ ಅವರದವರಿಗೇ ಗೊತ್ತು! ಅವಳು ಇಲ್ಲಿಗೆ ಬಂದ ಮೇಲೆ ನಿಮಗೇನು ಹೇಳಿದಳರೀ?"

"ಅವಳು ನಮಗೇನು ಹೇಳುತ್ತಾಳೆ? ಕಳ್ಳನು ತಾನಾಗಿ ತನ್ನ ಕಳವಿನ ಸಂ-ಗತಿಗಳನ್ನೆಂದಾದರೂ ಹೇಳುವನೇ? ಪಾಪವು ತನ್ನಷ್ಟಕ್ಕೆ ತಾನೇ ಹೊರಬೀಳುತ್ತದೆ. ಸರಸಕ್ಕಾ, ನಿಮ್ಮ ಹುಡುಗೆಯು ನಮ್ಮ ಸತ್ಯಾನಾಶ ಮಾಡಿದ್ದಾಳೆ!" ನರ್ಮದೆಯು ಒಳ್ಳೇ ರಭಸದಿಂವ ನುಡಿದಳು.

"ನರ್ಮದಕ್ಕಾ, ಏನೇನಾಯಿತೆಂಬದನ್ನು ವಿವರವಾಗಿ ತಿಳಿಸಿರಿ."

"ಸರಸಕ್ಕಾ, ಏನು ಹೇಳಲಿ? ಎಷ್ಟು ಹೇಳಲಿ? ಹೇಗೆ ಹೇಳಲಿ? ಇದಾವುದೂ ನನಗೆ ತಿಳಿಯುದವ್ವಾ! "ಎಂದಂದು, ನರ್ಮದೆಯು ಮೆಲ್ಲನೆ ಸರಸಕ್ಕನಿಗೆ ಕುಮುದಿನಿಯ ವರ್ತನದ ಸಂಶಯುವನ್ನು ತಿಳಿಸಿದಳು. ಅದನ್ನು ಕೇಳಿ ಸರಸಿಯು ಕುಳಿತ ಸ್ಥಳದಿಂದ ಪುಟನೆಗೆದು:-"ನರ್ಮದಕ್ಕಾ, ನೀವು ಇದೇನು ಹೇಳುವಿರಿ? ಈ ಮುಂಡೆಯು ಇಷ್ಟು ತಾಳಗೆಟ್ಟಿರುವಳೇ?"

"ಸರಸಕ್ಕಾ, ಬೇರೆ ಪ್ರಕಾರಗಳಿರಲಿ; ಆದರೆ ಕೇವಲ ನಾರಾಯಣನ ಅವತಾರಿಕರಾದಂಥವರು, ಮಹಾ ವಿರಕ್ತರು, ಭೂತ-ಭವಿಷ್ಯಗಳನ್ನು ಬಲ್ಲವರು ಆದ ಪರಮ ಸಾಧುಗಳಾದ ಕಮಲಾಕಾಂತರಲ್ಲಿಯೂ ಇವಳು ಅನುರಕ್ತಳಾಗಿ, ಇಲ್ಲದ ಗೊಂದಲವೆಬ್ಬಿಸಿ ಬಿಟ್ಟಿರುವಳು. ಆದರಿಂದ ನನ್ನ ಜೀವವು ಹಾರಹತ್ತಿದೆ."

"ನರ್ಮದಕ್ಕಾ, ನಿಮ್ಮ ಜೀವಕ್ಕೆ ಹಾಗೇಕೆನಿಸಬಾರದು? ನರ್ಮದಕ್ಕಾ, ಈಗಿಂದೀಗ ಅವಳನ್ನಿಲ್ಲಿಗೆ ಕರೆಯಿರಿ. ಇಂಥ ನಮ್ಮ-ನಿಮ್ಮ ಮೋರೆಗೆ ಮಸಿ ಬಳಿಯುವ ಇವಳನ್ನು ನಾನು ನನ್ನ ಕೈಯಿಂದ ಕುತ್ತಿಗೆ ಹಿಚುಕಿ ಕೊಂದು ಬಿಡುತ್ತೇನೆ."

"ಸರಸಕ್ಕಾ, ಆದರೆ ಅವಳು ಮನೆಯಲ್ಲೆಲ್ಲಿದ್ದಾಳೆ? ಬೆಳಗಿನಿಂದ ಎತ್ತ ಮೋರೆ ಕಪ್ಪು ಮಾಡಿಕೊಂಡು ಹೋಗಿರುವಳೋ, ಇದುವರೆಗೆ ಅವಳ ಪತ್ತೆಯೇ ಇರುವದಿಲ್ಲ. ಸರಸಕ್ಕಾ, ನಮಗೆ ಎಲ್ಲಿಯ ಈ ನಿಮ್ಮ ಸಂಬಂಧವು ಗಂಟು ಬಿದ್ದಿತೋ ಏನೊ? ಈ ಸಾಡೇಸಾತಿಯು ನಮ್ಮ ಮುಸುಡಿಗೆ ಕಪ್ಪು ಬಳಿದಳು!"

"ನರ್ಮದಕ್ಕಾ, ಇದೆಲ್ಲ ಈ ಸಾಹೇಬೀ ಶಿಕ್ಷಣದ ಪರಿಣಾಮವು!"

ಈ ಪ್ರಕಾರ ಅವರೀರ್ವರಲ್ಲಿ ಎಷ್ಟೋ ಹೊತ್ತಿನವರೆಗೆ ಮಾತು-ಕತೆಗಳಾದವು. ಅವರಿಬ್ಬರ ಮನಸ್ಸಿಗೂ ಶಾಂತಿ-ಸಮಾಧಾನಗಳಿರಲಿಲ್ಲ. ಕುಮುದಿನಿಯು ಬಂದ ಕೂಡಲೆ ಆಕೆಯ ಮೇಲೆ ತಮ್ಮಿಬ್ಬರ ಬಾಯ ತೋಫಿನ ಜೋಡು ಬಾರುಗಳನ್ನು ಒಮ್ಮೆಲೆ ಹಾರಿಸಬೇಕೆಂದು ಅವರು ಸಜ್ಜಾಗಿ ಕುಳಿತರು.

ಮೂರೂಸಂಜೆಯಾಯಿತು. ಮನೆಯಲ್ಲೆಲ್ಲ ಕತ್ತಲೆಗವಿಯಿತು. ಓಣಿ-ಬೀದಿಗಳಲ್ಲಿಯೂ ಕತ್ತಲೆ ಬಿದ್ದಿತು. ಆದರೂ ಕುಮುದಿನಿಯ ಸುಳುವಿಲ್ಲ. ಆಗ ನರ್ಮ

ದೆಯು ಎದ್ದು ದೀಪ ಹಚ್ಚಿದಳು. ಇಷ್ಟರಲ್ಲಿ ವಲ್ಲಭರಾಯ-ಶಂಕರರಾಯರು ಮನೆಗೆ ಬಂದರು. ಶಂಕರರಾಯನು ಸರಸಕ್ಕನ ಕಡೆಗೆ ಕಡೆಗಣ್ಣಿನಿಂದ ನೋಡುತ್ತ ತನ್ನ ಕೋಣೆಯನ್ನು ಪ್ರವೇಶಿಸಿದನು. ಬಳಿಕ ವಲ್ಲಭರಾಯನು ಸರಸಕ್ಕನನ್ನು ಕುರಿತು:--

"ಸರಸಕ್ಕಾ, ನೀವು ಯಾವಾಗ ಬಂದಿರಿ? ಹಾಗು ನಿಮ್ಮ ಮೋರೆಗಳು ಇಷ್ಟು ಚಿಂತಾಕ್ರಾಂತಗಳೇಕೆ ತೋರುವವು? ನಿಮ್ಮ ಮೇಲೆ ಒದಗಿದ ಪ್ರಸಂಗದಿಂದ ನನಗೆ ಬಹಳ ದುಃಖವೆನಿಸಿತು; ಆದರೆ ದೇವರ ಇಚ್ಛೆಗೆ ಉಪಾಯವೇನು?"

"ರಾಯರೇ, ನನ್ನ ದುಃಖಕ್ಕೆ ಉಪಾಯವೇ ಇಲ್ಲದಾಗಿದೆ; ಆದರೆ ನಿಮ್ಮ ಸಾದಿನಿಯು ನಿಮ್ಮ ಮನೆತನಕ್ಕೆ ಕಲಂಕ ಹಚ್ಚತೊಡಗಿರುವದರ ಕಡೆಗೆ ಮೊದಲು ಲಕ್ಷ್ಯಗೊಡಿರಿ."

"ಅಂದರೇನು? ಇಂದು ಅವಳು ಮತ್ತೆ ಹೊಸ ಪ್ರಕಾರವನ್ನೇನು ಮಾಡಿದಳು? ಛೀ! ಛೀ! ಸರಸಕ್ಕಾ, ನಿಮ್ಮ ಕುಮುದಿನಿಯು ನಮ್ಮ ಮನೆತನಕ್ಕೆ ಕಲಂಕ ಹಚ್ಚಿಬಿಟ್ಟಳು!"

"ಇಂದು ಅವಳು ಎತ್ತೋ ಮೋರೆ ಕಪ್ಪಗೆ ಮಾಡಿಕೊಂಡು ಹೋದವಳು ಇದು ವರೆಗೂ ತಿರುಗಿ ಬಂದೇ ಇಲ್ಲವಂತೆ!" ಸರಸಕ್ಕನು ನುಡಿದಳು.

"ಏನಂದಿರಿ?" ವಲ್ಲಭರಾಯನು ಆಶ್ಚರ್ಯದಿಂದ ನುಡಿದನು. ಬಳಿಕ ನರ್ಮದೆಯು ಅಂದಿನ ಸಂಗತಿಯನ್ನೆಲ್ಲ ಆತನಿಗೆ ತಿಳಿಸಿದಳು. ನಿರ್ಮಲೆಯು ಕಮಲಾಕಾಂತರ ಮಠದಲ್ಲಿ ನಡೆದ ಸಂಗತಿಯನ್ನು ನರ್ಮದೆಗೆ ವಿಪರೀತವಾಗಿ ತಿಳಿಸಿದ್ದಳು. ಅದಕ್ಕೆ ಮತ್ತೆ ಉಪ್ಪು ಕಾರ ಬೆರಿಸಿ ನರ್ಮದೆಯು ಅದನ್ನು ಗಂಡನಿಗೆ ಹೇಳಿದಳು. ಅದನ್ನು ಕೇಳಿ ಆತನು ಹೌಹಾರಿದಂತಾಗಿ:—"ಛೀ! ಛೀ! ಈ ಸಾಡೇಸಾತಿಯ ಸಲುವಾಗಿ ನಾನೇ ಓಡಿ ಹೋಗುವ ಪ್ರಸಂಗ ಬಂದಿದೆ." ಎಂದನು

ಈ ನುಡಿಗಳನ್ನೆಲ್ಲ ಮರೆಗೆ ನಿಂತು ಕೇಳುತ್ತಿದ್ದ ಶಂಕರರಾಯನಿಗೆ ತನ್ನ ಹೆಂಡತಿಯ ಬಗ್ಗೆ ಬಲು ಕ್ಲೇಶವುಂಟಾಯಿತು. ಅವನು ಈ ಮೊದಲಿನ ತನ್ನ ಹೆಂಡತಿಯ ಮೇಲಿನ ಆರೋಪಗಳನ್ನು ಅಷ್ಟೊಂದು ನಿಜವೆಂದು ನಂಬಿರಲಿಲ್ಲ. ಇಂದಿನ ಪ್ರಕಾರಗಳನ್ನು ಕೇಳಿ ಆತನು ಕಡು ಸಂತಾಪಗೊಂಡನು. ಅಷ್ಟರಲ್ಲಿ ಅವನಿಗೆ ಅಂದೇ ತಮ್ಮ ಮನೆಗೆ ಬಂದ ತಮ್ಮ ಅತ್ತೆಯ ಸ್ಮರಣವಾಯಿತು. ಸರಸಿಯು ಎಂಥ ಹೆಂಗಸೆಂಬದು ಆತನಿಗೆ ಚೆನ್ನಾಗಿ ಗೊತ್ತಿತ್ತು; ಅಲ್ಲದೆ ನಿರ್ಮಲೆ-ಕಮಲಾಕಾಂತರ ಬಗ್ಗೆಯಂತೂ ಆತನಲ್ಲಿ ಎಳ್ಳಷ್ಟು ಸಹಾನುಭೂತಿಯಿರಲಿಲ್ಲ. ಆದರಿಂದ ಈ ತ್ರಿವರ್ಗವು ಕೂಡಿ ತನ್ನ ಹೆಂಡತಿಗೆ ಏನೋ ಮಂಕು ಹಾಕಿಸಿರುವದೆಂದು ಆತನ ಭಾವನೆಯಾಯಿತು.

ಕೂಡಲೆ ಆತನು ತನ್ನ ಕೋಣೆಯಿಂದ ಹೊರಗೆ ಬಂದು ತನ್ನ ಮನೆಯ ಆಳನ್ನು ಕರೆದು:—"ಎಲಾ ಭೀಮಾ, ದೂಡಿವಳನ್ನು ಹೊರಗ!" ಎಂದು ಸರಸಿಯ ಕಡೆಗೆ ಬೊಟ್ಟು ಮಾಡಿ ತೋರಿಸಿ, ತನ್ನ ಅಣ್ಣನಿಗೆ ಆಕೆಯ ಸೈಯಾಳಿತನವನ್ನೆಲ್ಲ

ತಿಳಿಸಿದನು. ಭವಾನರಾಯನ ಮನೆಗೆ ಹೋದಾಗ ವಲ್ಲಭರಾಯನಿಗೂ ಸರಸಿಯ ದುಸ್ವಭಾವದ ಒಂದೆರಡು ಪ್ರಸಂಗಳು ನೋಡದೊರೆತಿದ್ದುವಾದ್ದರಿಂದ ಆತನೂ ಶಂಕರರಾಯನ ಮಾತಿಗೆ ವಿರುದ್ಧವಾಗಿ ಮಾತನಾಡದೆ, ಸುಮ್ಮನೆ ಒಳಗೆ ಹೊರಟು ಹೋದನು.

ನರ್ಮದೆಯು ಆ ಮನೆಯಲ್ಲಿ ಹಿರಿಯಳಾಗಿದ್ದರೂ ಆ ಮನೆಯ ನೌಕರ ಚಾಕರರಿಗೆಲ್ಲ ಕುಮುದಿನಿಯೇ ಆದರಣೀಯಳಾಗಿದ್ದಳು. ಅದರಿಂದ ನರ್ಮದೆಯು ಅವಳಿಗೆ ಬಾಯಿಗೆ ಬಂದಂತೆ ಅನ್ನುವದರಿಂದಲೂ ಆಕೆಯ ವಿಷಯವಾಗಿ ಗಂಡ-ಮ್ಮೈದುನರಿಗೆ ಏನಾದರೊಂದು ಹೇಳುತ್ತಿರುವದರಿಂದಲೂ ಆ ದಾಸ-ದಾಸಿಯರೆಲ್ಲ ನರ್ಮದೆಯ ಬಗ್ಗೆ ಹೆಚ್ಚಾಗಿ ಕ್ರುದ್ಧರಾಗಿದ್ದರು; ಆದರೂ ಮನೆಯ ಯಜಮಾನ ಳೆಂಬ ನಾತೆಯಿಂದ ಅವರು ಅವಳನ್ನು ಅಲ್ಲಗಳೆಯುವಂತಿರಲಿಲ್ಲ. ಅವರೆಲ್ಲರೂ ಕುಮುದಿನಿಯ ಬಗ್ಗೆ ಹೆಚ್ಚಾಗಿ ಹಳಹಳಿಸುತ್ತಿದ್ದರು. ಆ ದಾಸ-ದಾಸಿಯರಲ್ಲಿ ಭೀಮನೆಂಬ ಹೆಸರಿನ ಆ ಮನೆಯ ವೃದ್ಧ ನೌಕರನು ಕುಮುದಿನಿಯನ್ನು ಒಳ್ಳೇ ಮಮತೆಯಿಂದ ಕಾಣುತ್ತಿದ್ದನು. ನಿರ್ಮಲೆಯು ವಲ್ಲಭರಾಯನ ಮನೆಗೆ ಬರಹೋಗ ತ್ತಿರುವದು ಆ ಮುದುಕನಿಗೆ ಕೊಂಚವೂ ಸೇರುತ್ತಿರಲಿಲ್ಲ. ನಿರ್ಮಲೆಯು ಒಳ್ಳೇ ನಡತೆಯವಳಲ್ಲೆಂಬದು ಆತನ ಮನಸ್ಸು ಅವನಿಗೆ ಸ್ಪಷ್ಟವಾಗಿ ತಿಳಿಸುತ್ತಿತ್ತು. ನರ್ಮದೆಗಾಗಲಿ ವಲ್ಲಭರಾಯನಿಗಾಗಲಿ ನಿರ್ಮಲೆಯ ಬಗ್ಗೆ ಸೂಚಿಸಬೇಕೆಂದು ಆತ ನಿಗೆ ಒಂದೆರಡು ಸಾರೆ ಅನಿಸಿತು; ಆದರೆ ವಲ್ಲಭರಾಯನು ನಿರ್ಮಲೆಗೆ ಹೆಚ್ಚು ಮರ್ಯಾದೆ ಕೊಡ ಹತ್ತಿದ್ದನ್ನು ಕಂಡು, ಅವನು ಆ ತನ್ನ ಆಲೋಚನೆಯನ್ನು ಮನಸ್ಸಿನಲ್ಲಿಯೇ ವಿರಾಮಗೊಳಿಸಿದನು.

ಅಂದು ರಾತ್ರಿಯ ೮ ಗಂಟೆಯಾಯಿತು. ಗಂಡಸರು ಮನೆಗೆ ಹಿಂದಿರುಗಿದರು. ಆದರೂ ಕುಮುದಿನಿಯು ಸುಳಿಯದ್ದರಿಂದ ಭೀಮನ ಜೀವವು ತಲ್ಲಣಿಸತೊಡಗಿತು. ಜೀವ ನಿಲ್ಲದಾಗಲು ಆತನು ನರ್ಮದೆಯನ್ನು ಕುರಿತು ಕುಮುದಿನಿಯ ಬಗ್ಗೆ ವಿಚಾ ರಿಸಲು, 'ನಾವೂ ಅದೇ ಆಲೋಚನೆಯಲ್ಲಿರುತ್ತೇವೆ'ಂದು ಆಕೆ ಹೇಳಿದ ಉತ್ತರವನ್ನು ಕೇಳಿ, ಭೀಮನಿಗೆ ಕುಮುದಿನಿಯ ಬಗ್ಗೆ ಚಿಂತೆಯುಂಟಾಯಿತು. ಆಗ ಆ ಊರಲ್ಲಿ ನಡೆದಿದ್ದ ಪಠಾಣರ ಲೀಲೆಗಳು ಆತನಿಗೆ ಗೊತ್ತಿದ್ದವು. ಅದರಿಂದ ಕುಮುದಿನಿಯ ಮೇಲೂ ಅಂಥ ಪ್ರಸಂಗವೊದಗಿರಬಹುದೋ? ಅಥವಾ ಯಾವುದೊಂದು ಮೋಟರಿನ ಕೆಳಗೆ ಸಿಕ್ಕು ಗಾಯಗೊಂಡವಳನ್ನು ಪೋಲೀಸರು ಆಸ್ಪತ್ರಿಗೆ ತಲುಪಿಸಿರಬಹುದೊ? ಹೀಗೆ ನಾನಾ ಬಗೆಯ ಕಲ್ಪನೆಗಳು ಆತನಲ್ಲುಂಟಾದವು. ಆತನು ಕಡೆಗೆ ತಮ್ಮ ಮನೆಯ ಮುಖ್ಯ ಮಾಲಕರಾದ ವಲ್ಲಭರಾಯರಿಗೆ ತಿಳಿಸಿ, ತಾನು ಕುಮುದಿನಿಯ ಶೋಧಕ್ಕಾಗಿ ಹೊರಡುವದನ್ನು ನಿರ್ಧರಿಸಿ ಅಟ್ಟವನ್ನೇರಿ ವಲ್ಲಭರಾಯರ ಬಳಿಗೆ ಹೊರ ಟನು ಅಷ್ಟರಲ್ಲಿ ವಲ್ಲಭರಾಯರೇ ಆತನನ್ನು ಕೂಗಿ ಕರೆದು, ಅವನಿಗೆ ಅದೇ ಕೆಲಸ ವನ್ನು ತಾವಾಗಿ ಹೇಳಿ ಒಪ್ಪಿಸಿದರು ಅದರಿಂದ ಭೀಮನ ಇಚ್ಛೆಯು ಫಲಿಸಿದಂತಾ

ಯಿತು. ವಲ್ಲಭರಾಯರು ಆತನನ್ನು ಹತ್ತಿರ ಕರೆದು ಆತನ ಕಿವಿಯಲ್ಲಿ 'ಭೀಮಾ, ಯಾರಿಗೂ ತಿಳಿಯದ ಹಾಗೆ ನೀನು ಕುಮುದಿನಿಯು ಪತ್ತೆ ಹಚ್ಚಿಕೊಂಡು ಬಾ' ಎಂದು ಹೇಳುತ್ತಲೆ, ಭೀಮನು ಹರ್ಷಭರದಿಂದ ಆ ಮನೆಯಿಂದ ಹೊರಬಿದ್ದನು.

ಭೀಮನು ಕೀಳು ಜಾತಿಯವನಿದ್ದರೂ, ಆ ಮನೆಯ ಹೀನ ಕೆಲಸಗಳನ್ನು ಮಾಡುವ ಸಾಮಾನ್ಯ ಚಾಕರನಾಗಿದ್ದರೂ ಆತನ ಅಂತಃಕರಣವು ಮಾತ್ರ ಉಚ್ಚತರದ್ದಾಗಿತ್ತು; ಆದರೆ ಬಹಿರಾಡಂಬರಕ್ಕೆ ಕೇವಲ ಮರುಳಾಗಿ ನಡೆಯುವ ಈ ಜಗತ್ತಿನಲ್ಲಿ ಆತನಂಥ ವಿಶಾಲ ಅಂತಃಕರಣದ ಬೆಲೆಗಟ್ಟುವವರಾರು? ಈ ಲೋಕದಲ್ಲಿ ಭೀಮಾ, ನಿನ್ನಂತಹರ ಯೋಗ್ಯ ಸನ್ಮಾನವಾಗದಿದ್ದರೂ 'ಸತ್ಯಮೇವ ಜಯತೆ' ಎಂಬ ನ್ಯಾಯದಂತೆ ಕಡೆಗೆ ಪರಲೋಕದಲ್ಲಾದರೂ ನಿನ್ನ ಸತ್ಕಾರವಾಗದೆ ಇರದು. ಅಪ್ಪಾ, ಈ ಲೋಕದಲ್ಲಿ ಕುಮುದಿನಿಯಂಥ ಎಷ್ಟೋ ನಿರ್ಮಲ ಪುಷ್ಪಗಳು ಸತ್ಪುರುಷ ವೇಷಧಾರಿಗಳಾದ ದುರ್ಜನಗ ಕಾಲಿನ ತುಳಿತಕ್ಕೆ ಸಿಕ್ಕು ನಾಶವಾಗುತ್ತಿದ್ದರೂ ಕಟ್ಟ ಕಡೆಗೆ ಆ ಪುಷ್ಪಗಳು ಪರಮೇಶ್ವರನ ಚರಣದ ಮೇಲೆಯೇ ಬೀಳುತ್ತವೆ; ಹಾಗು ಅವುಗಳನ್ನು ತುಳಿದು ನಾಶಗೊಳಿಸಲೆತ್ನಿಸುವವರ ಅಧೋಗತಿಯಾಗದೆ ಹೋಗುವದಿಲ್ಲ

ಭೀಮನನ್ನು ಕುಮುದಿನಿಯ ಶೋಧಕ್ಕೆ ಕಳಿಸಿ ವಲ್ಲಭರಾಯನು ಮತ್ತೆ ತನ್ನ ಕೋಣೆಗೆ ಹೋದನು ಕಳೆದ ಎರಡು ಮೂರು ದಿನಗಳಿಂದ ಶಂಕರರಾಯನ ಚಿತ್ತವು ಸ್ವಸ್ಥವಿರಲಿಲ್ಲ. ಕುಮುದಿನಿಯ ಬಗ್ಗೆ ಆತನ ಮನಸ್ಸಿನಲ್ಲಿ ವಿಕಲ್ಪಗಳುಂಟಾಗುತ್ತಿದ್ದರೂ ಅವಳು ಕೇವಲ ನಿಷ್ಪಾಪಿಯೂ ಸರಳ ಹೃದಯದವಳೂ ಎಂದು ಆತನ ಮನಸ್ಸು ಆಗಾಗ್ಗೆ ನಿಕ್ಷುಣ್ಣವಾಗಿ ತಿಳಿಸುತ್ತಿತ್ತು. ಆದರೂ ಆತನು ಕೇವಲ ಹತಬುದ್ಧನಾಗಿ ಅಣ್ಣ-ಅತ್ತಿಗೆಯರು ಹೇಳಿದ ಹಾಗೆ ಕೇಳುತ್ತ ಸುಮ್ಮನೆ ನಡೆಯುತ್ತಿದ್ದನು. ಸ್ವಂತದ ಸಾರಾಸಾರ ವಿಚಾರದ ಗಂಧವೂ ಆತನಲ್ಲಿ ಉಳಿದಿರಲಿಲ್ಲ. ಆದರಿಂದಲೇ ಅಂದು ಸಂಜೆಗೆ ಆತನು ಮನೆಗೆ ಬಂದ ಬಳಿಕ ಕುಮುದಿನಿಯು ಎಲ್ಲಿರುವಳೆಂಬದನ್ನು ಕೇಳಿ ತಿಳಿಯುವ ಇಚ್ಛೆಯು ಆತನಿಗುಂಟಾಗಲಿಲ್ಲ. ಆತನು ಮನೆಗೆ ಬಂದವನೇ ಹೃದಯಶೂನ್ಯನಂತಾಗಿ ತನ್ನ ಕೋಣೆಯೊಳಗಿನ ಇಝೀಚೇರಿನ ಮೇಲೆ ಸುಮ್ಮನೆ ಅಡ್ಡಾಗಿದ್ದನು. ಇಷ್ಟರಲ್ಲಿ ವಲ್ಲಭರಾಯನು ಆತನನ್ನು ಕರೆದನು. ಕೂಡಲೆ ಆತನು ಅಣ್ಣನ ಬಳಿಗೆ ಹೋಗಿ 'ಅಣ್ಣಾ, ಏನಪ್ಪಣೆ?' ಎಂದು ಕೇಳಿದನು.

''ಶಂಕರಾ, ಇಂದು ಕುಮುದಿನಿಯು ಎಲ್ಲಿಗೆ ಹೋಗಿರುವಳು?''

''ಅಂದರೆ?'' ಶಂಕರರಾಯನು ಒಳ್ಳೇ ಆಶ್ಚರ್ಯದಿಂದ ಕೇಳಿದನು.

ವಲ್ಲಭರಾಯನು ಮಿಕ್ಕ ಯಾವ ಸಂಗತಿಯನ್ನೂ ಹೇಳದೆ, ''ಕುಮುದಿನಿಯು' ಇಂದು ನಿರ್ಮಲಮ್ಮನೊಡನೆ ಕಮಲಾಕಾಂತ ಸಾಧುಗಳ ದರ್ಶನಕ್ಕೆಂದು ಅವರ ಆಶ್ರಮಕ್ಕೆ ಹೋದವಳು ಒಬ್ಬಳೇ ಮನೆಗೆ ಹಿಂದಿರುಗಿದಳು; ಆದರೆ ಇದುವರೆಗೂ ಅವಳ ಪತ್ತೆಯಿಲ್ಲ'' ಎಂದಿಷ್ಟೇ ಹೇಳಲು,

'ಅಣ್ಣಾ, ದಾರಿಯಲ್ಲಿ ಅವಳಿಗೆ ಪರಾಣರೇನಾದರೂ ಗಂಟುಬಿದ್ದಿರಲಿಕ್ಕಿಲ್ಲವಷ್ಟೆ?

“ಛೀ, ಛೀ! ಹಗಲುಹಾಡಿನಲ್ಲಿ ಹಾಗು ರಾಜ ಬೀದಿಯಲ್ಲಿ ಪಠಾಣರು ಅವಳನ್ನೇನು ಮಾಡುವರು?”

“ಹಾಗಾದರೇನಾಗಿರಬಹುದು?”

“ನಾನೂ ಅದನ್ನೇ ಆಲೋಚಿಸುತ್ತಿರುವೆನು; ಮತ್ತು ಅವಳ ಶೋಧಕ್ಕಾಗಿ ನಮ್ಮ ಭೀಮನನ್ನು ಈಗ ತಾನೇ ಕಳಿಸಿರುತ್ತೇನೆ.”

“ಅಣ್ಣಾ, ಆ ವೃದ್ಧ ಭೀಮನು ಅವಳ ಶೋಧವನ್ನೆಂತು ಮಾಡುವನು! ನಾನೇ ಹೋಗಿ ಪೋಲೀಸ ಚೌಕಿಗೆ ವರದಿ ಕೊಡುತ್ತೇನೆ” ಎಂದೆಂದು ಶಂಕರರಾಯನು ಭರದಿಂದ ನಡೆದನು.

“ತಮ್ಮಾ, ಶಂಕರಾ, ತುಸ ತಡೆ; ಊಟ ಮಾಡಿ ನಾವಿಬ್ಬರೂ ಹೋಗೋಣ.”

“ಛೀ, ಛೀ! ಅಣ್ಣಾ ನನಗಿಂದು ಹೊಟ್ಟೆ ಹಸಿದಿಲ್ಲ ನಾನೊಬ್ಬನೇ ಹೋಗುತ್ತೇನೆ. ನೀವು ಸುಮ್ಮನೆ ತೊಂದರೆ ವಹಿಸಬೇಡಿರಿ. ಪೋಲೀಸ ಇನ್ಸಪೆಕ್ಟರರು ನನ್ನ ಮಿತ್ರರಿರುತ್ತಾರೆ” ಎಂದು ಹೇಳಿದವನೇ ಶಂಕರರಾಯನು ಲಗುಬಗೆಯಿಂದ ಹೊರಟನು. ಆತನು ಬೆಳತನಕ ಬಗೆಬಗೆಯಿಂದ ಶೋಧ ಮಾಡಿದರೂ ಅವನಿಗೆ ಕುಮುದಿನಿಯ ಪತ್ತೆ ಹತ್ತಲಿಲ್ಲ ಹತ್ತುವ ಬಗೆಯಾದರೂ ಹೇಗೆ? ಅವಳು ಆಗ ಆ ಬಳ್ಳಾರಿಯಿಂದ ಎಷ್ಟೋ ದೂರದಲ್ಲಿದ್ದ ಒಂದು ಹಳ್ಳಿಯಲ್ಲಿ ರೈತರ ಮನೆಯಲ್ಲಿ ದೇಹಭಾನವಿಲ್ಲದೆ ಬಿದ್ದುಕೊಂಡಿದ್ದಳು

ರಾತ್ರಿಯು ಕಳೆದು ನಸುಕು ಹರಿಯು ಬರಲು ಶಂಕರರಾಯನು ಮನೆಗೆ ಬಂದನು. ಆತನ ಮುಖಚರ್ಯೆಯಿಂದಲೇ ಆತನಿಗೆ ಕುಮುದಿನಿಯ ಪತ್ತೆ ಹತ್ತಲಿಲ್ಲೆಂಬದು ತಿಳಿಯುತ್ತಿತ್ತು. ಅದರಿಂದ ವಲ್ಲಭರಾಯರಾದಿಗಳು ಅವನಿಗೆ ಆ ಬಗ್ಗೆ ಯಾವ ಪ್ರಶ್ನೆಯನ್ನೂ ಮಾಡಲಿಲ್ಲ. ಆತನು ತನ್ನ ಕೋಣೆಗೆ ಹೋಗಿ ನಿಟ್ಟುಸಿರು ಬಿಡುತ್ತ ಬಿದ್ದುಕೊಂಡನು. ಮನಸ್ಸು ನಾನಾ ಬಗೆಯ ಆಲೋಚನೆಗಳಿಂದ ತಲ್ಲಣಿಸುತ್ತಿದ್ದರೂ ಇಡೀ ರಾತ್ರಿ ನಿದ್ರೆಯಿರದ್ದರಿಂದ, ಬೆಳಗಿನ ಝಾವದ ತಂಪು ಗಾಳಿಯ ಮೂಲಕ ಆತನಿಗೆ ತುಸ ಜಂಪು ಹತ್ತಿತು.

ಬೆಳಗಾಗುವಷ್ಟರಲ್ಲಿ ಪೋಸ್ಟಮನ್ನನು ಒಂದು ವಲ್ಲಭರಾಯರ ಕೈಗೊಂದು ಪತ್ರಕೊಟ್ಟನು. ಅಷ್ಟರಲ್ಲಿ ಶಂಕರರಾಯನು ಎದ್ದು ಬಂದು ಅಣ್ಣನನ್ನು ಕುರಿತು ಅದಾವ ಪತ್ರವೆಂದು ಕೇಳಿದನು; ಹಾಗು ಆತನೆದುರಿಗಿದ್ದ ಪತ್ರವನ್ನು ತಕ್ಕೊಂಡು ಒಡೆದು ಓದಹತ್ತಿದನು. ಆತನು ಆ ಪತ್ರದ ಒಂದೊಂದೇ ಸಾಲನ್ನು ಓದಹತ್ತಲು, ಆತನ ಮುಖಚರ್ಯೆಯು ಮಹಾಸಾಗರದಂತೆ ಅಲ್ಲೋಲಕಲ್ಲೋಲವಾಗಿ ತೋರತೊಡಗಿತು! ಕಣ್ಣುಗಳು ಖದಿರಾಂಗಾರದಂತೆ ಕೆಂಪಗಾದವು. ತುಟಿಗಳು ಥರಥರನೆ ನಡುಗಹತ್ತಿದವು. ಯಾವಾಗಲೂ ಕೇವಲ ಶಾಂತನಾಗಿ ತೋರುವ ಶಂಕರರಾಯನು ಅಂದು ಪ್ರತ್ಯಕ್ಷ ಜಮದಗ್ನಿಯಂತೆ ತೋರಹತ್ತಿದನು! ಆತನು ಆ ಇಡಿ ಪತ್ರವನ್ನು ಓದಿದನು; ಹಾಗು ಅದನ್ನು ಅಣ್ಣನ ಎದುರಿಗೆ ಬಿಸುಟಿ ‘ಅಣ್ಣಾ, ನೋಡಿರಿ

ಇದನ್ನು!' ಎಂದು ಕೂಗಿದನು.

"ಶಂಕರಾ, ಇದಾರ ಪತ್ರವು?" ಎಂದೆನ್ನುತ್ತ ವಲ್ಲಭರಾಯನು ಅದನ್ನು ಓದ ಲಾರಂಭಿಸಿದನು. ಆಗ ಶಂಕರರಾಯನು "ಅಣ್ಣಾ, ಈ ಚಂಡಾಲಿನಿಯು ನನ್ನ ಮುಸುಡಿಗೆ ಮಸಿ ಬಳಿದಳು!" ಎಂದಂದವನೇ ದೊಪ್ಪನೆ ಹಣೆ ಬಡಕೊಂಡು, ಖುರ್ಚಿಯ ಮೇಲೆ ಕುಸಿಕುಳಿತನು. ವಲ್ಲಭರಾಯನು ಆ ಪತ್ರವನ್ನು ಪೂರಾ ಓದಿ ಕೊಂಡರೂ ಆತನ ಮುಖಚರ್ಯೆಯಲ್ಲಿ ವಿಶೇಷ ಹೆಚ್ಚು ಕಡಿಮೆ ತೋರಿ ಬರಲಿಲ್ಲ. ಏಕೆಂದರೆ, ಅಂಥ ಪತ್ರವನ್ನು ಅವನು ಇಂದೇ ಹೊಸದಾಗಿ ಓದುತ್ತಿರಲಿಲ್ಲ. ಈ ಮೊದಲು ಇಂಥ ಹಲಕೆಲವು ಪತ್ರಗಳನ್ನು ಆತನು ಓದಿದ್ದನು; ಆದರೆ ಶಂಕರ ರಾಯನ ಕೈಗೆ ಆ ಪತ್ರ ತಲುಪಿದ್ದರಿಂದ ಅವನಿಗೆ ಸರಿಯೆನಿಸಲಿಲ್ಲ. ಇನ್ನು ಈ ಹುಡುಗನು ತನ್ನ ಜೀವಕ್ಕೇನಾದರೂ ಮಾಡಿಕೊಳ್ಳಬಹುದೆಂಬ ಭೀತಿಯಿಂದ ವಲ್ಲಭ ರಾಯನು ತಮ್ಮನ ಬಳಿಗೆ ಹೋಗಿ, ಆತನ ಬೆನ್ನಮೇಲೆ ಕೈಯಾಡಿಸುತ್ತ "ತಮ್ಮಾ, ಶಂಕರಾ, ಇಂಥ ಹಲವು ಪತ್ರಗಳು ಈ ಮೊದಲೇ ನನ್ನ ಕೈ ಸೇರಿದ್ದವು; ಆದರೆ ನಿನ್ನ ಮನಸ್ಸಿನ ಮೇಲೆ ವಿಪರೀತ ಪರಿಣಾಮವಾದೀತೆಂಬ ಸಂದೇಹದಿಂದ ನಾನು ಅವು ಗಳ ಸಂಗತಿಯನ್ನು ನಿನಗೆ ಇದುವರೆಗೂ ತಿಳಿಸಿರಲಿಲ್ಲ. ನಾನು ಕುಮುದಿನಿಯ ಮೇಲೆ ಸೂಕ್ಷ್ಮ ನಜರಿಟ್ಟು ಆ ಪತ್ರಗಳನ್ನು ಹರಿದು ಹಾಕಿದ್ದೆನು. ನಮ್ಮ ಗುರು ಮಹಾರಾಜರ ಸದುಪದೇಶದಿಂದಲಾದರೂ ಆಕೆಯ ಮನಸ್ಸು ಸನ್ಮಾರ್ಗದ ಕಡೆಗೆ ಎಳೆಯಲೆಂಬ ಉದ್ದೇಶದಿಂದಲೇ ನಾನು ಆಕೆಯನ್ನು ನಿರ್ಮಲಮ್ಮನವರೊಡನೆ ಗುರು ಗಳ ಮಠಕ್ಕೆ ಕಳಿಸಿ ಕೊಟ್ಟಿದ್ದೆನು. ಗುರುಗಳು ಕುಮುದಿನಿಯ ವಿಷಯವಾಗಿ ಸಂದೇಹಾಸ್ಪದದ ಮಾತುಗಳನ್ನು ತಿಳಿಸಿರುವದು ನಿನಗೆ ಗೊತ್ತೇ ಇದೆ. ನಮ್ಮ ಗುರು ಗಳು ಪರಮ ಜ್ಞಾನಿಗಳು! ಅದರಿಂದ ಅವರಿಗೆ ಭೂತ-ಭವಿಷ್ಯತ್ತುಗಳು ತಿಳಿಯು ವದು ಅರಿದೇನು? ತಮ್ಮಾ, ಅಂದು ಅವರು ನಿನ್ನ-ನನ್ನೆದುರಿಗೆ ಹೇಳಿದ ಕುಮುದಿನಿಯ ವರ್ತನದ ಅಲ್ಪಕಥನದಿಂದಲೇ ನಿನ್ನ ಮನಸ್ಸು ಆಕೆಯ ಬಗ್ಗೆ ಸಂಶಯಗ್ರಸ್ತ ವಾಗಿರುತ್ತದೆಂಬದನ್ನು ನಾನು ಅರಿತಿರುತ್ತೇನೆ. ಅದರಿಂದಲೇ ನಾನು ಆಕೆಯ ಬಗ್ಗೆ ನಿನ್ನೆದುರಿಗೆ ಯಾವ ಮಾತನ್ನೂ ತೆಗೆಯಬಾರದೆಂದು ನಿರ್ಧರಿಸಿರುತ್ತೇನೆ; ಆದರೆ ತಮ್ಮಾ, ನೀನು ಈಗ ಹೀಗೆ ಅಳುವುದೇಕೆ? ರತ್ನವೆಂದು ಸ್ವೀಕರಿಸಿದ ವಸ್ತುವು ಕಲ್ಲುಹರಳಾಯಿತು! ನಾನು ಆ ಭವಾನರಾಯರ ಸಭ್ಯತನಕ್ಕೆ ಮರುಳಾದೆನು. ನಾನು ಕುಮುದಿನಿಯ ಆ ಚಂಡಾಲ ಮುಖಚರ್ಯೆಗೆ ಮರುಳಾದೆನು. ತಮ್ಮಾ, ಮಂದಿಯ ಮನಸ್ಸಿನೊಳಗಿನ ಸಂಗತಿಯು ನಮಗೆ ಮೊದಲೇ ತಿಳಿದರೆ, ಜಗತ್ತಿನಲ್ಲಿ ಇಂಥ ಅನರ್ಥಗಳೇಕಾಗುತ್ತಿದ್ದವು? ತಮ್ಮಾ, ಶಂಕರಾ, ನೀನಿನ್ನು ದುಃಖಿಸಬೇಡ. ನಾನೇ ಕುಮುದಿನಿಯನ್ನು ನಿನಗಾಗಿ ಆರಿಸಿದ್ದೆನು. ಜನರು ಹಿರಿಯನೆಂದು ನನ್ನನ್ನೇ ದೂಷಿ ಸುವರು; ಮತ್ತು ಅದನ್ನು ಸಹಿಸಲಿಕ್ಕೆ ನಾನು ಸಿದ್ಧನಿದ್ದೇನೆ. ನೀನು ಇನ್ನು ಮೇಲೆ ಸುಮ್ಮನೆ ಕೊರಗಬೇಡ."

ಅಣ್ಣಾ, ಈ ಸರಸಿಯನ್ನು ನಾನು ನಿನ್ನೆ ಯಾವಾಗ ನಮ್ಮ ಮನೆಯೊಳಗೆ ಕಂಡೆನೋ, ಆಗಲೇ ಈಕೆಯನ್ನು ಹೊರದೂಡಿರೆಂದು ನಿಮಗೆ ಹೇಳಿರಲಿಲ್ಲವೆ? ಯಾಕಂದರೆ, ಈಕೆಯ ದರ್ಶನವಾದೊಡನೆಯೇ ನನ್ನ ಹೊಟ್ಟೆಯಲ್ಲೊಂದು ಬಗೆಯ ಸಂಕಟವುಂಟಾಯಿತು. ಆದರಿಂದ ನಾನು ಇವಳಲ್ಲಿ ಕಡು ಸಂದೇಹಪಟ್ಟೆನು. ಅಷ್ಟರಲ್ಲಿ ಇವಳ ಪೂರ್ವ ಚಾರಿತ್ರ್ಯವು ನನ್ನ ಕಣ್ಣೆದುರಿಗೆ ಕಟ್ಟಿತು ಕೂಡಲೆ ನಾನು ಇವಳ ಮೇಲೆ ರೇಗಿಗೆದ್ದು ಇವಳನ್ನು ಹೊರದೂಡ ಹೋಗಿದ್ದೆನು. ಅಣ್ಣಾ, ಕುಮುದಿನಿಯನ್ನು ಇಲ್ಲದಂತಾಗಮಾಡಲಿಕ್ಕೆ ಈ ಸರಸಿಯೇ ಬಹುಮಟ್ಟಿಗೆ ಕಾರಣಳಾಗಿರಬೇಕೆಂದು ನನಗೆ ಈಗಲೂ ಅನಿಸುತ್ತಿದೆ.

ಶಂಕರರಾಯನ ಈ ಭಾಷಣವನ್ನು ಕೇಳಿ, ಸಮೀಪದಲ್ಲಿಯೇ ಮರೆಗೆ ನಿಂತುಕೊಂಡಿದ್ದ ಸರಸಿಯು ಸಂತಪ್ತಳಾದಳು. ಮುನ್ನಾ ದಿನವೇ ತನ್ನ ಮೋರೆ ನೋಡಿದ ಕೂಡಲೆ ತನ್ನನ್ನು "ದೂಡಿವಳನ್ನು ಹೊರಗೆ" ಎಂದು ಅಂದಿದ್ದ ಶಬ್ದಗಳಿಂದಲೇ ಅವಳು ಕಡು ಸಂತಾಪಗೊಂಡು ಆಗಲೆ ಆ ಮನೆಯಿಂದ ಹೊರಟು ಹೋಗಹತ್ತಿದ್ದಳು; ಆದರೆ ವಲ್ಲಭರಾಯನೂ ನರ್ಮದೆಯೂ ಆಕೆಗೆ ಹಲವು ಪ್ರಕಾರದಿಂದ ತಿಳಿಹೇಳಿ,-ಕುಮುದಿನಿಯ ವಿಚಿತ್ರ ವರ್ತನದಿಂದ ಶಂಕರರಾಯನ ಪಿತ್ಥವು ತಲೆಗೇರಿ ಹೋಗಿದೆ. ಆದರಿಂದ ಆತನು ಇತ್ತೀಚೆಗೆ ಹೀಗೆ ಯಾರೊಬ್ಬರ ಮೇಲೂ ಸುಮ್ಮ ಸುಮ್ಮನೆ ಹರಿಹಾಯುತ್ತಿರುತ್ತಾನೆ. ಆದರಿಂದ ನೀವು ಆತನ ಮಾತಿನ ಕಡೆಗೆ ಲಕ್ಷ್ಯಗೊಡಬೇಡಿರಿ. ಇತ್ಯಾದಿ ಹೇಳಿ-ಸಮಾಧಾನಗೊಳಿಸಿದರು. ಈ ದಿನ ಶಂಕರರಾಯನು ಮುನ್ನಾದಿನ ತನ್ನನ್ನು ಹೊರದೂಡ ಹೇಳಿದ್ದರ ವ್ಯಾಖ್ಯೆಯನ್ನು ಹೇಳುವಾಗ ತನ್ನ ಪೂರ್ವ ಚಾರಿತ್ರ್ಯವು ದೂಷಿತವಾಗಿರುವದೆಂದು ಸ್ಪಷ್ಟವಾಗಿ ಹೇಳಿದ್ದನ್ನು ಕೇಳಿ ಸರಸಿಯು ಸುಮ್ಮನಿರುವಳೇ? ಅವಳು ಶಂಕರರಾಯನನ್ನೂ ಕುಮುದಿನಿಯನ್ನೂ ಬಾಯಿಗೆ ಬಂದ ಹಾಗೆ ಅನ್ನತೊಡಗಿದಳು. ಅದನ್ನು ಕೇಳಿ ವಲ್ಲಭರಾಯನಿಗೂ ಹೇಯವೆನಿಸಿತು. ನರ್ಮದೆಗೂ ಸಿಟ್ಟು ಬಂದಿತು. ಆದರಿಂದ ಹೆಂಗಸರ ಬಾಯಿಗೆ ಬಾಯಿ ಹತ್ತಿತು. ಆ ಮೇಲೆ ಕೇಳುವದೇನು? ಉಭಯ ಕುಲಗಳೂ ಉದ್ಧಾರವಾಗಿ ಹೋದವು. ಕಡೆಗೆ ಶಂಕರರಾಯನು ತಾನೇ ಎದ್ದು ಬಂದು ಸರಸಿಯನ್ನು ತಮ್ಮ ಮನೆಯಿಂದ ಹೊರದೂಡಿಬಿಟ್ಟನು. ಅಂದಿನ ಪತ್ರದ ಸಂಗತಿಯಿಂದ ಸರಸಿಯ ವಿಷಯವಾಗಿ ವಲ್ಲಭರಾಯನೂ ನರ್ಮದೆಯೂ ರುಷ್ಟರಾದ್ದರಿಂದ ಅವರು ಆತನನ್ನು ತಡೆಯಹೋಗಲಿಲ್ಲ.

ಸರಸಿಯನ್ನು ನಿಂತಕಾಲಮೇಲೆ ಹೊರಗೆ ಹಾಕುವಂತಹ ಸಂಗತಿಯಾದರೂ ಅಂದಿನ ಆ ಪತ್ರದಲ್ಲೇನಿತ್ತೆಂಬದನ್ನು ವಾಚಕರು ತರ್ಕಿಸುತ್ತಿರಬಹುದು. ಅದನ್ನೇ ನಾವೀಗ ಸಂಕ್ಷಿಪ್ತವಾಗಿ ತಿಳಿಸುತ್ತೇವೆ:

ಸರಸಿಯು ಪುರಾಣದಿಂದ ಬಂದ ಮೇಲೆ ಮನೆಯೊಳಗೆ ಹೋಗಿ ನೋಡಿದಾಗ ಮನೆಯೊಳಗಿನ ಎಲ್ಲ ಪಾತ್ರೆ ಪಡಗು, ಅರಿವೆ ಅಂಚಡಿಗಳನ್ನು ಗುಂಡನು ಎತ್ತಿಹಾಕಿ

ದ್ದನ್ನು ಕಂಡು ಎದೆ ಎದೆ ಬಡಕೊಂಡು ಅತ್ತಳು. ಸರಸಿಯ ಕೈಯೊಳಗಿನ ಹಣ ಕಾಸುಗಳಂತೂ ಈ ಮೊದಲೇ ಗುಂಡನ ಹಸ್ತಗತವಾಗಿ ಹೋಗಿದ್ದವು. ಆದರಿಂದ ಮರುದಿನ ಮಧ್ಯಾಹ್ನಕ್ಕೆ ಅಶನಾಭಾವಳಾದ ಆಕೆಯು ಇನ್ನು ಆ ಊರಲ್ಲಿರುವ ದಕ್ಕಿಂತ ನಾಲ್ಕು ದಿನ ಕುಮುದಿನಿಯ ಮನೆಗೆ ಹೋಗಿ ಬರಬೇಕೆಂದು ಯೋಚಿಸಿ ಮರುದಿನ ಸ್ಟೇಶನ್ನಿನ ದಾರಿ ಹಿಡಿದಳು. ಗುಂಡನು ಆಕೆಯ ಪ್ರಯಾಣವನ್ನು ಮರೆಗೆ ನಿಂತು ನೋಡಿ, ಈಕೆಗೆ ಈಕೆಯ ಬೀಗರ ಮನೆಯಲ್ಲೂ ಆಶ್ರಯ ದೊರೆಯ ಬಾರದೆಂಬ ಉದ್ದೇಶದಿಂದ ಆಗಲೆ ಒಂದು ಪತ್ರ ಬರೆದು, ಅದನ್ನು ವಲ್ಲಭರಾಯನ ಹೆಸರಿಗೆ ಕಳಿಸಿಬಿಟ್ಟನು. ಆ ಪತ್ರದಲ್ಲಿದ್ದ ಮುಖ್ಯ ಆಕ್ಷೇಪಣೆಯ ಸಂಗತಿಯೆಂದರೆ "ಕುಮುದಿನೀ, ನಾನು ನಿನ್ನ ಮಲತಾಯಿಗೆ ಚೆನ್ನಾಗಿ ಕಲಿಸಿ ಕಳಿಸಿರುತ್ತೇನೆ. ಅವಳು ನಿನಗೆಲ್ಲವನ್ನೂ ಹೇಳುವಳು. ನೀನು ನಿನ್ನ ಹಾಗು ನಿನ್ನ ನೆಗೆಣ್ಣಿಯ ಆಭರಣಗಳ ಡಬ್ಬಿಗಳನ್ನೂ ಮನೆಯೊಳಗಿನ ಕೈಗೆ ಸಿಕ್ಕ ಬೆಲೆಯುಳ್ಳ ಒಡವೆಗಳನ್ನೂ ಎತ್ತಿಕೊಂಡು ಬಾ. ಆ ಮೇಲೆ ನಾನೂ ನೀನೂ ಕೂಡಿ ಯಾವುದೊಂದು ಹಳ್ಳಿಯಲ್ಲಿ ಸುಖವಾಗಿ ಕಾಲ ಕಳೆಯೋಣ."

ಈ ಸಂಗತಿಯನ್ನು ಕೇಳಿ, ನರ್ಮದೆಗೂ ಒಂದು ಯುಕ್ತಿ ಹೊಳೆಯಿತು. ಮುನ್ನಾ ದಿನ ತಾನಾಗಿ ನರ್ಮದೆಗೆ ಕೊಟ್ಟಿದ್ದ ತನ್ನ ವಸ್ತ್ರ-ಒಡವೆಗಳ ಡಬ್ಬಿಯನ್ನು ಈ ಸರಸಿಯೇ ಎತ್ತಿ ಹಾಕಿ ಕುಮುದಿನಿಯ ಮುಖಾಂತರ ಕಳಿಸಿರುತ್ತಾಳೆಂದು ಆಕೆಯು ತನ್ನ ಗಂಡ-ಮೈದುನರಿಗೆ ತಿಳಿಸಿ ರಂಬಾಟ ಮಾಡಹತ್ತಿದಳು. ಆದರಿಂದಲೂ ಸರಸಿಯು ಆ ಮನೆಯಲ್ಲಿ ನಿಲ್ಲುವಂತಿರಲಿಲ್ಲ.

ಆಗ ಸರಸಿಯು "ನರ್ಮದಕ್ಕಾ, ನಿಮ್ಮ ಮೈದುನನೊಬ್ಬನು ಚಿಕ್ಕವನು. ಅವನು ನನಗೆ ಬಾಯಿಗೆ ಬಂದಂತೆ ಅನ್ನುತ್ತಿರುವನಲ್ಲದೆ, ನೀವೂ ನನ್ನ ಮೇಲೆ ಈ ಆರೋಪ ಹೊರಿಸಹತ್ತಿರುವಿರಲ್ಲಾ! ನಾನು ನಿಮ್ಮ ಮನೆಗೆ ಅದಾವ ದುಷ್ಟ ಮುಹೂರ್ತದಲ್ಲಿ ಹೊರಟಿದ್ದೇನೋ ಏನೊ?"

"ನೋಡಿದಿರಾ, ಅತ್ತಿಗಿ, ಈ ಕಳ್ಳರ ಕೂಗನ್ನು!" ಶಂಕರರಾಯನು ಅಂದನು.

"ಅಳಿಯದೇವರೇ, ನೀವು ನಿನ್ನಿನಿಂದ ನನ್ನ ಮೇಲೆ ಒಳ್ಳೇ ಕೈತೊಳಕೊಂಡು ಬೆನ್ನು ಹತ್ತಿರುವಿರಿ. ಆದರೆ............"

"ಸರಸಕ್ಕಾ, ನಿಮ್ಮ ಈ ಕಣ್ಣುಮುಚ್ಚಿನಾಟವನ್ನು ಸಾಕುಮಾಡಿರಿ. ಸುಮ್ಮನೆ ಹೊರಟು ಹೋಗಿರಿ. ಈಗಲೆ ನಿಮ್ಮನ್ನು ಪೋಲೀಸರ ಸ್ವಾಧೀನಪಡಿಸಿದರೆ ನಿಮ್ಮ ಎಲ್ಲ ಹೂರಣವೂ ಹೊರಬಿದ್ದು ಹೋದೀತು; ಆದರೆ ನಮ್ಮ ತೊಡೆಯ ತೆಗೆದು ನಾವೇ ಮರ್ಯಾದೆಗೇಡಾಗಬಾರದೆಂದು ನನಗನಿಸುತ್ತಿದೆ. ಹೊರಡಿರಿ. ಸುಮ್ಮನೆ ನಮ್ಮ ಮನೆಬಿಟ್ಟು ಹೊರಟು ಹೋಗಿರಿ. ಹೆಚ್ಚಿನ ಉಸಾಬರಿಗೆ ಹೋಗಬೇಡಿರಿ. ಬೇಕಾದರೆ ಈ ಪತ್ರ ನೋಡಿಕೊಳ್ಳಿರಿ" ಎಂದು ಹೇಳಿ ವಲ್ಲಭರಾಯನು ಆಕೆಯನ್ನು ತನ್ನ ಮನೆಯಿಂದ ಹೊರಗೆ ಹಾಕಿಸಲುದ್ಯುಕ್ತನಾದನು. ಅಷ್ಟರಲ್ಲಿ ನಿರ್ಮ

ಲೆಯು ಅಲ್ಲಿಗೆ ಬಂದಳು. ಕೂಡಲೆ ನರ್ಮದೆಯು ಅವಳನ್ನು ತನ್ನ ಕೋಣೆಗೆ ಕರೆದೊಯ್ದು ಆಕೆಯ ಕಿವಿಯಲ್ಲಿ ಏನೇನೋ ಹೇಳಿದಳು. ಬಳಿಕ ನಿರ್ಮಲೆಯು ಹೊರಗೆ ಬರಲು, ಸರಸಿಯು ಆಕೆಯ ಕಾಲು ಹಿಡಿದು:—"ನಿರ್ಮಲಕ್ಕಾ, ನಾನು ನಿನ್ನೆಯೇ ಇಲ್ಲಿಗೆ ಬಂದಿರಲು, ಬೆಳಗಾಗುವಷ್ಟರಲ್ಲಿ ಈ ನಮ್ಮ ಬೀಗರು ನನ್ನನ್ನು ಈ ಪರಿ ಅವಮಾನಗೊಳಿಸುತ್ತಿರುವರವ್ವಾ. ನೀವಾದರೂ ಇವರಿಗೆ ನಾಲ್ಕು ತಕ್ಕ ಮಾತುಗಳನ್ನು ಹೇಳಿರಿ" ಎಂದಳು.

ಆಗ ನಿರ್ಮಲೆಯು ಒಳ್ಳೇ ಮಾನಭಾವತನದಿಂದ:—"ಸರಸಕ್ಕಾ, ನೀನು ನಿಜವಾಗಿಯೂ ಗುಣವತಿಯಾಗಿದ್ದರೆ ನಿನ್ನನ್ನು ಆದಾರು ಅವಮಾನಗೊಳಿಸುವರು? ಆದರೆ ನಿನ್ನ ವಿಷಯದ ಈ ಪತ್ರವನ್ನು ಓದಿದರೆ ನಾನಾದರೂ ನಿನ್ನ ಬಗ್ಗೆ ಇವರಿಗೆ ಏನೆಂದು ಹೇಳಲಿ? ಈ ವಲ್ಲಭರಾಯ-ನರ್ಮದಾಬಾಯಿಯವರು ಸಜ್ಜನರೆಂದೇ ನಿನ್ನನ್ನು-ಸಾವಿರಾರು ರೂಪಾಯಿಗಳ ಅಲಂಕಾರಗಳನ್ನು ಎತ್ತಿಹಾಕಿದಂತಹ ನಿನ್ನನ್ನು-ಸೆರೆಮನೆಗೆ ಕಳಿಸದೆ ಬಿಡುತ್ತಿರುವರು."

ಸರಸಕ್ಕಾ, ನಿನ್ನ ಆತ್ಮಕ್ಕೀಗ ಶಾಂತಿ ದೊರೆತಿತೇ? ಪಾಪ! ಆ ಬಡ ಕುಮುದಿನಿಯನ್ನು ಸಂಸಾರಗೇಡು ಮಾಡುವ ಉದ್ದೇಶದಿಂದ ನೀನು ಇದುವರೆಗೆ ಅವಳನ್ನು ನಾನಾ ಬಗೆಯಿಂದ ಪೀಡಿಸಿ-ಕಾಡಿಸಿದೆಯಲ್ಲವೆ? ಆದರೆ ದೇವರು ನಿನಗೆ ಅದರ ಪ್ರತಿಫಲವನ್ನಿಂದು ಕೊಟ್ಟನಲ್ಲವೆ? ಇಷ್ಟೇ ಪ್ರತಿಫಲದಿಂದ ನಿನ್ನ ಪಾಪವು ಪಚನವಾಗದು. ದೇವರು ನಿನಗೆ ಇದಕ್ಕೂ ಹೆಚ್ಚು ಕಠಿಣತರವಾದ ಶಿಕ್ಷೆಯನ್ನು ಕೊಡಲಿ.

ಸರಸಿಯು ವಲ್ಲಭರಾಯನ ಮನೆಯಿಂದ ಹೊರಬಿದ್ದು ತನ್ನ ದೈವವನ್ನು ಹಳಿಯುತ್ತ ಬೀದಿ ಹಿಡಿದು ನಡೆದಿರಲು, ವಲ್ಲಭರಾಯನ ಮನೆಯಲ್ಲಿ ನಡೆದ ಪ್ರಕಾರವನ್ನೆಲ್ಲ ಅವರ ಮನೆಯ ಎದುರಿಗಿನ ಅಟ್ಟದ ಮೇಲೆ ನಿಂತು ನೋಡುತ್ತಿದ್ದ ಗುಂಡನು ಭರ್ರನೆ ಅಲ್ಲಿಂದ ಇಳಿದು ಬೇರೆ ಮಾರ್ಗದಿಂದ ಹೋಗಿ ಸರಸಕ್ಕನಿಗೆ ಎದುರಾದನು. ಗುಂಡನ ಮೇಲೆ ಹಲ್ಲುಕಡಿಯುತ್ತ ಆ ಊರಿಗೆ ಬಂದಿದ್ದ ಸರಸಕ್ಕನು ಬೀಗರ ಮನೆಯಲ್ಲಿ ಉತ್ತರ ಪೂಜೆಗೊಂಡದ್ದರಿಂದ ಹೈರಾಣಾಗಿ ನಡೆದಿರಲು, ಎದುರಿನಿಂದ ಬರುತ್ತಿದ್ದ ಗುಂಡನನ್ನು ಕಂಡು ಹಿಗ್ಗಿದಳು. ಗುಂಡನೆಂದರೆ, ಪಕ್ಕಾ ಬದ್ಮಾಷನು. ಆತನು ಸೂಳೆಯರ ದಲಾಲನು! ಅಂದಬಳಿಕ ಆತನ ಗುಣವರ್ಣನವನ್ನೇನು ಮಾಡುವದಿದೆ? ಗುಂಡನು ತನಗೆ ಏನೂ ಅರಿಯದಂತೆ ನಟಿಸಿ:—"ಸರಸಕ್ಕಾ, ನೀನು ನನಗೆ ಹೇಳದೆ ಕೇಳದೆ ಬಂದು ಬಿಡಬೇಕೆ? ನನ್ನನ್ನು ಕರೆದಿದ್ದರೆ ನಾನೂ ನಿನ್ನ ಜೊತೆಗೆ ಬಂದು ಬಿಡುತ್ತಿದ್ದೆನಲ್ಲಾ! ಈಗ ಎಲ್ಲಿಗೆ ಹೊರಟೆ?" ಎಂದು ಕೇಳಲು, ಸರಸಿಯು ತನ್ನ ಬೀಗರ ಮನೆಯಲ್ಲಿ ನಡೆದ ಸಂಗತಿಯನ್ನು ಸಂಕ್ಷಿಪ್ತವಾಗಿ ತಿಳಿಸಿ, ನನಗೆ ಈಗ ಬೇರೆ ಎಲ್ಲಿಯೂ ಆಶ್ರಯಸ್ಥಾನವಿಲ್ಲ; ಕಾರಣ ನೀನು ನನ್ನನ್ನು ಯಾವುದೊಂದು ಮಠಕ್ಕಾಗಲಿ, ಸತ್ಪುರುಷರ ಸನ್ನಿಧಿಗಾಗಲಿ ಕಳಿಸಿಕೊಡು, ಎಂದು ಬಿನ್ನಯಿಸಿದಳು.

ಕುಮುದಿನಿಯು ತಮ್ಮ ಹಸ್ತಗತಳಾಗದ್ದರಿಂದ ಗುಂಡ-ಚಂದ್ರಿಯರಿಗೆ ಕಡು ವಿಷಾದವೆನಿಸಿತ್ತು. ಅದರಿಂದ ಸರಸಿಯನ್ನಾದರೂ ತಮ್ಮ ಜಾಲದಲ್ಲಿ ತೊಡಗಿಸಿ ಕೊಂಡು ಹಾಲಿನ ಅಪೇಕ್ಷೆಯನ್ನು ಮಜ್ಜಿಗೆಯಿಂದಾದರೂ ತೀರಿಸಿಕೊಳ್ಳುವದನ್ನು ಅವರು ಯೋಜಿಸಿದ್ದರು. ಅಂತೆಯೇ ಗುಂಡನು ಚಂದ್ರಿಯ ಸಲಹೆಯ ಮೇರೆಗೆ ಸರಸಿಯನ್ನು ಅವಳಲ್ಲಿಗೆ ಕರೆದೊಯ್ಯುವ ಉದ್ದೇಶದಿಂದ ಬಂದಿದ್ದನು; ಆದರೆ ಸರಸಿಯು ತುಸ ದಿನ ಹೋದ ಹೆಂಗಸು. ಅದರಿಂದ ಹೆಚ್ಚು ಜನ ಗಿರಾಕಿಗಳು ಬರಲಾರವೆಂದೂ ವಲ್ಲಭರಾಯರ ಮನೆಯ ಎದುರಿಗೇ ಸರಸಿಯನ್ನು ಸೂಳೆಗಿರಿಗೆ ಸೇರಿಸಿಟ್ಟು ಕೊಳ್ಳುವದು ಧಂದೆಯ ದೃಷ್ಟಿಯಿಂದ ಯೋಗ್ಯವಲ್ಲೆಂದೂ ಬಗೆದು, ಗುಂಡನು ಸರಸಿಯನ್ನು ಬೇರೊಂದು ಕಡೆಗೆ ಕರೆದೊಯ್ದನು; ಹಾಗು ಅಲ್ಲಿ ತನಗೆ ಲಭಿಸಬೇಕಾಗಿದ್ದ ಹಣವನ್ನು ಪಡೆದು ಬೇರೆ ಮಾರ್ಗದಿಂದ ಹೊರಟು ಹೋದನು. ಅದರಿಂದ ಸರಸಿಯು ಭೇಂಡೀ ಬಝಾರದೊಳಗಿನ ಒಬ್ಬ ಪಠಾಣನ ಸೂಳೆಯರ ಅಡ್ಡೆಯೊಳಗಿನ ಒಂದು ಪಾತ್ರ ವಹಿಸಬೇಕಾಯಿತು.

ತಾನು ಮಂದಿಯ ಕೇಡು ಬಗೆಯ ಹೋದರೆ ತನ್ನ ಕೇಡು ಆಗದಿರದೆಂಬದಕ್ಕೆ ನಮ್ಮ ಸರಸಿಯೇ ಉದಾಹರಣವೆಂದು ಜನರೆಲ್ಲರೂ ಆಡಿಕೊಳ್ಳಹತ್ತಿದರು.

---

## ಪ್ರಾಯಶ್ಚಿತ್ತ.

ಸರಸಿಯನ್ನು ಹೊರದೂಡಿಸಿದ ದಿನ ಮಧ್ಯಾಹ್ನದಲ್ಲಿ ವಲ್ಲಭರಾಯನು ಶಂಕರರಾಯನನ್ನು ಕಮಲಾಕಾಂತ ಸಾಧುವಿನ ಕಡೆಗೆ ಕರೆದೊಯ್ದನು. ನಿರ್ಮಲೆಯು ನರ್ಮದೆಯನ್ನು ಆ ಮೊದಲೇ ಅಲ್ಲಿಗೆ ಕರೆದುಕೊಂಡು ಹೋಗಿದ್ದಳು.

"ಗುರುಮಹಾರಾಜರೇ, ನನಗೆ ಈಗ ಏನೂ ಹೊಳೆಯದಾಗಿದೆ. ಈ ಸಂಸಾರವು ಸಾಕೆನಿಸಿದೆ" ಎಂದು ವಲ್ಲಭರಾಯನು ಕಮಲಾಕಾಂತನ ಕಾಲುಗಳನ್ನು ಹಿಡಿದು ಅಂದನು

"ಅಪ್ಪಾ, ವಲ್ಲಭರಾಯಾ, ಸಂಸಾರವು ಸಾಕೆಂದರೆ ಹೇಗೆ ನಡೆದೀತು? ನೀವು ಲಗ್ನವಾಗಿರುತ್ತೀರಿ; ಅಲ್ಲದೆ ಮನೆಯಲ್ಲಿ ನೀವೇ ಹಿರಿಯರು. ಅದರಿಂದ ನೀವು ಲೋಕಾಪವಾದಗಳಿಗೆ ಅಂಜದೆ, ಧೈರ್ಯದಿಂದಿದ್ದು ಸಂಸಾರ ಸಾಗಿಸಬೇಕು."

ಶಂಕರರಾಯನು ಅಂದು ತಾನಾಗಿ ಕಮಲಾಕಾಂತನೆಡೆಗೆ ಬಂದಿರಲಿಲ್ಲ. ಅಣ್ಣ-ಅತ್ತಿಗೆಯರ ಕಾಟದಿಂದಲೇ ಅವನು ಹೋಗಿದ್ದನು. ವಸ್ತುತಃ ಆತನಿಗೆ ಆ ಸಾಧುವಿನ ಬಗ್ಗೆ ಕೊಂಚವೂ ಆದರವೆನಿಸುತ್ತಿರಲಿಲ್ಲ; ಪೂಜ್ಯ ಭಾವವಂತೂ ಪೂಜಿಯೇ ಆಗಿತ್ತು. ಅದರಿಂದ ಅವನು ಅಲ್ಲಿ ನಡೆವಿದ್ದ ವಲ್ಲಭರಾಯ-ಕಮಲಾಕಾಂತರ ಭಾಷಣದ ಕಡೆಗೆ ಲಕ್ಷ್ಯಗೊಡದೆ ತನ್ನ ಅಂತರಂಗದಲ್ಲಿ ನಡೆದಿದ್ದ ಕುಮುದಿನಿಯ ವಿಷಯದ ಆಲೋಚನೆಯಲ್ಲೇ ತಲ್ಲೀನನಾಗಿದ್ದನು. ಕಮಲಾಕಾಂತನು ಆತನನ್ನು ತನ್ನ

ಹತ್ತಿರಕ್ಕೆ ಕರೆದನು ಆತನ ಲಕ್ಷ್ಯವು ಆ ಕಡೆಗಿರಲಿಲ್ಲ. ಸಾಧುಗಳ ಅಪ್ಪಣೆಯಂತೆ ಶಂಕರರಾಯನು ನಡೆಯದ್ದರಿಂದ, ನರ್ಮದೆಯು ಸಿಟ್ಟಿನಿಂದ "ಮೈದುನರೇ, ಗುರುಗಳ ಮಾತಿನ ಕಡೆಗೆ ನಿಮ್ಮ ಲಕ್ಷ್ಯವೇ ಇಲ್ಲವೇನು? ಏಳಿರಿ ಬೇಗನೆ; ಹಾಗು ಹೋಗಿ ಹಿಡಿಯಿರಿ ಅವರ ಚರಣಗಳನ್ನು."

ಆದರೂ ಶಂಕರರಾಯನು ಏಳಲಿಲ್ಲ. ಆಗ ಸಾಧುಗಳೇ ವಲ್ಲಭರಾಯನನ್ನು ಕುರಿತು:—"ನಿಮ್ಮ ತಮ್ಮನಿನ್ನೂ ಚಿಕ್ಕವನು. ಈತನಿಗೆ ಜಗತ್ತಿನ ಅನುಭವವಿಲ್ಲ. ಆದರಿಂದ ಇನ್ನೆರಡು ದಿನ ಈತನ ಮನಃಸ್ಥಿತಿಯು ಹೀಗೆಯೇ ಇರತಕ್ಕದ್ದು; ಆದರೆ ನೀವು ಈ ಬಗ್ಗೆ ಕೊಂಚವೂ ಯೋಚಿಸಬೇಡಿರಿ."

"ಮಹಾರಾಜರೇ, ಕುಮುದಿನಿಯ ಮೂಲಕ ನಮ್ಮ ಮನೆತನಕ್ಕೆ ಹತ್ತಿದ ಕಲಂಕವು ಏತರಿಂದಲೂ ಹೋಗಲಾರದು; ಅಲ್ಲದೆ ನನ್ನ ಈ ಇದ್ದೊಬ್ಬ ತಮ್ಮನ ಮನಸ್ಸಿನ ಮೇಲೆ ಅದರ ಅನಿಷ್ಟ ಪರಿಣಾಮವಾಗಿದೆ. ನಾನೂ ಮುಂದಿಯಿಂದ ಸಿಕ್ಕ ಸಿಕ್ಕ ಹಾಗೆ ಅನಿಸಿಕೊಳ್ಳುವ ಪ್ರಸಂಗ ಬಂದಿದೆ."

ಆಗ ನಿರ್ಮಲಮ್ಮನು ನಡುವೇ ಬಾಯಿ ಹಾಕಿ ವಲ್ಲಭರಾಯನನ್ನು ಕುರಿತು: "ರಾಯರೇ, ಗುರುಮಹಾರಾಜರ ಮುಖದಿಂದ ಈ ಮೊದಲೇ ಅಭಯವಾಣಿಯು ಹೊರಬಿದ್ದು ಬಿಟ್ಟದೆ. ರಾಯರೇ, ನೀವು ಸುದೈವಿಗಳಂತೆಯೇ ಇವರಿಂದ ನಿಮಗೆ ಹಾಗೆ ಒಮ್ಮೆಲೆ ಅಭಯ ದೊರೆತಿರುವದು. ಆದರಿಂದ ಇನ್ನು ನಿಮ್ಮಗಳ ಅರಿಷ್ಟವೆಲ್ಲ ಪರಿಹಾರವಾಯಿತೆಂದು ತಿಳಿಯಿರಿ."

"ನಿರ್ಮಲಮ್ಮನವರೇ, ಇದೆಲ್ಲ ನಿಮ್ಮ ಅನುಗ್ರಹದ ಫಲವಾಗಿದೆ"

ಆಗ ಕಮಲಾಕಾಂತನು ಅನ್ನುತ್ತಾನೆ: "ವಲ್ಲಭರಾಯರೇ, ಕುಮುದಿನಿಯು ಒಂದು ವೇಳೆ ಮನೆಗೆ ಬಂದರೆ ನೀವು ಅವಳನ್ನು ಹೊರದೂಡಬೇಡಿರಿ ...."

"ಅಂದರೆ? ಅವಳು ಮತ್ತೆ ಬರುವಳೊ?" ನರ್ಮದೆಯು ಕೇಳಿದಳು.

"ನಿಮಗೆ ಇದುವರೆಗೆ ಬೋಧಿಸಿದ್ದು ಡಬ್ಬು ಕೊಡದ ಮೇಲೆ ನೀರು ಸುರುವಿದಂತೆಯೇ ಆಯಿತು. ನಿಮ್ಮಗಳ ವಿಶ್ವಾಸವು ನನ್ನಲ್ಲಿರದಿದ್ದರೆ ನೀವು ನನ್ನ ಬಳಿಗೇಕೆ ಬರುತ್ತೀರಿ?" ಕಮಲಾಕಾಂತನು ತುಸ ಸಿಟ್ಟಿನಿಂದಲೇ ನುಡಿದನು.

"ಛೇ-ಛೇ! ಹಾಗೆಂದಾದರೂ ಆದೀತೇ? ತಾವು ಹೀಗೆ ಸಿಟ್ಟಾಗಲಾಗದು' ಎಂದು ವಲ್ಲಭರಾಯನೂ ನರ್ಮದೆಯೂ ಕಮಲಾಕಾಂತನ ಚರಣಗಳ ಮೇಲೆ ಬಿದ್ದು ಹೊರಳಾಡಹತ್ತಿದರು.

"ವಲ್ಲಭರಾಯರೇ, ಕುಮುದಿನಿಯು ಮನೆಗೆ ಹಿಂದಿರುಗಿದ ಬಳಿಕ ನೀವಾರೂ' ಆಕೆಗೆ ಏನೊಂದೂ ಅನ್ನಬೇಡಿರಿ. ಅವಳನ್ನೂ ನೆಟ್ಟಗೆ ನನ್ನೆಡೆಗೆ ಕಳಿಸಿಕೊಡಿರಿ; ಆದರೆ ಅವಳನ್ನು ಇಲ್ಲಿಗೆ ಕಳಿಸುವ ಮೊದಲು ನನಗಿಷ್ಟು ಸೂಚನೆ ಕೊಡಿರಿ. ನಿಮ್ಮ ಮರ್ಯಾದೆಗಾಗಿ ಅವಳನ್ನಿನ್ನು ಇಲ್ಲಿ ಹೀಗೆ ಅಡ್ಡಾಡಗೊಡಲಾಗದು. ಅವಳನ್ನು ನಾನು ಕೆಲ ದಿನಗಳ ವರೆಗೆ ನನ್ನ ಬೇರೆ ಆಶ್ರಮಕ್ಕೆ ಕಳಿಸಿಕೊಡುತ್ತೇನೆ. ಅಂದರೆ

ಅವಳ ವೃತ್ತಿಯು ಕ್ಷಿಪ್ರದಲ್ಲಿಯೇ ಸುಧಾರಿಸುವದು."

"ಮಹಾರಾಜರೇ, ತಾವು ಹೇಳುವಂತೆಯೇ ಮಾಡುವೆನು" ವಲ್ಲಭರಾಯನು ಹೇಳಲು,

"ಮತ್ತು ಇಂದು ಸಂಜೆಗೆ ನರ್ಮದಾಬಾಯಿಯನ್ನು ಇತ್ತ ಕಡೆಗೆ ಕಳಿಸಿ ಕೊಡಿರಿ. ನಮ್ಮ ನಿರ್ಮಲಮ್ಮನು ಅವರನ್ನು ಕರೆತರಲಿಕ್ಕೆ ಬರುವಳು. ನಾನು ಇಂದು ರಾತ್ರಿ ಇಲ್ಲಿ ಒಂದು ಅನುಷ್ಠಾನ ಮಾಡಬೇಕಾಗಿದೆ. ಆಗ ಒಂದು ತಾಯಿತವನ್ನು ಮಂತ್ರಿಸಿ ಕೊಡುವೆನು. ಅದನ್ನು ನರ್ಮದಾಬಾಯಿಯು ತನ್ನ ಕೈಯಿಂದ ಈ ಶಂಕರರಾಯನಿಗೆ ಕಟ್ಟಬೇಕು. ಅವಳು ಮನೆಗೆ ಬಂದು ಶಂಕರರಾಯನ ಕೈಗೆ ತಾಯಿತ ಕಟ್ಟುವ ವರೆಗೆ ಅವಳನ್ನು ನೀವು ಕೂಡ ಮುಟ್ಟಕೂಡದು. ತಿಳಿಯಿತೆ?"

ಬಳಿಕ ವಲ್ಲಭರಾಯಾದಿಗಳು ಮನೆಗೆ ಹೊರಟರು. ಇಂದು ಅಥವಾ ನಾಳೆ ಸಂಜೆಯ ಮುಂದೆ ನಿನ್ನನ್ನು ಕರೆಯಲಿಕ್ಕೆ ಬರುತ್ತೇನೆಂದು ಹೇಳಿ ನಿರ್ಮಲೆಯು ನರ್ಮದೆಯನ್ನು ಕಳಿಸಿ ಕೊಟ್ಟಳು. ಅವರೆಲ್ಲರೂ ಹೊರಟು ಹೋದ ಬಳಿಕ ನಿರ್ಮಲೆಯು ಕಮಲಾಕಾಂತನನ್ನು ಕುರಿತು: "ಸಾಧುಗಳೇ, ನೀವು ಇಂದು ರಾತ್ರಿ ನರ್ಮದೆಯನ್ನು ಇಲ್ಲಿಗೇಕೆ ಬರಹೇಳಿದಿರಿ? ಏನಾದರೂ ಹೊಸ ಬೇತಿದೆಯೇನು? ಆದರೆ ಸಾಧುಗಳೇ, ಇಂದು ರಾತ್ರಿ ನಾನು ಇಲ್ಲಿಗೆ ಅನ್ಯರಾರನ್ನೂ ಬರಗೊಡಲಾರೆನು. ನನ್ನೀ ಮಾತು ನಡೆಸುವ ಇಚ್ಛೆಯು ನಿಮಗಿರದಿದ್ದರೆ ಇಗೋ, ನಾನು ಹೊರಟೆನು ಇಲ್ಲಿಂದ" ಎಂದು ಅಂದವಳೇ ನಿರ್ಮಲೆಯು ನಿಜವಾಗಿಯೂ ಆಶ್ರಮಬಿಟ್ಟು ಹೊರಟಳು. ಆಗ ಕಮಲಾಕಾಂತನು ಅವಳನ್ನು ರಮಿಸಿ ಬಶಮಾಡಿಕೊಂಡು 'ಇಂದು ನಾನು ನಿನ್ನ ಇಚ್ಛೆಯಂತೆಯೇ ನಡೆಯುತ್ತೇನೆ; ಆದರೆ ನಾಳೆ ಮಾತ್ರ ನೀನು ನರ್ಮದೆಯನ್ನು ಕರೆತರಲೇಬೇಕು' ಎಂದು ಹೇಳಲು, ನಿರ್ಮಲೆಯು ಅದಕ್ಕೆ ಒಡಂಬಟ್ಟು, ಅಚ್ಛೆಯಿಂದ ಕಮಲಾಕಾಂತನ ಅಂಕದಲ್ಲಿ ಕುಳಿತುಕೊಂಡಳು!

ವಲ್ಲಭರಾಯಾದಿಗಳು ಮನೆಗೆ ಹಿಂದಿರುಗಿದರು. ಆತನಿಗೆ ಸಾಧುಗಳು ನುಡಿದ ಮಾತಿನಲ್ಲಿ ಕೊಂಚವೂ ಅನುಮಾನವುಂಟಾಗಲಿಲ್ಲ; ಯಾಕಂದರೆ, ಆತನಲ್ಲಿಯ ವಿವೇಕವು ಎಂದೋ ಆತನನ್ನು ಕೈ ಬಿಟ್ಟು ಹೋಗಿತ್ತು. ಕಮಲಾಕಾಂತ-ನಿರ್ಮಲೆಯರ ಸಹವಾಸಯೋಗದಿಂದ ಆತನು ಪ್ರಜ್ಞಾಹತನಾಗಿದ್ದನು.

ಗುಂಡನು ಸರಸಿಯನ್ನು ಸಾಕಷ್ಟು ಹಣಕ್ಕೆ ಮಾರಿ ಮರುದಿನ ಸಂಜೆಯ ಮುಂದೆ ಚಂದ್ರಿಯ ಮನೆಗೆ ಹಿಂದಿರುಗಿದನು. ಆಗ ಆತನಿಗೆ ದಾರಿಯಲ್ಲಿ ನಿರ್ಮಲೆಯು ಭೆಟ್ಟಿಯಾದಳು. ಅವಳು ನರ್ಮದೆಯನ್ನು ತಮ್ಮ ಮಠಕ್ಕೆ ಕರೆದೊಯ್ಯಲಿಕ್ಕೆ ಹೊರಟಿದ್ದಳು. ಕೂಡಲೆ ಆತನು ಆಕೆಯನ್ನು ವಲ್ಲಭರಾಯನ ಮನೆಗೆ ನೆಟ್ಟಗೆ ಹೋಗಗೊಡದೆ, ಚಂದ್ರಿಯ ಕಡೆಗೆ ಕರಕೊಂಡು ಹೋದನು.

"ನಿರ್ಮಲಮ್ಮನವರೇ, ಇಷ್ಟು ದಿನ ಎಲ್ಲಿದ್ದಿರಿ? ಆ ಕುಮುದಿನಿಯನ್ನೆಲ್ಲಿ ಮಾಯ

ಮಾಡಿದಿರಿ?" ಎಂದು ಚಂದ್ರಿಯು ಕೇಳಲು, ನಿರ್ಮಲೆಯು ನಡೆದ ಸಂಗತಿಯನ್ನೆಲ್ಲ ಅವಳಿಗೆ ವಿಶದಪಡಿಸಿ, ವಲ್ಲಭರಾಯನ ಮನೆಯ ದಾರೀ ಹಿಡಿದಳು.

ಕುಮುದಿನಿಯ ಸಂಗತಿಯನ್ನು ಕೇಳಿ ಚಂದ್ರಿಗೆ ವಿಷಾದವೆನಿಸಿತು. ಆ ತರುಣಿಯನ್ನು ತಾವು ವ್ಯರ್ಥವಾಗಿ ಕಳೆದುಕೊಂಡೆವೆಂದು ಹಳಹಳಿಸಿದಳು. ಆದರೂ ಚಿಂತೆಯಿಲ್ಲ. ಅವಳು ಪುನಃ ಮನೆಗೆ ಬಂದುದಾದರೆ, ವಲ್ಲಭರಾಯಾದಿಗಳು ಅವಳನ್ನು ಮನೆಯಲ್ಲಿ ಸೇರಿಸಿಕೊಳ್ಳದೆ ನೆಟ್ಟಗೆ ಕಮಲಾಕಾಂತನ ಕಡೆಗೇ ಕಳಿಸುವರು. ಆ ಸಂಧಿಯನ್ನು ಸಾಧಿಸಿ, ನಾವು ಅವಳನ್ನು ನಮ್ಮ ಸಹಾಯಕ ಪಠಾಣರಿಂದ ಓಡಿಸಿ ಬಿಡಬೇಕು; ಅಂದರೆ ಅದರಿಂದ ಈ ನಿರ್ಮಲೆ-ಕಮಲಾಕಾಂತರಿಗೆ ಚೆನ್ನಾಗಿ ನಾಮಹಚ್ಚಿದಂತಾಗುವದಲ್ಲದೆ, ನಮ್ಮ ಕೆಲಸವು ನಿರ್ವಿಘ್ನವಾಗಿ ಕೈಗೂಡುವದು.

ಚಂದ್ರಿಯ ಈ ಬೇತಿಗೆ ಗುಂಡನೂ ಮನಮುಟ್ಟಿ ಹೂಂಕಾರಗೈದನು.

+ + + + + +

ಕುಮುದಿನಿಯು ಅಂದು ರಾತ್ರಿ ಅತ್ತ ಆ ರೈತರ ಗುಡಿಸಲಲ್ಲಿ ಪ್ರಜ್ಞೆ ಇಲ್ಲದೆ ಬಿದ್ದವಳು ಮರುದಿನ ಬೆಳಿಗ್ಗೆ ಸಾವಧಗೊಳ್ಳಹತ್ತಿದ್ದಳು. ತಾನು ಆ ಗುಡಿಸಲಿನಲ್ಲಿ ಬಿದ್ದುಕೊಂಡದ್ದನ್ನು ನೋಡಿ ಅವಳಿಗೆ ಹೇಗೆ ಹೇಗೋ ಅನಿಸಿತು. ಅದರಿಂದ ಅವಳು ಕಕ್ಕಾವಿಕ್ಕಿಯಾಗಿ ಆ ರೈತನ ಹೆಂಡತಿಯನ್ನು ಕುರಿತು: "ಅವ್ವಾ, ಇದು ಯಾವ ಊರು? ಯಾರ ಮನೆ? ನಾನು ಇಲ್ಲಿಗೆ ಹೇಗೆ ಬಂದೆನು?" ಎಂದು ಪ್ರಶ್ನ ಮಾಡಿದಳು.

"ತಂಗೀ, ನೀನು ಸ್ವಸ್ಥವಾಗಿರು. ನಿನಗೆ ಗುಣವಾದ ಬಳಿಕ ನಾವು ನಿನ್ನನ್ನು ನಿಮ್ಮ ಮನೆಯ ಪತ್ತೆಹಚ್ಚಿ ಕಳಿಸಿಕೊಡುತ್ತೇವೆ. ನಿನಗೆ ತುಸ ಹಾಲು ಕೊಡುತ್ತೇವೆ; ಕುಡಿ. ನಾವು ಬ್ರಾಹ್ಮಣೇತರರಾಗಿದ್ದರೂ ನಮ್ಮ ಮನೆಯ ಹಾಲು ಕುಡಿಯಲಿಕ್ಕೆ ಅಡ್ಡಿಯಿಲ್ಲ. ಸಾವಂತ್ರೀ, ಈ ಅವ್ವನವರಿಗೆ ಒಂದು ಬೆಳಗಿದ ಚರಗಿಯಲ್ಲಿ ಹಾಲು ತಂದು ಕೊಡು" ಎಂದು ಹೇಳಲು, ಆಕೆಯ ಸೊಸೆಯು ತಂದು ಕೊಟ್ಟ ಹಾಲನ್ನು ಕುಮುದಿನಿಯು ಕುಡಿದಳು.

ಬಳಿಕ ಆ ಮನೆಯ ಯಜಮಾನನು ಕುಮುದಿನಿಗೆ ಮುನ್ನಾದಿನ ನಡೆದ ಸಂಗತಿಯನ್ನೆಲ್ಲ ತಿಳಿಸಿದನು. ಅದನ್ನು ಕೇಳಿ ಆಕೆಗೆ ಮತ್ತೆ ಬವಳಿ ಬಂದಂತಾಯಿತು. ಆದರೂ ಅಲ್ಪೋಪಚಾರದಿಂದ ಅದು ಬೇಗನೆ ತಿಳಿಯಿತು. ಆಗ ಕುಮುದಿನಿಯು "ದೇವರೇ, ನೀನು ನನ್ನನ್ನು ಈ ಪರಿ ಗೋಳಾಡಿಸಲಿಕ್ಕೆಂದೇ ಈ ಲೋಕದಲ್ಲಿ ಹುಟ್ಟಿಸಿರುತ್ತೀಯೇನು? ಈ ಜನ್ಮದಲ್ಲಂತೂ ನಾನು ಯಾರ ಘಾತವನ್ನೂ ಮಾಡಿಲ್ಲ. ಅಡ್ಡದಾರಿ ಹಿಡಿದಿಲ್ಲ. ಕರ್ತವ್ಯವನ್ನು ಕೊಂಚವೂ ಕಣ್ಮರೆ ಮಾಡಿ ನಡೆದಿಲ್ಲ. ಅಂದ ಬಳಿಕ ದೇವರೇ, ನೀನು ನನ್ನ ಪೀಡೆಯನ್ನು ಹೀಗೆ ನೋಡುತ್ತ ಕುಳಿತಿರುವುದೇಕೆ? ದ್ರೌಪದಿಯ ಛಲನದಿಂದ ಹದ್ದಿನಂತೆ ಹಾರಿ ಬರುವ ಕೃಷ್ಣಾ, ಈ ಬಡ ಅಕಳ ಛಲನವನ್ನು ನೀನು ಎಲ್ಲಿಯ ವರೆಗೆ ನೋಡುತ್ತಿರುವೆ? ಅಪ್ಪಾ, ಭವಾನರಾಯಾ, ನೀನು

ನಿನ್ನೀ ಪ್ರೀತಿಯ ಕುವರಿಯ ಛಲನವನ್ನು ನೋಡಿಯೂ ನೋಡಿ ನೀನು ಸ್ವರ್ಗದೊಳಗಿಂದ ನನ್ನ ಬಿಡುಗಡೆಗಾಗಿ ಏಕೆ ಧಾವಿಸಿ ಬರಲೊಲ್ಲಿ! . ದೇವರೇ, ಈ ಮರ್ತ್ಯಲೋಕದಲ್ಲಿ ಸತ್ಯಕ್ಕೆ ಆಶ್ರಯವೇ ಇಲ್ಲವೇನು?" ಈ ಬಗೆಯಾಗಿ ಪ್ರಲಾಪಿಸ ಹತ್ತಿದಳು.

ಕೆಲ ಕ್ಷಣಗಳ ನಂತರ ಅವಳು ಆ ಹಳ್ಳಿಯ ರೈತರ ಸಾಂತ್ವನಪರ ಶಬ್ದಗಳಿಂದ ತನ್ನ ಶೋಕವನ್ನು ನಿಲ್ಲಿಸಿ, ಅವರಿಗೆ ತನ್ನ ಊರ ಹಾಗು ಮನೆಯ ಪತ್ತೆ ತಿಳಿಸಿ, ತನ್ನನ್ನು ಅಲ್ಲಿಗೆ ಹೇಗಾದರೂ ಮಾಡಿ ಬೇಗನೆ ಕಳಿಸಬೇಕೆಂದು ಅಂಗಲಾಚಿ ಬೇಡಿಕೊಂಡಳು.

ಕೂಡಲೆ ಅವರಲ್ಲಿಯ ೩-೪ ಜನ ಪ್ರಮುಖರು ಒಂದು ಎತ್ತಿನ ಗಾಡಿಯನ್ನು ಹೂಡಿ, ಕುಮುದಿನಿಯೊಡನೆ ತಮ್ಮ ಮನೆಯ ಒಬ್ಬಿಬ್ಬ ಹೆಣ್ಣುಮಕ್ಕಳನ್ನೂ ಕರಕೊಂಡು ವಲ್ಲಭರಾಯನ ಮನೆಯ ದಾರೀ ಹಿಡಿದರು.

ಕುಮುದಿನಿಯ ಶೋಧಕ್ಕಾಗಿ ಅಂದು ರಾತ್ರಿ ಹೊರಟಿದ್ದ ಭೀಮನಿಗೆ ಇದುವರೆಗೂ ಕುಮುದಿನಿಯ ಪತ್ತೆ ಹತ್ತಿರಲಿಲ್ಲ. ಅವನು ಕಮಲಾಕಾಂತನ ಮಠ, ಪಠಾಣರ ಬೀದಿ, ಊರ ಹೊರಗಿನ ಕಂದಕ, ಹಾಳು ಬಾವಿ ಮುಂತಾದವುಗಳನ್ನು ಕಳೆದ ೨ ದಿನಗಳಿಂದಲೂ ಸೂಕ್ಷ್ಮವಾಗಿ ಶೋಧಿಸಿದನು. ಎಲ್ಲಿಯೂ ಏನೂ ಸುಳಿವು ಹತ್ತಲಿಲ್ಲ. ಕಡೆಗೆ ಆತನು ಸುತ್ತಲಿನ ಹಳ್ಳಿಹಳ್ಳಿಗಳಲ್ಲಿ ಶೋಧಮಾಡಬೇಕೆಂದು ಯೋಚಿಸಿದನು; ಯಾಕಂದರೆ, ವಲ್ಲಭರಾಯನಿಗೆ ಬಂದ ಪತ್ರದಲ್ಲಿ 'ಯಾವನೋ ಕುಮುದಿನಿಯೊಡನೆ ಹಳ್ಳಿಯಲ್ಲಿರಬೇಕೆಂದಿರುವನೆ'ಂಬ ಹಾರಿಕೆಯ ಸಂಗತಿಯನ್ನು ಆತನು ಕೇಳಿಕೊಂಡಿದ್ದನು. ಅದರಿಂದ ಅವನು ಮೂರನೇ ದಿನ ಊರ ಹೊರಗಿನ ಮಾರ್ಗ ಹಿಡಿದು ನಡೆದಿರಲು, ಎದುರಿನಿಂದ ಬರುತ್ತಿರುವ ಬಂಡಿಯಲ್ಲಿ ಕುಮುದಿನಿಯು ಕಾಣಿಸಿಕೊಂಡಳು. ಕೂಡಲೆ ಭೀಮನಿಗೆ ಪರಮ ಸಂತೋಷವಾಯಿತು. ಭೀಮನನ್ನು ನೋಡಿದ ಕೂಡಲೆ ಕುಮುದಿನಿಯ ಶೋಕವು ಆವರಿಸದಾಯಿತು. ಆಕೆಯು ದೊಡ್ಡ ದನಿಯಿಂದ ಅತ್ತಳು. ಕಡೆಗೆ ಭೀಮನು ಆ ರೈತರನ್ನು ಅಲ್ಲಿಂದಲೇ ಹಿಂದಕ್ಕೆ ಕಳಿಸಿ, ಕುಮುದಿನಿಯನ್ನು ಮನೆಗೆ ಕರಕೊಂಡು ನಡೆದನು.

ಕುಮುದಿನಿಯು ಭೀಮನೊಡನೆ ಮನೆಯನ್ನು ಪ್ರವೇಶಿಸಿದಾಗ ವಲ್ಲಭರಾಯ-ನರ್ಮದೆಯರು ನಡುಮನೆಯಲ್ಲೀ ಇದ್ದರು. ಕೂಡಲೆ ಕುಮುದಿನಿಯು "ಭಾವನವರೇ" ಎಂದು ಅಂದು, ವಲ್ಲಭರಾಯರ ಕಾಲು ಹಿಡಿದಳು.

"ನಿರ್ಲಜ್ಜಳೇ, ಹಾಗೆಂದು ಅನ್ನಲಿಕ್ಕೆ ನಿನಗೆ ನಾಚಿಕೆಯೆನಿಸಲಿಲ್ಲವೇ?" ಎಂದು ನರ್ಮದೆಯು ತಿರಸ್ಕಾರದಿಂದ ನುಡಿದಳು.

"ಇಲ್ಲರೀ ಇಲ್ಲ. ನಾನು ಕೇವಲ ನಿರ್ದೋಷಳಾಗಿರುತ್ತೇನೆ. ಆ ಕಮಲಾಕಾಂತ ಟೊಣಪನು ಸಾಧುವಿರದೆ, ಹೊಲೆಯನಿದ್ದಾನೆ" ಎಂದು ಕುಮುದಿನಿಯು ದೀನವಾಣಿಯಿಂದ ನುಡಿಯಲು,

"ಸಾಕುಮಾಡೇ ನಿನ್ನೀ ಹಗಣವನ್ನು" ನರ್ಮದೆಯು ಕಿವಿಯಲ್ಲಿ ಬೊಟ್ಟು ಹಾಕಿಕೊಳ್ಳುತ್ತ ಅಂದು, "ಸೆಟವೀ, ಮಾಡುವ ಹೇಸಿ ಕೆಲಸವನ್ನು ಮಾಡಿ, ಮತ್ತೆ ಬಾಯಿಗೆ ಬಂದ ಹಾಗೆ ಬೊಗಳಬೇಡ. ಆ ಸಾಧು ಪುರುಷರಿಗೆ ಏನಾದರೂ ಅನ್ನಬೇಡ"

"ನರ್ಮದಕ್ಕಾ, ಆ ಸಾಧುವು ಕೇವಲ ಠಕ್ಕನು...." ಎಂದೆಂದು ಕುಮುದಿನಿಯು ಬಿಕ್ಕಿಬಿಕ್ಕಿ ಅಳಹತ್ತಿದಳು.

"ಕುಮುದಿನೀ, ನೀನು ನಿಷ್ಪಾಪಳೋ-ನಿರ್ದೋಷಿಯೋ ಎಂಬದನ್ನು ನಮ್ಮೆದುರಿಗೆ ಹೇಳಬೇಡ. ಅದನ್ನು ಯಾರಿಗೆ ತಿಳಿಸಬೇಕೋ ಅವರಿಗೆ ತಿಳಿಸು" ಎಂದು ಅಂದವನೇ ವಲ್ಲಭರಾಯನು ಅಲ್ಲಿಂದ ಬೇರೆ ಕಡೆಗೆ ನಡೆದನು. ನರ್ಮದೆಯೂ ಅವಳಿಗೆ ಏನೇನೋ ಅನ್ನುತ್ತ ಬೇರೆ ಕಡೆಗೆ ಹೊರಟು ಹೋದಳು. ಕುಮುದಿನಿಯು ಹಣೆ ಹಣೆ ಬಡಕೊಳ್ಳುತ್ತ ಅಳತೊಡಗಿದಳು. ಎಷ್ಟು ಅತ್ತರೂ ಅವರಾರಿಗೆ ದಯೆಯುಂಟಾಗಬೇಕಾಗಿದೆ? ಬಳಿಕ ಅವಳು ಮೆಲ್ಲನೆ ಗಂಡನ ಕೋಣೆಯನ್ನು ಪ್ರವೇಶಿಸಿದಳು. ಆಗ ಆತನು ಅಲ್ಲಿರಲಿಲ್ಲ. ಎಲ್ಲಿಯೋ ಹೊರಗೆ ಅಡ್ಡಾಡಲಿಕ್ಕೆ ಹೋಗಿದ್ದನು. ಆದರಿಂದ ಅವಳು ಅಲ್ಲಿಯ ಒಂದು ಚಾಪೆಯ ಮೇಲೆ ಬಿದ್ದುಕೊಂಡು, ತನ್ನ ದೈವವನ್ನು ಹಳಿಯಹತ್ತಿದಳು.

ಕುಮುದಿನಿಯು ಅಟ್ಟದ ಮೇಲಿನ ತನ್ನ ಕೋಣೆಗೆ ಹೋದದ್ದು ವಲ್ಲಭರಾಯನಿಗಾಗಲಿ ನರ್ಮದೆಗಾಗಲಿ ತಿಳಿಯಲಿಲ್ಲ. ಅವರಿಬ್ಬರೂ ತಮ್ಮ ಮಾತಿನಲ್ಲಿ ಗುಂಗಾಗಿದ್ದರು. "ನರ್ಮದೇ, ಸಾಧುಗಳು ನಮಗೆ ಏನು ಹೇಳಿದ್ದರೆಂಬದನ್ನು ಮರೆತೆಯೇನು?"

"ಕುಮುದಿನಿಯನ್ನು ಕಂಡೊಡನೆಯೇ ನನ್ನ ಸಿಟ್ಟು ಪ್ರಜ್ವಲಿಸಿತು. ಅದರಿಂದ ನನ್ನಿಂದ ಹಾಗೆ ವರ್ತನವಾಯಿತು. ಇರಲಿ. ನಾವಿನ್ನು ಅವಳನ್ನು ಗುರುಗಳ ಕಡೆಗೆ ಕಳಿಸಬೇಕಲ್ಲವೆ?"

"ಅಹುದು. ನಾಳೆ ಬೆಳಗ್ಗೆ ನಾನೇ ಹೋಗಿ ಆಕೆ ಮನೆಗೆ ಬಂದಿರುವದನ್ನು ಗುರುಗಳಿಗೆ ತಿಳಿಸುತ್ತೇನೆ; ಹಾಗು ಆ ಮೇಲೆ ಅವರು ಹೇಳುವಂತೆ ಮಾಡೋಣ."

"ಅದಿರಲಿ. ನೀವು ಅವಳನ್ನು ಚೆನ್ನಾಗಿ ನೋಡಿದಿರೇನು?"

"ಏನು ನೋಡುವದು, ಅವಳ ಸುಡುಗಾಡ ಮುಸುಡಿಯನ್ನು?"

"ಆಕೆಯ ಮೈ ಮೇಲೆ ಒಂದೂ ಅಲಂಕಾರವಿಲ್ಲ"

"ಅಂದರೆ? ಅವೇನಾದವು?"

"ಈ ಮುಂಡೆಯು ಎಲ್ಲ ಬಗೆಯಿಂದಲೂ ನಮ್ಮಗಳ ಸತ್ಯನಾಶ ಮಾಡಹತ್ತಿರುತ್ತಾಳೆ."

"ನರ್ಮದೇ ಮತ್ತೆ ಅದೇ ಮಾತಾಡಬೇಡ. ಗುರುಗಳ ಆಜ್ಞೆಯನ್ನು ಲ್ಲಂಘಿಸುವದು ಸರಿಯೇ? ನಮ್ಮಗಳ ಹಾನಿಯನ್ನೆಲ್ಲ ಗುರುಗಳು ತಮ್ಮ ಕೃಪಾಪ್ರಸಾದದಿಂದ ತುಂಬಿ ಕೊಡಲಾರರೇ? ಅದು ಏನೇ ಇರಲಿ, ಕುಮುದಿನಿಯನ್ನು ಕಂಡೊಡನೆಯೇ

ನಮ್ಮ ಶಂಕರನ ಚಿತ್ತವಾದರೂ ಸ್ಥಿರವಾದೀತಲ್ಲವೇ?"

"ನನಗಂತೂ ಹಾಗೆ ಅನಿಸುವದಿಲ್ಲ. ಅವಳು ಮತ್ತಿಷ್ಟು ಸಿಟ್ಟಿಗೇಳಬಹುದು"

ನರ್ಮದಕ್ಕನ ವಾಣಿಯು ಸತ್ಯವಾಯಿತು. ಏಕೆಂದರೆ, ಅದೇಕಾಲಕ್ಕೆ ಅಟ್ಟದ ಮೇಲಿನ ಕೋಣೆಯೊಳಗಿದ್ದ ಕುಮುದಿನಿಯು ಒಮ್ಮೆಲೆ ಚೀರಿದಳು. ಶಂಕರರಾಯನು ಈ ಮೊದಲೇ ಮನೆಗೆ ಬಂದು ತನ್ನ ಕೋಣೆಯನ್ನು ಪ್ರವೇಶಿಸಿದ್ದನು. ಗಂಡನು ಬಂದ ಕೂಡಲೆ ಅವಳು ಎದ್ದು ನಿಂತಳು. ಅವಳನ್ನು ಕಂಡೊಡನೆಯೇ ಆತನು ಕ್ರೋಧಭರದಿಂದ "ಚಂಡಾಲಿನೀ, ಮತ್ತೆ ನಮ್ಮ ಮನೆಗೆ ಬಂದೆಯಾ? ಹೊರಡು ಇಲ್ಲಿಂದ" ಎಂದು ಅಂದವನೇ ಆಕೆಯನ್ನೊಮ್ಮೆ ಆವೇಶದಿಂದ ಒದ್ದನು. ಆಗ ಅವಳು "ಅಯ್ಯೋ ದೈವವೇ!" ಎಂದು ಕೂಗಿದ ಕೂಗು ಕೆಳಗಿದ್ದ ನರ್ಮದೆ-ವಲ್ಲಭ ರಾಯರಿಗೆ ಕೇಳಿಸಿತು. ಕೂಡಲೆ ಅವರಿಬ್ಬರೂ ಅಲ್ಲಿಗೆ ಧಾವಿಸಿ ಹೋದರು. ಅವರನ್ನು ಕಂಡ ಕೂಡಲೆ ಶಂಕರರಾಯನು:--"ಅಣ್ಣಾ, ಈ ಚಂಡಾಲಿನಿಯನ್ನು ಪುನಃ ಮನೆಯಲ್ಲಿ ಸೇರಿಸಿಕೊಳ್ಳಲಿಕ್ಕೆ ನಿಮಗೆ ಏನೂ ಅನಿಸಲಿಲ್ಲವೆ? ಇವಳೊಡನೆ ನಾನೂ ಈ ಲೋಕದೊಳಗಿಂದ ನಿರ್ನಾಮವಾಗಬೇಕೆಂದು ನಿಮ್ಮ ಇಚ್ಛೆಯಿದೆಯೆ?" ಎಂದು ಕೇಳಲು,

"ತಮ್ಮಾ, ತುಸ ಶಾಂತನಾಗು; ಗುರುಗಳು ಏನು ಹೇಳಿರುವರೆಂಬದನ್ನು ಈಗಾಗಲೆ ಮರೆತೇ ಬಿಟ್ಟೆಯಾ?"

"ಅಣ್ಣಾ, ಝಕ್ಕಿಸುತ್ತಾರಾ ನಿಮ್ಮ ಗುರುಗಳು! ಈ ಬಗ್ಗೆ ನಾನು ಯಾರ ಮಾತನ್ನೂ ಕೇಳುವವನಲ್ಲ. ನಾನು ಮೊದಲು ಈ ಚಂಡಾಲಿನಿಯನ್ನು ಮನೆಯಿಂದ ಹೊರಗೆ ಹಾಕುತ್ತೇನೆ" ಎಂದು ಅಂದವನೇ, ಶಂಕರರಾಯನು ಕುಮುದಿನಿಯನ್ನು ತನ್ನ ಕೋಣೆಯೊಳಗಿಂದ ದರದರನೆ ಎಳೆಯುತ್ತ ಹೊರಗೆ ತಂದನು.

ಆಗ ನರ್ಮದೆಯು ಮುಂದೆ ಬಂದು:—"ವೈದುನರೇ, ಹೀಗೆ ಸಂತಾಪ ಗೊಳ್ಳಬೇಡಿರಿ. ಬೀದಿಯು ಹಾಗು ನೆರೆಹೊರೆಯ ಜನರು ಈ ನಿಮ್ಮ ಗದ್ದಲವನ್ನು ಕೇಳಿದರೆ ಏನಂದಾರು? ನಾವು ಈಕೆಯ ಇತ್ಯರ್ಥವನ್ನು ಇಷ್ಟರಲ್ಲೇ ಮಾಡುತ್ತೇವೆ. ನೀವು ನಿಮ್ಮ ಕೋಣೆಗೆ ಹೋಗಿ ಸ್ವಸ್ಥವಾಗಿ ಕುಳಿತುಕೊಳ್ಳಿರಿ."

"ಅತ್ತಿಗೀ, ನೀವು ಸುಮ್ಮನಿರ್ರಿ. ಈ ವಿಷಯದಲ್ಲಿ ನಾನು ನನ್ನ ತಂದೆಯ ಮಾತನ್ನು ಕೂಡ ಕೇಳತಕ್ಕವನಲ್ಲ" ಎಂದು ಹೇಳುವಷ್ಟರಲ್ಲಿ ಭೀಮನು ಬಂದು ಶಂಕರರಾಯನ ಕಾಲು ಹಿಡಿದು, "ದಾದಾನವರೇ, ತುಸ ಶಾಂತರಾಗಿರಿ. ಸ್ವಲ್ಪ ಯೋಚಿಸಿ ನೋಡಿರಿ. ನಿಮ್ಮ ಹೆಂಡತಿಯು ಯಾವ ಭಯಂಕರ ಪೇಚಿನಲ್ಲಿ ಸಿಕ್ಕಿದ್ದಳು? ಕಳೆದ ಎರಡು ದಿನಗಳಿಂದ ಇವಳ ಅವಸ್ಥೆ ಏನಾಗಿದೆ? ಮತ್ತು ನೀವು ಈಗ ಏನು ನಡೆಸಿರುತ್ತೀರಿ? ಅಣ್ಣನವರೇ, ನಿಮಗಾದರೂ ತಿಳಿಯಬಾರದೇನು?" ಎಂದು ಶಂಕರರಾಯ-ವಲ್ಲಭರಾಯರಿಗೆ ಅಂದನು.

"ಸಾಕು ಮಾಡೋ ಮುದುಕಾ, ನಿನ್ನೀ ಜಾಣ್ಮೆಯನ್ನು. ಇವಳ ಬಗ್ಗೆ ದಯೆ

ಯೆನಿಸಿದರೆ, ನೀನೂ ಇವಳನ್ನು ಕೂಡಿಕೊಂಡು ಹೋಗು" ಎಂದು ಶಂಕರರಾಯನು ಅನ್ನಲು,

"ದೇವರೇ, ಈ ಅಭದ್ರ ನುಡಿಗಳನ್ನು ಕೇಳಲಿಕ್ಕೆಂದೇ ನನ್ನನ್ನು ಜೀವದಿಂದ ಇಟ್ಟಿರುವೆಯಾ? ಭಾವನವರೇ, ನೀವೂ ನನ್ನನ್ನು ಕಠೋರತನದಿಂದ ನೋಡುತ್ತಿರುವಿರಾ? ನನ್ನ ಬಗ್ಗೆ ಇವರಾರಿಗೂ ಏಕೆ ದಯೆಯುಂಟಾಗಲೊಲ್ಲದು?"

ಕೂಡಲೆ ಶಂಕರರಾಯನು ಅವಳನ್ನು ಮತ್ತೆ ಒದೆಯುವದಕ್ಕಾಗಿ ಕಾಲು ಎತ್ತಲು, "ನಾಥ" ಎಂಬ ಶಬ್ದವು ಆಕೆಯ ಬಾಯಿಂದ ಹೊರಟೊಡನೆಯೇ ಆತನು "ಮುಂಡೇ, ಮುಚ್ಚು ಬಾಯಿ!" ಎಂದು ಅಂದವನೇ ಒದ್ದನು. ಆಗ ಭೀಮನು ಶಂಕರರಾಯನನ್ನು ಒತ್ತಟ್ಟಿಗೆ ಜಗ್ಗಿ ವಲ್ಲಭರಾಯನನ್ನು ಕುರಿತು:—"ಅಣ್ಣನವರೇ, ಈ ಮುದುಕನ ಕೂದಲು ಈ ಮನೆಯಲ್ಲೇ ಬೆಳ್ಳಗಾದವು. ಈ ಕುಮುದಿನಿಯು ಹೇಗೆ ನಿರ್ದೋಷಳಿರುವಳೆಂಬದನ್ನು ನಾನು ಇಂದೇ ನಿಮ್ಮೆಲ್ಲರಿಗೆ ಖಾತ್ರಿಮಾಡಿ ಕೊಡುತ್ತೇನೆ; ಹಾಗೆ ಮಾಡಿಕೊಡುವದು ನನ್ನಿಂದ ಆಗದಿದ್ದರೆ ನಾನು ಇಲ್ಲಿಯೇ ನಿಮ್ಮ ಚರಣಗಳಲ್ಲಿ ಬಿದ್ದು ಪ್ರಾಣಬಿಡುವೆನು. ಈ ಮುದುಕನ ಮಾತನ್ನು ಇಷ್ಟಾದರೂ ನಡಿಸಿಕೊಡಿರಿ." ಎಂದು ಹೇಳಲು, ಆ ಭೀಮನ ವಚನಗಳಿಂದ ಶಂಕರರಾಯ-ವಲ್ಲಭರಾಯರು ಶಾಂತರಾದರು. ಕುಮುದಿನಿಯು ಅಳುತ್ತ ಬೇರೆ ಕಡೆಗೆ ಹೊರಟು ಹೋದಳು.

ಅಂದೇ ಸಂಜೆಯ ಮುಂದೆ ನಿರ್ಮಲೆಯು ನರ್ಮದೆಯನ್ನು ಮಠಕ್ಕೆ ಕರೆದೊಯ್ದಳು. ನರ್ಮದೆಯ ಬಾಯಿಂದ ಕುಮುದಿನಿಯು ಮನೆಗೆ ಬಂದಿರುವಳೆಂಬ ಸಂಗತಿ ಕೇಳಿ ಕಮಲಾಕಾಂತನು ಅವಳನ್ನು ತನ್ನಲ್ಲಿಗೆ ಕರೆತರಲಿಕ್ಕೆ ವಲ್ಲಭರಾಯನಿಗೆ ಹೇಳಿ ಕಳಿಸಿದನು. ಆಗ ಭೀಮನು ಶಂಕರರಾಯ-ವಲ್ಲಭರಾಯರಿಗೆ ಕೆಲ ಸೂಕ್ಷ್ಮ ಸಂಗತಿ ತಿಳಿಸಿ, ಕುಮುದಿನಿಯನ್ನು ಅಲ್ಲಿಗೆ ಕಳಿಸಿ ಬಂದನು; ಹಾಗು ಅವರೀರ್ವರೊಡನೆ ಪೋಲೀಸ ಚಾವಡಿಗೆ ಹೋಗಿ, ಪೋಲೀಸ ಇನ್ಸಪೆಕ್ಟರರಿಗೆ ಕೆಲ ಗುಪ್ತ ಸಂಗತಿ ತಿಳಿಸಿದನು. ಕೂಡಲೆ ಇನ್ಸಪೆಕ್ಟರನು ಶಂಕರರಾಯ-ವಲ್ಲಭರಾಯ-ಭೀಮ ಇವರೊಡನೆ ಆ ಮಠಕ್ಕೆ ಹೋಗಿ, ಅದಕ್ಕೆ ಹೊಂದಿದ ಒಂದು ಮನೆಯಲ್ಲಿ ಕುಳಿತುಕೊಂಡನು; ಹಾಗು ಕೆಲ ಜನ ಪೋಲಿಸ ಪೇದೆಗಳಿಗೆ ಸಾದಾ ಡ್ರೆಸ್ಸಿನಿಂದ ಆ ಮಠದ ಸುತ್ತಲೂ ನಿಂತು ಬೆಳತನಕ ಪಹರೆ ಮಾಡಹೇಳಿದನು.

ರಾತ್ರಿಯ ೯ ಕ್ಕೆ ಕಮಲಾಕಾಂತ ಸಾಧುವಿನ ಅನುಷ್ಠಾನವು ಪೂರೈಸಿತು. ಬಳಿಕ ಆತನು ನರ್ಮದೆಯನ್ನು ಹತ್ತರ ಕರೆದು ಆಕೆಯನ್ನು ತನ್ನ ಬಲಗಡೆಗೆ ಕೂಡ್ರು ಹೇಳಿದನು. ನಿರ್ಮಲೆಯು ಕುಮುದಿನಿಯನ್ನು ಅಲ್ಲಿಗೆ ಕರೆತಂದಳು. ಕುಮುದಿನಿಯು ಈ ದಿನ ಕೊಂಚವೂ ಅಧೈರ್ಯಪಡಲಿಲ್ಲ. ಸಾಧುವು ಮೊದಲು ನರ್ಮದೆಯನ್ನು ವಿವಸ್ತ್ರಗೊಳಿಸಿ, ಭ್ರಷ್ಟಪಡಿಸಿ, ನಂತರ ಆಕೆಯ ಹಾಗು ನಿರ್ಮಲೆಯ ನೆರವಿನಿಂದ ಕುಮುದಿನಿಗೆ ಕೈಹಚ್ಚುವದನ್ನು ನಿರ್ಧರಿಸಿಕೊಂಡಿದ್ದನು. ಅಂತೆಯೇ

ಆತನು ಬಳಿಯಲ್ಲಿ ಕುಳಿತಿದ್ದ ನರ್ಮದೆಯ ಕಿವಿಯಲ್ಲಿ ಯಾವುದೋ ಮಂತ್ರೋಪದೇಶ ಮಾಡುವ ಹಾಗು ಆಕೆಯ ಕೈಯಲ್ಲಿ ತಾಯಿತ ಕೊಡುವ ನೆವದಿಂದ ಅವಳನ್ನು ಹತ್ತರ ಜಗ್ಗಿಕೊಂಡನು. ಆಗಿನ ಆತನ ಹಸ್ತಸ್ಪರ್ಶದಿಂದ ನರ್ಮದೆಯು ಹೌಹಾರಿದಳು; ಹಾಗು ಅವಳು ಒಮ್ಮೆಲೆ ಚಿಟ್ಟನೆ ಚೀರಿದಳು. ಕೂಡಲೆ ನಿರ್ಮಲೆಯು ಅವಳ ಬಾಯಲ್ಲಿ ಅರಿವೆ ತುರುಕಿದಳು. ಇನ್ನು ಕಮಲಾಕಾಂತನು ಅವಳನ್ನು ವಿವಸ್ತ್ರಗೊಳಿಸತಕ್ಕವನು; ಅಷ್ಟರಲ್ಲಿ ದೂರದಲ್ಲಿ ನಿಂತುಕೊಂಡಿದ್ದ ಕುಮುದಿನಿಯು ಭರದಿಂದ ಬಂದು ಆತನ ಬೆನ್ನ ಮೇಲೊಮ್ಮೆ ಬಲವಾಗಿ ಗುದ್ದಿದಳು. ಅದನ್ನು ಕಂಡು ನಿರ್ಮಲೆಯು ಆಕೆಯ ಮೈ ಮೇಲೆ ಏರಿ ಬಂದಳು. ಕೂಡಲೆ ಕುಮುದಿನಿಯು ಆವೇಶಗೊಂಡವಳಾಗಿ, ಬಾಯಿಂದ ಅವರ ಕುಲಕೋಟಿಯನ್ನುದ್ಧರಿಸುತ್ತ ನಿರ್ಮಲೆಯ ಸೊಂಡೆಯ ಮೇಲೊಮ್ಮೆ ಬಿಗಿದಳು. ಆ ಬಲವಾದ ಪೆಟ್ಟಿನಿಂದ ನಿರ್ಮಲೆಯು ಚಿವ್ವು ಗುಟ್ಟುತ್ತ ಕುಮುದಿನಿಯನ್ನು ಹೊಡೆಯ ಬಂದಳು. ಇದೆಲ್ಲ ಪ್ರಕಾರವನ್ನು ನೋಡುತ್ತ ನರ್ಮದೆಯು ಜೀವಂತ ಶ್ರವದಂತೆ ಸುಮ್ಮನೆ ನಿಂತುಕೊಂಡಿದ್ದಳು. ಕಮಲಾಕಾಂತನು ಕುಮುದಿನಿಯ ಪೆಟ್ಟಿನಿಂದ ತುಸ ಚೇತರಿಸಿಕೊಂಡ ನಂತರ ಆತನು ಮತ್ತೆ ತನ್ನ ಮೊದಲಿನ ಉದ್ಯೋಗಕ್ಕೆ ಹತ್ತಿದನು.

ಮಠಕ್ಕೆ ಹೊಂದಿದ್ದ ಕೋಣೆಯಲ್ಲಿ ಗುಪ್ತವಾಗಿ ಕುಳಿತುಕೊಂಡು ಒಳಗೆ ನಡೆದಿದ್ದ ಪ್ರಕಾರವನ್ನು ನೋಡಿದ ಶಂಕರರಾಯ-ವಲ್ಲಭರಾಯಾದಿಗಳಿಗೆ ಆ ಸಾಧು-ಶರಣಮ್ಮಗಳ ವಿಷಯವಾಗಿ ಕಡು ತ್ವೇಷವುಂಟಾಯಿತು. ಆಗ ಅವರು ತಮ್ಮ ಭೀಮ-ಪೋಲೀಸ ಇನ್ಸಪೆಕ್ಟರರೊಡನೆ ಆ ಮಠವನ್ನು ಹೇಗಾದರೂ ಪ್ರವೇಶಿಸಿ, ಆ ಚಂಡಾಲರ ಕೈಯೊಳಗಿಂದ ನರ್ಮದೆಯನ್ನು ಬಿಡಿಸಿಕೊಳ್ಳಬೇಕೆಂದು ಹವಣಿಸಿದರು. ಬಾಗಿಲವು ಭದ್ರವಾಗಿ ಇಕ್ಕಲ್ಪಟ್ಟಿತ್ತು. ಅವರು ಹೊರಗಿನಿಂದ ಬಾಗಿಲು ಮುರಿಯಲಿಕ್ಕೆ ಪ್ರಯತ್ನಿಸ ಹತ್ತಲು, ನಿರ್ಮಲೆಯು ಗಾಬರಿಗೊಂಡು ಅಲ್ಲಿದ್ದ ಎಲ್ಲ ಬೆಲೆಯುಳ್ಳ ಅಲಂಕಾರಗಳ ಮೊಟ್ಟೆಯನ್ನು ಕಟ್ಟಿಕೊಂಡು ಮಠದ ಹಿತ್ತಲ ಬಾಗಿಲ ದಾರೀ ಹಿಡಿದಳು. ಕಮಲಾಕಾಂತನು ವಿಷಯಾಂಧನಾದದ್ದರಿಂದ ಆ ಬಾಗಿಲ ಮುರಿಯುವ ಗದ್ದಲವು ಅವನ ಕರ್ಣರಂಧ್ರವನ್ನು ಪ್ರವೇಶಿಸಲಿಲ್ಲ. ಆತನು ಮತ್ತಿಷ್ಟು ಜಿಗಟನಿಂದ ನರ್ಮದೆಯ ಮೈ ಮೇಲೆ ಏರಿ ಹೋಗಹತ್ತಿದನು.

ಬಾಗಿಲ ಮುರಿಯುವದು ದುಷ್ಕರವಾಯಿತು. ಆಗ ಭೀಮನು ಮೆಲ್ಲನೆ "ಕುಮುದಿನೀ, ನಾನು ಭೀಮನು ಹೊರಗೆ ನಿನ್ನ ಸಹಾಯಕ್ಕಾಗಿ ಬಂದಿರುತ್ತೇನೆ. ಹೇಗಾದರೂ ಮಾಡಿ ಬೇಗನೆ ಬಾಗಿಲು ತೆರೆ" ಎಂದು ಅಂದನು. ಅದನ್ನು ಕೇಳಿ ಕುಮುದಿನಿಯು ಬಾಗಿಲ ತೆರೆದಳು. ಶಂಕರರಾಯನು ಓಡುತ್ತ ಬಂದು ಕಮಲಾಕಾಂತ ಸಾಧುವಿನ ಎದೆಗೆ ಒದ್ದು ನೆಲಕ್ಕೆ ಕೆಡಹಿದನು. ಭೀಮನು ಸಾಧುವಿನ ಕೈಕಾಲುಗಳನ್ನು ಕಟ್ಟಿದನು. ಇನ್ಸಪೆಕ್ಟರನು ನಿರ್ಮಲೆಯನ್ನು ಶೋಧಿಸಹತ್ತಿದನು. ಮಠದಲ್ಲೆಲ್ಲಿಯೂ ಅವಳ ಪತ್ತೆ ಹತ್ತಲಿಲ್ಲ. ಅಷ್ಟರಲ್ಲಿ ಸುತ್ತಲೂ ಪಹರೆಗಿದ್ದ ಪೇದೆಗಳ

ಲ್ಲಿಯ ಕೆಲಜನ ಪೋಲೀಸರು ನಿರ್ಮಲಾಶರಣಮ್ಮಳನ್ನು ಆಕೆಯು ಹೊತ್ತೊಯ್ಯುತ್ತಿದ್ದ ಭಾರೀ ಬೆಲೆಯ ಸಾಮಾನಿನೊಡನೆ ಹಿಡತಂದು ಇನ್ಸಪೆಕ್ಟರನೆದುರಿಗೆ ನಿಲ್ಲಿಸಿದರು.

ಆ ಸಾಧು ಶರಣಮ್ಮರ ನಿಂದ್ಯ ಕೃತ್ಯಗಳನ್ನು ಕಣ್ಣುಟ್ಟು ನೋಡಿದ್ದ ವಲ್ಲಭರಾಯನು ಅವರಿಗೆ ಏನೊಂದೂ ಅನ್ನಲಿಲ್ಲ; ಯಾಕಂದರೆ ಆತನಲ್ಲಿಯ ಪ್ರಜ್ಞೆಯನ್ನು ಆ ಸಾಧು ವೇಷಧಾರಿಯಾದ ಕಮಲಾಕಾಂತನು ತನ್ನ ಬಲವಾದ ಬೋಧದಿಂದ ಎಂದೋ ಕೊಲೆಗೈದು ಬಿಟ್ಟಿದ್ದನು ಆದರಿಂದಲೇ ವಿವೇಕಶೂನ್ಯನಾದ ವಲ್ಲಭರಾಯನು ಪ್ರತ್ಯಕ್ಷ ತನ್ನ ಹೆಂಡತಿಯ ಮೇಲೆ ಅತ್ಯಾಚಾರ ಮಾಡುತ್ತಿದ್ದ ಆ ನರರಾಕ್ಷಸನ ಮೇಲೆಯೂ ಕೈಮಾಡದಾದನು.

ಮುಂದೆ ಕಮಲಾಕಾಂತ ಸಾಧುಗಳಿಗೂ ನಿರ್ಮಲಾ ಶರಣಮ್ಮನವರಿಗೂ ಸರಕಾರದವರಿಂದ ಅವರ ನಿಂದ್ಯ ಕೃತ್ಯಗಳಿಗೆ ತಕ್ಕ ಪ್ರಾಯಶ್ಚಿತ್ತವು ಲಭಿಸಿತು.

---

## ಉಪಸಂಹಾರ.

-o o o-

ಕಮಲಾಕಾಂತ-ನಿರ್ಮಲೆಯರ ನಿಂದ್ಯ ಕೃತಿಗಳನ್ನು ನೋಡಿ ಶಂಕರರಾಯನು ತನ್ನ ಅಣ್ಣನಿಗೂ ಅತ್ತಿಗೆಗೂ ಹಲವು ವಿಧದಿಂದ ಅಂದನು. "ನಾನು ಮೊದಲಿನಿಂದಲೂ ನಿಮಗೆ ಅವರ ಬಗ್ಗೆ ಎಚ್ಚರ ಕೊಡುತ್ತಿರಲು ನೀವು ಅವರನ್ನು ಈ ಪರಿ ನಂಬತಕ್ಕದ್ದಿರಲಿಲ್ಲ. ನೀವು ಅವರನ್ನು ನಂಬಿ ನಮ್ಮ ಮನೆಯೊಳಗೆ ಪ್ರವೇಶಗೊಳಿಸಿದ್ದರಿಂದಲೇ ನಾವು ಹಲವು ವಿಧದಿಂದ ಜನ ನಿಂದೆಗೆ ಕಾರಣರಾಗಬೇಕಾಯಿತು. ನೀಚರು ಇದುವರೆಗೆ ನಮ್ಮ ಬಳಿಯ ಸಾವಿರಗಟ್ಲೆ ಹಣವನ್ನು ಹರಣ ಮಾಡಿದ್ದಲ್ಲದೆ, ನಮ್ಮಗಳ ಹೆಂಡಂದಿರನ್ನೂ ಭ್ರಷ್ಟಗೊಳಿಸಲುದ್ಯುಕ್ತರಾಗಿದ್ದರು. ಕಾರಣ ಇನ್ನು ಮೇಲೆ ನೀವಿಬ್ಬರೂ ಬಹು ಎಚ್ಚರಿಕೆಯಿಂದ ವರ್ತಿಸತಕ್ಕದ್ದು." ಎಂದು ಹೇಳಿದ ಶಂಕರರಾಯನ ಅನುಭವ ಜನ್ಯ ಮಾತುಗಳಿಂದ ಇಂದು ನರ್ಮದೆಗಾಗಲಿ ವಲ್ಲಭರಾಯನಿಗಾಗಲಿ ಕೆಡಕೆನಿಸಲಿಲ್ಲ. ಅವರು ಅಂದಿನಿಂದ ವೇಷಧಾರಿ ಸಾಧು-ಸತ್ಪುರುಷರ ಉಸಾಬರಿಗೆ ಹೋಗದಾದರು.

ಕುಮುದಿನಿಯು ತನ್ನ ಗಂಡನಿಗೂ ಭಾವ-ನೆಗಣ್ಣಿಯರಿಗೂ ಕಮಲಾಕಾಂತ-ನಿರ್ಮಲೆಯರ ಈ ಮೊದಲಿನ ಎಲ್ಲ ನಿಂದ್ಯ ಕೃತ್ಯಗಳನ್ನು ವಿವರಿಸಿ ಹೇಳಿದಳು. ಕಮಲಾಕಾಂತನ ವಿಷಯದಲ್ಲಿ ನರ್ಮದೆಗೆ ಮೊದಲಿನಿಂದಲೂ ಅನಾದರವಿದ್ದಿತು; ಆದರೆ ನಿರ್ಮಲೆಯ ಸಂಗತಿಯಿಂದಲೂ ಆಕೆಯ ಬೋಧದಿಂದಲೂ ತನಗೆ ಆ ಸತ್ಪುರುಷನ ಅನುಗ್ರಹದಿಂದ ಗಂಡು ಸಂತಾನವಾಗುವದೆಂಬ ಹಂಬಲದಿಂದ ಅವಳು ಅವನನ್ನು ಭಜಿಸತೊಡಗಿದ್ದಳು.

ವಲ್ಲಭರಾಯನು ಸಂಸಾರ ಕಾರ್ಯದಲ್ಲಿ ಎಷ್ಟು ದಕ್ಷನಾಗಿದ್ದನೋ ಸಾಧು ಸತ್ಪುರುಷರ ವಿಷಯದಲ್ಲಿ ಅವಕ್ಕೆ ವಿಪರೀತವಾಗಿ ವರ್ತಿಸುತ್ತಿದ್ದನು. ಸಂತಾನಾ

ಭಾವದಿಂದ ಆತನ ಅಂತರಂಗವೂ ಬೆಂದಿದ್ದಿತು. ಆದರಿಂದ ಆ ಸಾಧು-ಕೃಪೆಯಿಂದ ತಮ್ಮ ದೀಪವು ಸ್ಥಿರವಾದೀತೆಂದು ಬಗೆದು, ಆತನು ಅವರ ಸೇವೆಯಲ್ಲಿ ತತ್ಪರನಾಗಿದ್ದನು; ಆದರೆ ಆ ವೇಷಧಾರಿಗಳಾದ ಸಾಧು ಶರಣಮ್ಮಗಳ ಅನುಗ್ರಹವಿಶೇಷದಿಂದ ಅವರೆಲ್ಲರೂ ಹಲವು ವಿಧದ ಕಷ್ಟನಷ್ಟಗಳಿಗೆ ಗುರಿಯಾದದ್ದಲ್ಲದೆ ಇನ್ನು ಕೆಲ ದಿನಗಳ ವರೆಗೆ ಅದೇ ಸ್ಥಿತಿಯು ಉಳಿದಿದ್ದರೆ, ಅವರ ಮನೆತನದ ದೀಪವು ಸಂಪೂರ್ಣವಾಗಿ ನಂದಿ ಹೋಗುತ್ತಿತ್ತು!

ಕಮಲಾಕಾಂತ-ನಿರ್ಮಲೆಯರು ಆಂದಮಾನದ್ವೀಪದ ದಾರೀ ಹಿಡಿದ ಮೇಲೆ ವಲ್ಲಭರಾಯ-ನರ್ಮದೆಯರು ತಮ್ಮ ಮನೆತನದ ಸಂಪೂರ್ಣ ಭಾರವನ್ನು ಶಂಕರರಾಯ-ಕುಮುದಿನಿಯರ ಮೇಲೆ ಹೊರಿಸಿ, ತಾವು ಮನೆಯಲ್ಲೇ ಇದ್ದು ದೇವರ ಚಿಂತನದಲ್ಲಿ ಕಾಲಕಳೆಯ ಹತ್ತಿದರು. ಅವರು ಇತ್ತೀಚೆಗೆ ಕುಮುದಿನಿಯನ್ನು ತಮ್ಮ ಹೊಟ್ಟೆಯ ಮಗಳಂತೆ ಪ್ರೀತಿಸಹತ್ತಿದರು. ಗುಣಪೂರ್ಣರನ್ನು ಅದಾರು ಮನ್ನಿಸಲಿಕ್ಕಿಲ್ಲ?

ಮುಂದೆ ಕೆಲ ದಿನಗಳಲ್ಲಿಯೇ ಕಮಲೆಯು ವಿಲಾಯತಿಯಿಂದ ಹಿಂದಿರುಗಿದಳು ಅವಳು ವೈದ್ಯ ಶಾಸ್ತ್ರದಲ್ಲಿ ನಿಪುಣಳಾಗಿದ್ದಳು. ಇಲ್ಲಿಗೆ ಬಂದ ಮೇಲೆ ಅವಳು ತನ್ನ ತಂದೆ ಹಾಗು ಶಂಕರರಾಯರ ನೆರವಿನಿಂದ ಒಂದು ದೊಡ್ಡ ಊರಲ್ಲಿ ಒಂದು ಆಸ್ಪತ್ರೆಯನ್ನಿಟ್ಟು ಸ್ತ್ರೀಯರ ರೋಗ ನಿವಾರಣದ ಹೊರೆಯನ್ನು ಕೈಕೊಂಡಳು.

ಕಮಲೆಯ ತಂದೆಯಾದ ಪ್ರಭಾಕರಪಂತನ ವಿಷಯವಾಗಿ ವಲ್ಲಭರಾಯ-ಶಂಕರರಾಯರಲ್ಲಿ ಇದುವರೆಗಿದ್ದ ತಪ್ಪು ತಿಳುವಳಿಕೆಯು ಇತ್ತೀಚೆಗೆ ದೂರವಾಗಿತ್ತು. ತಮ್ಮಗಳ ತಪ್ಪು ತಿಳುವಳಿಕೆಗೆ ಕುಮುದಿನಿಯ ಮಲತಾಯಿಯಾದ ಸರಸಿಯೇ ಕಾರಣಳೆಂಬದು ಅವರಿಗೆ ತಿಳಿದು ಬಂದಲು, ಅವರು ಬಹು ಪಶ್ಚಾತ್ತಾಪಗೊಂಡರು.

ಕುಮುದಿನಿಯು ಇಲ್ಲಿ ನಡೆದ ಸಮಸ್ತ ಸಂಗತಿಯನ್ನು ಕಮಲೆಗೆ ತಿಳಿಸಿದಳು. ಅದನ್ನು ಕೇಳಿ ಅವಳು ಬಹು ಮರುಗಿದಳಲ್ಲದೆ, ತಮ್ಮ ಸಮಾಜದಲ್ಲಿ ಅಲ್ಲಲ್ಲಿ ಕಾಣುವ ಕಮಲಾಕಾಂತ-ನಿರ್ಮಲಮ್ಮನಂತಹ ಕಪಟಾದಾರ ಸಾಧು-ಶರಣಮ್ಮಗಳ ಬಗ್ಗೆ ಕಡು ದ್ವೇಷಗೊಂಡಳು; ಹಾಗು ಅಂಥ ಜನರನ್ನು ಪ್ರತಿಯೊಂದು ರೀತಿಯಿಂದ ಬೈಲಿಗೆಳೆದು, ಅವರ ನಿರ್ನಾಮಮಾಡುವ ಸತ್ಕೃತ್ಯವನ್ನು ಅವಳು ತನ್ನ ಧ್ಯೇಯವನ್ನಾಗಿಟ್ಟುಕೊಂಡಳು.

---



# ಸೂಚನೆ

"ಶ್ರೀ ಶೇಷಾಚಲ ಗ್ರಂಥಮಾಲೆ"ಯ ಈ ಕೆಳಗೆ ಬರೆದ ಪುಸ್ತಕಗಳ
ಮೈಸೂರ ಟೆಕ್ಸ್ಟಬುಕ್ಕ ಕಮೀಟಿಯವರು ತಮ್ಮ T. B. C. No 49/36-
ಮೇರೆಗೆ ಸ್ಕೂಲ ಲಾಯಬ್ರರಿಗಳಿಗೆ ರೆಕ್‌ಮೆಂಡ್ ಮಾಡಿರುತ್ತಾರೆ.

| | | |
|---|---|---|
| ೧ | ಮೋಹಿನಿ | ೧-೮-೦ |
| ೨ | ಭಯಂಕರ ಸೇಡು | ೧-೮-೦ |
| ೩ | ನರವೀರ ಕಾಸೀಮ | ೧-೪-೦ |
| ೪ | ಚೋದ್ಯಪುರದ ಚೋಜಿಗರಾಯ | ೨-೦-೦ |
| ೫ | ಸದ್ಗುಣಿ ಕಮಲಾ | ೧-೦-೦ |
| ೬ | ಆತ್ಮಬಲಿ | ೧-೦-೦ |
| ೭ | ಶೌರ್ಯ ಸಂಜೀವನ | ೦-೧೪-೦ |
| ೮ | ದೈವ ಸಂಕಲ್ಪ | ೦-೧೪-೦ |
| ೯ | ವಡಗಾವದ ವಿಜಯ | ೧-೪-೦ |
| ೧೦ | ಚಾಲುಕ್ಯರ ಅಭ್ಯುದಯ | ೦-೧೨-೦ |

ಕಾರಣ ಎಲ್ಲ ಹಾಯ-ನಾರ್ಮಲ್-ಟ್ರೇನಿಂಗ ಸ್ಕೂಲಿನವರು ಇವುಗಳ
ತರಿಸಿ ಪ್ರೋತ್ಸಾಹಿಸಬೇಕಲ್ಲದೆ, T. B. C. No 29/32-33 ಮೇರೆಗೆ

| | | |
|---|---|---|
| ೧ | ಶ್ರೀ ದಾಸಬೋಧ | ೬-೦-೦ |
| ೨ | ಸಮರ್ಥ ಪಂಚಾಯತನ | ೨-೦-೦ |
| ೩ | ತಾಯಿನಾಡು | ೧-೦-೦ |
| ೪ | ನೇತಾಜಿ | ೦-೧೦-೦ |

ಈ ಪುಸ್ತಕಗಳು ಎಲ್ಲ ಹಾಯ-ನಾರ್ಮಲ್-ಮಿಡ್ಲಸ್ಕೂಲಗಳಿಗೂ ಅನುಮೋ
ಸಲ್ಪಟ್ಟಿರುವದರಿಂದ ಎಲ್ಲ ಸ್ಕೂಲ ಲಾಬ್ರರಿಯವರೂ ತರಿಸಿಕೊಳ್ಳಬೇಕಾಗಿ ವಿನಂ

ಮ್ಯಾನೇಜರ,

1-3-1937. ಶ್ರೀ ಶೇಷಾಚಲ ಗ್ರಂಥಮಾಲಾ,

ಪೊ. ಆನಂದವನ, ಜಿ. ಧಾರವಾಡ.